ಕೃತಿಗಳಲ್ಲಿ ಪ್ರತಿಯೊಂದು ನುಡಿಗೂ ಪಲ್ಲವಿಯು ಜೀವನಾಡಿಯಾಗಿರುತ್ತದೆ. ನುಡಿಯಲ್ಲಿಯ ವಿಷಯುವನ್ನು ಪಲ್ಲವಿಯೇ ಪರಿಪೂರ್ಣ ಗೊಳಿಸುವುದು.

ಇನ್ನೊಂದು ಇದೇ ಬಗೆಯ ಚಾರಿತ್ರಿಕ ಆಭಾಸವನ್ನು ನಾವು ನೋಡ ಬಹುದು : 'ವೆಂಕಟೇಶನನ ಯಾತ್ರೆಗೆ ದಾಸರು ಪೋದಾಗ, ವೆಂಕಟೇಶ ನೆಂಬ ಶಿಷ್ಯನ ಕೂಡಿಕೊಂಡು' ಎಂಬುದೊಂದು ೧೫ ನುಡಿಗಳ ಹಾಡು. 'ಇದು ಒಪ್ಪುವ ಭೃತ್ಯನಾದ ರಘುನಾಥ ಪೇಳಿದನು' ಎಂದು ಕೊನೆಗೊಳ್ಳು ತ್ತದೆ. ಇದನ್ನು ನೋಡಿದ ಮುಗ್ಧಭಕ್ತರೊಬ್ಬರು 'ಇದು ರಘುನಾಥತೀರ್ಥ ಶ್ರೀಪಾದಂಗಳವರು, ಪುರಂದರದಾಸರ ಮಹಿಮೆಯನ್ನು ತಿರುಪತಿಯಲ್ಲಿ ಕಣ್ಣಾರೆ ಕಂಡು ರಚಿಸಿದ ಹಾಡು' ಎಂಬ ತಿಳಿವಳಿಕೆಯಿಂದ ಪ್ರಕಟಿಸಿ ಬಿಟ್ಟಿದ್ದಾರೆ ; ಪುರಂದರದಾಸರ ಮಹಿಮೆಯನ್ನು ಹೆಚ್ಚಿಸುವುದರಲ್ಲಿ, ವಾಸ್ತವ ಇತಿಹಾಸವನ್ನೂ ತಲೆಕೆಳಗೆ ಮಾಡಿಬಿಟ್ಟಿದ್ದಾರೆ. ಶ್ರೀರಘುನಾಥತೀರ್ಥರು ವೈಕುಂಠವಾಸಿಗಳಾದುದು, ಶಾ. ಶಕೆ ೧೪೨೪ ನೆಯ ಮಾರ್ಗಶೀರ್ಷ ವದ್ಯ ಪ್ರತಿಪದೆಯೆಂದು, ಉತ್ತರಾದಿಮಠದ ಪೀಳಿಗೆಯ ಚರಿತ್ರೆಯಲ್ಲಿ ಸ್ಪಷ್ಟವಾದ ಉಲ್ಲೇಖವಿದೆ. ೧೪೨೪ನೆಯ ಶಕವರ್ಷವೆಂದರೆ,೧೫೦೨ನೆಯ ಕ್ರಿಸ್ತಶಕವರ್ಷ ವಾಗುವುದು. ಆಗ ಶ್ರೀಕೃಷ್ಣದೇವರಾಯನು ಇನ್ನೂ ಸಿಂಹಾಸನವನ್ನು ಕೂಡ ಏರಿರಲಿಲ್ಲ. ಆತನು ಸಿಂಹಾಸನಾರೋಹಣಮಾಡಿದ ಮೇಲೆ, ಶ್ರೀವ್ಯಾಸರಾಯ ರನ್ನು ರಾಜಧಾನಿಗೆ ಬರಮಾಡಿಕೊಂಡ. ಆ ಮೇಲೆ ಕೆಲವು ಕಾಲ ಗತಿಸಿದ ಮೇಲೆ ಶ್ರೀಪುರಂದರದಾಸರು ಆ ಗುರುಗಳಿಂದ ವೈಷ್ಣವದೀಕ್ಷೆಯನ್ನು ಪಡೆದು ಹರಿದಾಸಕೂಟವನ್ನು ಪ್ರಾರಂಭಿಸಿದರು. ಇದೆಲ್ಲವೂ ೧೫೨೦ರ. ತರುವಾಯ ನಡೆದಿರಬಹುದೆಂದು ತೋರುವುದು. ವಾಸ್ತವಸಂಗತಿಯು ಹೀಗೆ ಇರುವಾಗ ಶ್ರೀರಘುನಾಥತೀರ್ಥರು ಪುರಂದರದಾಸರ ಪವಾಡವನ್ನು ನೋಡುವ ಬಗೆ ಹೇಗೆ? ಇನ್ನು ಅವರು ತಿರುಪತಿಯಲ್ಲಿ ಕಂಡ ಪವಾಡವಾದರೂ ಯಾವುದು? 'ಮುಯ್ಯಕ್ಕೆ ಮುಯ್ಯ ತೀರಿತು' ಎಂಬ ಹಾಡಿಗೆ ಮೂಲವಾಗಿರುವ ಪಂಢರ-ಪುರದಲ್ಲಿ ನಡೆದುದೆಂದು ಹೇಳುವ 'ಚಿನ್ನದ ಗಿಂಡಿಯಿಂದ ದೇವರನ್ನು ಟೊಣೆದ' ಪವಾಡವೆ! ಮೊದಲಿನಿಂದ ಕೊನೆಯವರೆಗೂ ಈ ಹಾಡೆಂದರೆ ಒಂದು ಸುಳ್ಳಿನ ಸಂತೆ; ಕಲ್ಪನೆಯ ಕಂತೆ. ಇಂತಹ ಹಾಡನ್ನೂ ನಾವು ಪುರಂದರದಾಸರ ಜೀವನಚರಿತ್ರೆಗೆ ಶಬ್ದಪ್ರಮಾಣವೆಂದು ಬಳಸಿಕೊಳ್ಳಬೇಕೆ?

## ೪ ಬೇರೆ ಬೇರೆ ಪುರಂದರದಾಸರು

ಶ್ರೀಪುರಂದರದಾಸರಿಗೆ ಸಂಬಂಧಿಸಿದ ಪವಾಡದ ಕಥೆಯನ್ನು ಹೆಚ್ಚಾಗಿ ಸೃಷ್ಟಿಸಿದವರೆಂದರೆ ಗುರುಪುರಂದರದಾಸರು. ನಮ್ಮ ಹರಿದಾಸ ಪರಂಪರೆಯವರು, ಇವರ ಹಾಡುಗಳಿಗೆ ಚಾರಿತ್ರಿಕ ಮಹತ್ತ್ವವನ್ನು ತುಂಬ ಕೊಡುತ್ತಾರೆ. ಏಕೆಂದರೆ, ಗುರುಪುರಂದರದಾಸರೆಂದರೆ ಶ್ರೀಪುರಂದರದಾಸರ ಒಬ್ಬ ಮಗನೆಂದು ಇವರ ಭಾವುಕಹೃದಯ ನಂಬಿಬಿಟ್ಟಿದೆ. ಹೆಚ್ಚಿನ ಯಾವ ವಿಚಾರವನ್ನೂ ಮಾಡದೆ, ನಮ್ಮ ಹರಿದಾಸಪರಂಪರೆ, ಈ ನಂಬುಗೆಗೆ ಕಟ್ಟು ಬಿದ್ದುಬಿಟ್ಟಿದೆ. ಹಸ್ತಪ್ರತಿಗಳ ನಮ್ಮ ಸಂಶೋಧನೆಯಲ್ಲಿ, ಶ್ರೀಗುರುಪುರಂದರ ದಾಸರು, ಶ್ರೀರಾಘವೇಂದ್ರ ಯತಿಗಳ ಕಾಲದಿಂದ ಈಚೆಯವರು—ಎಂದು ಗೊತ್ತಾಗಿದೆ. 'ಗುರುಪುರಂದರವಿಠಲ' ಎಂಬ ಅಂಕಿತವನ್ನೊಳಗೊಂಡ, ಶ್ರೀ ರಾಘವೇಂದ್ರಯತಿಗಳ ವಿಷಯಕವಾದ ಒಂದು ಹಾಡೂ ನಮಗೆ ಸಿಕ್ಕಿದೆ. ಈ ದಾಸರ ಹಾಡುಗಳ ಭಾಷೆಯನ್ನು ನೋಡಿದರೆ, ಶ್ರೀ ಜಗನ್ನಾಥದಾಸರ ತರುವಾಯದವರು ಇವರಿರಬಹುದು — ಎಂದು ಭಾವಿಸುವಂತಿದೆ. ಶ್ರೀಪುರಂದರದಾಸರ ಒಬ್ಬ ಮಗನೆ ಇವರಾಗಿದ್ದರೆ, ಇವರ ಹಾಡುಗಳ ಭಾಷೆ ಇನ್ನೂ ಪರಿಶುದ್ಧವಾಗಿರಬೇಕಾಗಿತ್ತು. ಛಂದೋಲಯವು ಇನ್ನೂ ಹೆಚ್ಚು ಸಂಗೀತ ಪ್ರಧಾನವಾಗಬೇಕಾಗಿದ್ದಿತು. ಕರ್ನಾಟಕ ಸಂಗೀತ ಪಿತಾಮಹರ ಮಗನಿಗೆ ಸಂಗೀತದ ಮುಖಪರಿಚಯವೂ ಇರಬಾರದೆಂದರೆ, ಅದೊಂದು ಆಶ್ಚರ್ಯದ ಮಾತೆನಿಸದೆ ?

ಬೇರೆ ಬೇರೆ ವಿಶೇಷಣಗಳನ್ನು ಅಂಟಿಸಿಕೊಂಡ 'ಪುರಂದರ ವಿಠಲ' ಮುದ್ರಿಕೆಯ ಹಾಡುಗಳು, ಸಂಶೋಧಕರನ್ನು ತುಂಬ ಗೊಂದಲದಲ್ಲಿ ಕೆಡಹುವುವು. ಮುಖ್ಯಪ್ರಾಸದ ನಿಯಮಪಾಲನೆಗಾಗಿ ಪುರಂದರದಾಸರು, ತಮ್ಮ ಅಂಕಿತದ ಹಿಂದೆ ಕೆಲವು ವಿಶೇಷಣ ಪದಗಳನ್ನು ಬಳಸಿರಲೂಬಹುದಾಗಿದೆ. ಉದಾಹರಣೆಗಾಗಿ: 'ಶ್ರೀಪುರಂದರ' 'ಸಿರಿ ಪುರಂದರ' 'ವರದ ಪುರಂದರ' 'ಕರ್ತೃ ಪುರಂದರ' 'ತಂದೆ ಪುರಂದರ' ಇತ್ಯಾದಿ. ಆದರೆ ಇವೇ ಅಂಕಿತವನ್ನೊಳಗೊಂಡ ಕೆಲವೊಂದು ಕೃತಿಗಳು, ತಮ್ಮ ಅವಲಕ್ಷಣಗಳ ಮೂಲಕ, ಪುರಂದರದಾಸರವೆಂದು ಎನಿಸಲೇ ಇಲ್ಲ. ಅವು ಶ್ರೀಪುರಂದರ ದಾಸರ ಕೃತಿಗಳ ಅಣಕಗಳಂತೆ ಕಾಣುವುವೇ ಹೊರತು, ಮೂಲಕೃತಿಗಳ

ಯಾವ ಗುಣಗಳೂ ಅವುಗಳಲ್ಲಿ ಇರುವುದಿಲ್ಲ.

'ತಂದೆ ಪುರಂದರವಿಠಲ', 'ಗುರುತಂದೆಪುರಂದರವಿಠಲ' ಎಂಬಿಬ್ಬರ ಶೋಧವು ಮಾತ್ರ ನಮಗೆ ಸಿಕ್ಕಿತು. ಕಳೆದ ಶತಮಾನದ ಕೊನೆಯ ದಶಮಾನದಲ್ಲಿ, ಆಂಧ್ರದೇಶದಲ್ಲಿ ಬದುಕಿಬಾಳಿದವರು ತಂದೆ ಪುರಂದರದಾಸರು. ಇವರ ಲೌಕಿಕನಾಮ ಶ್ಯಾಮರಾಯರೆಂದು. ಇವರು ರಚಿಸಿದ ಕೆಲವು ಹಾಡುಗಳನ್ನು, ಇವರ ಶಿಷ್ಯರಾದ 'ಗುರುತಂದೆ ಪುರಂದರದಾಸರು' ಸಂಗ್ರಹಿಸಿ, ದೇವನಾಗರೀ ಲಿಪಿಯಲ್ಲಿ ಪ್ರಕಟಿಸಿದ್ದಾರೆ. ತೀರ ಸಾಮಾನ್ಯರಚನೆ, ಭಾವದಾರಿದ್ರ್ಯವಂತೂ ಸಾಕಷ್ಟಿದೆ. ಶ್ರೀಕೃಷ್ಣ-ಗೋಪಿಯರ ಶೃಂಗಾರಲೀಲೆಯನ್ನು ಹೇಳುವ ಇವರ ಹಾಡುಗಳು, ಅಶ್ಲೀಲತೆಯ ಮೇರೆಯನ್ನು ಮೀರಿ ನಿಂತಿವೆ. ಇವೆಲ್ಲ ಹಾಡುಗಳೂ ಮೂಲ ಶ್ರೀಪುರಂದರದಾಸರವೇ ಎಂದು, ಒಂದೆರಡು ಸಂಕಲನಗಳಲ್ಲಿ ಪ್ರಸಿದ್ಧವಾದುದೂ ಉಂಟು. ಹೀಗೆಯೆ 'ಸಿರಿಪುರಂದರ', 'ವರದಪುರಂದರ', 'ಕರ್ತೃಪುರಂದರ', 'ಶ್ರೀಶಪುರಂದರ' ಮೊದಲಾದ ಅಂಕಿತಗಳು, ನಮ್ಮ ಸಂಶೋಧನೆಯ ಕಾರ್ಯದಲ್ಲಿ ಸಂದೇಹವನ್ನು ತಂದೊಡ್ಡದೆ ಬಿಟ್ಟಿಲ್ಲ. ಗುರುಪುರಂದರದಾಸರು ಸೃಷ್ಟಿಸಿದ ಪವಾಡಗಳೆಲ್ಲ ಸಂಸ್ಕೃತ 'ಪುರಂದರದಾಸಮಾಹಾತ್ಮ್ಯ'ದಲ್ಲಿ ಒಳಗೊಂಡಿರುವುದು, ನಮಗೊಂದು ವೈಶಿಷ್ಟ್ಯಪೂರ್ಣ ಘಟನೆಯಾಗಿ ಕಂಡಿತು.

'ಗುರುಮಧ್ವಪತಿ ವಿಠಲ' ಎಂಬ ಅಂಕಿತದಿಂದ ಬರೆದ— ಶ್ರೀಪುರಂದರ ದಾಸರಿಗೆ ಸಂಬಂಧಿಸಿದ ಒಂದೆರಡು ಹಾಡುಗಳಿವೆ. ಈ ಅಂಕಿತವು ಶ್ರೀಪುರಂದರದಾಸರ ಚಿಕ್ಕ ಮಗನಾದ ಮಧ್ವಪತಿದಾಸನದೆಂಬ ನಂಬುಗೆ ನಮ್ಮ ಹರಿದಾಸಪರಂಪರೆಯಲ್ಲಿ ಇದೆ. 'ಕಂದಗ್ಹೇಳಿದರು ಪುರಂದರ ದಾಸರು, ತಂದೆ ಹನುಮಗೆ ನೈವೇದ್ಯವನಿಂದು ಕೊಟ್ಟು ಬಾರೆಂದು' ಎಂಬ ಗುರುಮಧ್ವಪತಿದಾಸರ ಪದದಲ್ಲಿ, ಯಂತ್ರೋದ್ಧಾರ ಹನುಮಂತದೇವರು, ಶ್ರೀದಾಸರ ಮಗನು ತಂದ ನೈವೇದ್ಯದ ಅನ್ನವನ್ನುಂಡ ಭಾವುಕ ಕಥೆಯು ಅಡಕವಾಗಿದೆ. ವೀರಶೈವ ಪುರಾತನರ ಕಥೆಗಳಲ್ಲಿ ಕಾಣುವ ಕೋಳೂರು ಕೊಡಗೂಸಿನ ವಿಷಯವನ್ನು ಈ ಪದದಲ್ಲಿಯ ವಿಷಯ ನೆನಪಿಗೆ ತಂದುಕೊಡುತ್ತದೆ. ಕೋಳೂರು ಕೊಡಗೂಸಿನ ಪವಾಡವನ್ನು ನಂಬುವಂತಹ ಮನೋವೃತ್ತಿಯ ಜನರು, ಪುರಂದರದಾಸರ ಮಗನ ಪವಾಡವನ್ನೂ ನಂಬುವರು. ಈ ಹಾಡಿ

ನಲ್ಲಿ ಶ್ರೀದಾಸರ ಜೀವನಕ್ಕೆ ಸಂಬಂಧಿಸಿದ ಇನ್ನಾವ ಸಂಗತಿಗಳೂ ಇಲ್ಲ. 'ತೆರಳಿದರು ಹರಿಪುರಕೆಂದು ಪುರಂದರದಾಸರು ದೀನಬಂಧು' ಎಂಬ ಇನ್ನೊಂದು ಹಾಡಿನಲ್ಲಿ, ಶ್ರೀದಾಸರ ನಿರ್ಯಾಣವನ್ನು ಕುರಿತು ಹೇಳಿದ ಕೆಲವು ವಾಸ್ತವ ವಿವರಣೆಗಳಿವೆ:

"ರಕ್ತಾಕ್ಷಿವತ್ಸರ ಪುಷ್ಯಾಂತ ರವಿವಾರ
ಮುಕ್ತಿಯೈದಿದರು ಕೇಳಿ ಬುಧಜನರು ‖ ೧ ‖

ವಿರೂಪಾಕ್ಷ ಕ್ಷೇತ್ರದಿ ವಿಠಲನ ಸನ್ನಿಧಿಯಲಿ
ಶರೀರವನು ಇರಿಸಿ ಅನಾಥರನು ಹರಸಿ ‖ ೨ ‖

ಎತ್ತುವರಾರತಿ ಪುಷ್ಪಕವೇರಿಸಿ
ಸತ್ತಿಗೆ ಮೆರೆಯೆ ದುಂದುಭಿಗಳು ಮೊರೆಯೆ ‖ ೩ ‖

ಆ ಮಹಾವೈಕುಂಠವೈದುವರಿಗೆ ಹರಿ-
ನಾಮದ ಸೋಪಾನ ದಯದಿಂದ ತೋರಿ ‖ ೪ ‖

ವರವೇದತುಲ್ಯ ಪದಗಳನಸಂಖ್ಯೆಯ ಮಾಡಿ
ಗುರುಮಧ್ವಪತಿ ವಿಠಲನ ಸ್ಮರಿಸುತಲಿ ‖ ೫ ‖

ಭಾಷೆ-ಸಂಗೀತಗುಣಗಳನ್ನು ನೋಡಿದರೆ, ಈ ಹಾಡುಗಳ ಕರ್ತೃ ಪುರಂದರದಾಸರ ಸಾಕ್ಷಾತ್‌ಪುತ್ರರಾದ ಮಧ್ವಪತಿದಾಸರೆಂದು ಎನಿಸುವುದಿಲ್ಲ. ಸುಮಾರು ೧೮-೧೯ ನೆಯ ಶತಮಾನದ ಒಬ್ಬ ದಾಸರಿಂದ ರಚಿತವಾಗಿರಬಹುದೆಂದು ಎನಿಸುತ್ತದೆ.

ಪುರಂದರದಾಸರ ಸಮಕಾಲೀನ ವ್ಯಕ್ತಿಗಳೆಂದು ನಂಬುಗೆಯಿರುವ ಈ ಎಲ್ಲ ಪವಾಡಪದ್ಯರಚನಾಕಾರರೂ, ಪುರಂದರದಾಸರನ್ನು ಕಂಡವರಲ್ಲವೆಂದು ತೋರುತ್ತದೆ. ಇವರೆಲ್ಲರೂ ವಿಜಯದಾಸರ ತರುವಾಯದವರೇ ಆಗಿರಬೇಕೆಂದು ಕಾರ್ಯಕಾರಣವಾದಿಯಾದ ಯಾವ ವಿಮರ್ಶಕನೂ ಹೇಳಬಹುದಾಗಿದೆ.

ಶ್ರೀಪುರಂದರದಾಸರಾಯರ ವೈಕುಂಠಾರೋಹಣದ ತರುವಾಯ, ಮುಂದೆ ತೀರ ಸ್ವಲ್ಪದಿನಗಳಲ್ಲಿಯೇ, ವಿಜಯನಗರ ಸಾಮ್ರಾಜ್ಯದ ಮೇಲೆ ಕಾಲರಾಯ ಕೊಡಲಿಯೇಟನ್ನು ಹಾಕಿದಂತೆ ತಾಳಿಕೋಟೆಯ ಯುದ್ಧದಲ್ಲಿ ಒದಗಿದ ಅಪಜಯ (ಅಳಿಯ) ರಾಮರಾಜನ ಸೋಲು-ಸಾವುಗಳಿಂದ,

ವಿಜಯನಗರ ರಾಜಧಾನಿಯು ಪ್ರಳಯಕ್ಕೆ ತುತ್ತಾಯಿತು. ಈ ಕ್ರಾಂತಿಕಾಲದಲ್ಲಿ ಪ್ರಾಣ-ಮಾನಗಳನ್ನು ಉಳಿಸಿಕೊಳ್ಳುವುದೇ ಎಲ್ಲರಿಗೂ ದುಸ್ತರವೆನಿಸಿದಾಗ, ಧರ್ಮ-ಸಂಸ್ಕೃತಿ-ಕಲೆ-ವಿದ್ಯೆಗಳ ನೆನಪು ಯಾರಿಗೆ ಆಗಬೇಕು? ಮುಂದೆ ನೂರಾರು ವರ್ಷಗಳ ವರೆಗ ಹರಿದಾಸಕೂಟ ಎಲ್ಲಿ—ಹೇಗೆ—ಯಾರಿಂದ–ಜೀವಹಿಡಿದುಕೊಂಡು ಇದ್ದಿತೆಂಬುದನ್ನು ತಿಳಿಸಿಕೊಡುವಂತಹ ಐತಿಹಾಸಿಕ ಪ್ರಮಾಣಗಳಾವುವೂ ಸಿಕ್ಕುವುದಿಲ್ಲ, ಪುರಂದರದಾಸರ ತರುವಾಯ ನಂತರ, ಅವರ ಮಕ್ಕಳು–ಮೊಮ್ಮಕ್ಕಳು ಎಲ್ಲಿ— ಹೇಗೆ ಬದುಕಿದ್ದರೆಂಬುದು ಹರಿದಾಸಪರಂಪರೆಯವರಿಗೂ ಗೊತ್ತಿಲ್ಲ; ಐತಿಹಾಸಿಕ ಆಧಾರಗಳೂ ಸಿಕ್ಕುವುದಿಲ್ಲ, ಪುರಂದರದಾಸರಿಗೆ ಮೂರುಜನ ಮಕ್ಕಳಿದ್ದರೆಂಬುದು ಐತಿಹಾಸಿಕ ಸತ್ಯವಾಗಿರುವಾಗ, ಅವರ ಪೀಳಿಗೆ ಎಂದು—ಹೇಗೆ— ನಿಂತು ಹೋಯಿತೋ ಎಂಬುದು ತಿಳಿಯದಿರುವುದು ಆಶ್ಚರ್ಯ–ವಿಷಾದಗಳ ಸಂಗತಿಯಾಗಿದೆ. ಪುರಂದರದಾಸರ ಸಂತಾನ ಮುಂದುವರೆದು ಇದು-ವರೆಗೂ ನಡೆದುಕೊಂಡು ಬಂದಿದ್ದರೆ, ಶ್ರೀದಾಸರಂತಹ ಅದ್ವಿತೀಯ, ಲೋಕವಿಖ್ಯಾತ ಪುರುಷರನ್ನು ಅದು ಎಂದೂ ಮರೆಯುತ್ತಿರಲಿಲ್ಲ; ಪುರಂದರದಾಸರು ತಮ್ಮ ಪೂರ್ವಜರೆಂದು ಅಭಿಮಾನದಿಂದ ಅದು ಹೇಳಿಕೊಳ್ಳಬಹುದಾಗಿತ್ತು. ಆದರೆ ಹಾಗೆ ಹೇಳಿಕೊಳ್ಳುವವರು ಈಗ ಯಾರೂ ಇಲ್ಲ. ೧೭-೧೮ನೆಯ ಶತಮಾನದಲ್ಲಿಯೂ ಅಂತಹರು ಯಾರೂ ಇರಲಿಲ್ಲವೆಂದು ಹೇಳಬಹುದು. ಏಕೆಂದರೆ ಪುರಂದರದಾಸರನ್ನೇ ಪ್ರಾಸಾದಿಕಗುರುಗಳನ್ನಾಗಿ ಒಪ್ಪಿಕೊಂಡ ಶ್ರೀವಿಜಯದಾಸರು, ಈ ವಿಷಯವನ್ನು ಹೇಳಿಲ್ಲವಷ್ಟೇ ಅಲ್ಲ; ಪುರಂದರದಾಸರ ಕಿರಿಯಮಗ ಮಧ್ವಪತಿಯ ಅವತಾರವೇ ವಿಜಯದಾ-ಸರು— ಎಂಬ ನಂಬುಗೆ ಹರಿದಾಸಪರಂಪರೆಯಲ್ಲಿ ನಡೆದುಬಂದಿದೆ. ಕನಕದಾಸರಚಿತವೆಂದು ಪ್ರಕಟವಾಗಿರುವ ಉಗಾಭೋಗವೊಂದರಲ್ಲಿ ಈ ಮಾತು ಬಂದಿದೆ:

"ವ್ಯಾಸರಾಯರಿಗೆ ಮೂರು ಜನ್ಮ ದಾಸರಿಗೆ ಎರಡು ಜನ್ಮ।
ಶ್ರೀವ್ಯಾಸರಾಯರೇ ರಾಘವೇಂದ್ರರಾಯರು
ರಾಮಚಂದ್ರನ ಆಶ್ರಿತ ಜನಕೋಟಿಯೊಳಗೆ
[illegible]ರಾದವರು !

ನಾರದರ ಅಂಶವೇ ಪುರಂದರದಾಸರು।
ತಮ್ಮ ಕೂಸಾದ ಭೃಗುಮುನಿಯಲ್ಲಿ ತಾವು ಒಂದಂಶದಿ ನಿಂತು
ವಿಜಯದಾಸರೆಂದು ಹೆಸರ ಪಡೆವರು।
ನಾ ಯಮನು ಮುಂದೆ ಮಾಂಡವ್ಯಶಾಪದಿಂದ
ಎರಡು ಜನ್ಮ ಶೂದ್ರಯೋನಿಯಲ್ಲಿ ಪೊಕ್ಕೆನಲಾ......?

ಇದು ಕನಕದಾಸರ ಕೃತಿಯೆಂದು ತೋರುವುದೇ? (ಅವರು ಉಗಾಭೋಗಗಳನ್ನು ರಚಿಸಿಯೇ ಇಲ್ಲ.) ಇದರ ಕೊನೆಯಲ್ಲಿ 'ದಾಸಜನರ ಪೋಷಕ ಕಾಗಿನೆಲೆಯಾದಿ ಕೇಶವರಾಯ ದಾಸೋತ್ತಮರ ಗುಣವ ಕನಕದಾಸ ಪೇಳಿದನು,' ಎಂದಿದೆ. ಇದೂ ಒಂದು ಹರಿಕಥೆಯ ದಾಸರೊಬ್ಬರ ರಚನೆಯಂತೆ ಕಾಣುವುದು. ಇಷ್ಟೇ: ಈ ಪದ್ಯ 'ವಿಜಯದಾಸರು ಮಧ್ವಪತಿಯ ಅವತಾರ' ಎಂದು ತಿಳಿಯುವ ನಮ್ಮ ಹರಿದಾಸ ಪರಂಪರೆಯ ಭಾವನೆಗೆ ಪ್ರಮಾಣವಾಗಿದೆ.

## ೫ ವಿಜಯದಾಸರಿಂದ ಪುರಂದರದಾಸರ ಜೀವನವಿಚಾರ

'ವಿಜಯವಿಟ್ಠಲ' ಎಂಬ ಅಂಕಿತವನ್ನು ಪುರಂದರದಾಸರ ಅನುಗ್ರಹದಿಂದ ಪಡೆದೆನೆಂದು ಹೇಳಿದ ಚೀಕಲಪರಿವೆಯ ದಾಸಪ್ಪನವರು, ಕ್ರಿ. ಶ. ೧೬೮೭ ರಿಂದ ೧೭೫೫ ರ ವರೆಗೆ ಕನ್ನಡನಾಡಿನಲ್ಲಿ ಬದುಕಿದವರು. ಶ್ರೀ ಪುರಂದರದಾಸರ ಜೀವನವಿಚಾರವನ್ನು ನಾಡಿಗೆ ಮೊದಲು ತಿಳುಹಿದ ದಾಸರೆಂದರೆ ಇವರೇ ಎಂದು ಹೇಳಬಹುದು. ಪುರಂದರದಾಸರು ಗತಿಸಿದ ಮೇಲೆ ಸುಮಾರು ೧೨೨ ವರ್ಷಗಳ ತರುವಾಯ ಇವರು ಜನಿಸಿದವರು, ೯೦ ವರ್ಷಗಳ ಬಳಿಕ ವೈಕುಂಠಯಾತ್ರೆ ಮಾಡಿದವರು. ಇಷ್ಟು ಅವಧಿಯ ವರೆಗೆಂದರೆ, ಶ್ರೀಪುರಂದರದಾಸರ ವಾಸ್ತವಜೀವನದ ಮೇಲೆ, ಸಾಕಷ್ಟು ದಟ್ಟವಾದ ಮರೆವಿನ ತೆರೆ ಮುಸುಕಿರಬಹುದಾಗಿದೆ. ವಿಜಯದಾಸರು ಹೇಳುವ ಪುರಂದರದಾಸರ ಜೀವನಚರಿತ್ರೆ, ಅವರಿಗೆ ಯಾವ ಅಜ್ಞಾತ ಪರಂಪರೆಯಿಂದ ದೊರೆಯಿತೋ ಏನೋ! ದಾಸರ ಜೀವನಕ್ಕೆ ಸಂಬಂಧಿಸಿದ ಅನೇಕ ಹಾಡು-ಸುಳಾದಿಗಳನ್ನು ಇವರು ರಚಿಸಿದ್ದಾರೆ. ಇವೆಲ್ಲ ದಾಸರ ದಿವ್ಯಮಹಿಮೆ (ಪವಾಡ)ಗಳಿಂದಲೇ ಹೆಚ್ಚಾಗಿ ತುಂಬಿರುವುವು. ಇವರ ಸಮಕಾಲೀನರೇ ಆದ ಕಾಖಂಡಿಕೆಯ ಶ್ರೀಪ್ರಸನ್ನ ವೆಂಕಟದಾಸರು ರಚಿಸಿದ ಪುರಂದರದಾಸರನ್ನು ಕುರಿತ ೧೦೦ ಹಾಡು ಪ್ರಚಾರದಲ್ಲಿದೆ. ಈ ಹಾಡಿನಲ್ಲಿ ದಾಸರ ನಿಜವಾದ

ವ್ಯಕ್ತಿತ್ವವರ್ಣನೆ ಮಾತ್ರ ಇದೆಯಲ್ಲದೆ, ವಿಜಯದಾಸರು ಹೇಳುವಂತಹ ಜೀವನಚರಿತ್ರೆಯ ಸುಳಿವು ಎಲ್ಲಿಯೂ ಕಂಡುಬರುವುದಿಲ್ಲ. ಆ ಹಾಡನ್ನು ಅವಲೋಕಿಸಬಹುದು :

" ತಂದೆ ಪುರಂದರದಾಸರ ಸ್ಮರಿಸುವೆ— ಎನ್ನ
ಮಂದಮತಿಗಳ ಕಳೆದು ಹರಿಭಟನೆನಿಸುವ ॥ ಪಲ್ಲವಿ ॥
ಗುರುವ್ಯಾಸರಾಯರ ಚರಣಾಬ್ಜಷಟ್‌ಚರಣ।
ವಿರತಿ-ಭಕುತಿ-ಜ್ಞಾನಾರ್ಣವನ ॥
ವರಉಪನಿಷದ್ ವಾರಿಧಿಗೆ ತಿಮಿಂಗಿಲನಹನ।
ಧರೆಯ ಕವಿಕುಲ ಶಿಖಾಮಣಿಯೆನಿಪನ ॥ ೧ ॥

ದಿನ ದಿನ ದ್ರವ್ಯಾರ್ಥಿಲಾಭದಲಿ ತುಷ್ಟನ।
ಕನಕ ಲೋಷ್ಟ ಸಮಾನ ನಿರೀಕ್ಷಿಸುವವನ ॥
ಘನಸಿದ್ಧಿಗಳು ತಾವು ಬರಲೊಡಂಬಡದೆ ಹರಿ-।
ಗುಣಕೀರ್ತನೆಯಲಿ ಪರವಶನಾಗಿಹನ ॥ ೨ ॥

ಭವಜಲಧಿ ಗೋಷ್ಪದಕೆ ಸರಿಮಾಡಿ ಕಾಮ-ಕ್ರೋ-।
ಧವ ಮೆಟ್ಟಿ ಭಕ್ತಿಸುಧೆಯುಂಡು ತೇಗಿ ॥
ಭುವಿಯೊಳು ನಿಜಕೀರ್ತಿ ಹರಹಿ ಪವನಮತ-।
ದವರೆನಿಪ ದಾಸರಿಗೆ ತವರೂಪ ತೋರಿದನ ॥ ೩ ॥

ಕವನೋಕ್ತಿ ಮಳೆಗರೆದು ಹರಿದಾಸರವರ್ಗಳಿಗೆ।
ಅವಿರಳಾನಂದ ವಿತರ್ಥಿಸುವರ ॥
ನವಭಕುತಿಯನು ಕಂಡು ಸವೆಯದಾನಂದಪುರ ಪ-।
ಥವನು ತೋರಿಸಿದಂಥ ಬಹುಕೃಪಾಕರನ ॥ ೪ ॥

ಗೀತ ಠಾಯ ಸುಳಾದ್ಯುಗಾಭೋಗ ಪದ ಪದ್ಯ-।
ವ್ರಾತ ಪ್ರಬಂಧ ರಚಿಸಿ ವಿಟ್ಠಲನ ॥
ಪ್ರೀತಿ ಪಡಿಸಿ ಪ್ರತ್ಯಕ್ಷ ಕಂಡು ನಲಿವ ವೈಷ್ಣವಾಗ್ರ-
ನಾಥ ಪ್ರಸನ್ವೆಂಕಟ ಕೃಷ್ಣಪ್ರಿಯನ ॥ ೫ ॥

ಈ ಹಾಡಿನಲ್ಲಿ ರೇಖಿತರಾಗಿರುವ ಪುರಂದರದಾಸರು, ಎಂತಹ ಲೌಕಿಕವಾದಿಗಳಿಗೂ ಅಸ್ವಾಭಾವಿಕ ವ್ಯಕ್ತಿಯಾಗಿ ಕಾಣುವುದಿಲ್ಲ. ವಿಜಯದಾಸರ ಸಮಕಾಲೀನರಿವರಾದರೂ, ಪರಂಪರೆಯ ಪವಾಡಗಳನ್ನು ಈ ದಾಸರು ಪ[illegible]ದನ್ನೂ,

ಭಕ್ತಿ-ಜ್ಞಾನ-ವೈರಾಗ್ಯಸಿದ್ಧರೆಂಬುದನ್ನೂ ವಿವಿಧರೀತಿಯ ಭಕ್ತಿಕೃತಿಗಳನ್ನು ರಚಿಸಿ ದೇವರನ್ನು ಒಲಿಸಿಕೊಂಡವರೆಂಬುದನ್ನೂ ಸಾಮಾನ್ಯ ಕಾವ್ಯಾಲಂಕಾರದ ಭಾಷೆಯಲ್ಲಿ ಹೇಳಿದ್ದಾರಿಷ್ಟೆ! ಪುರಂದರದಾಸರ ಪೂರ್ವಾಪರ ಜೀವನಕ್ಕೆ ಸಂಬಂಧಿಸಿದ ಯಾವ ಮಾತುಗಳನ್ನೂ ಇವರು ಹೇಳಿಲ್ಲ. ವಿಜಯದಾಸರಿಗೆ ಗೊತ್ತಿದ್ದ ವಿಷಯಗಳು, ಅವರ ಸಮಕಾಲೀನರೇ ಆದ ಇವರಿಗೆ ಗೊತ್ತಿರಲಿಲ್ಲವೇ?

ಹರಿದಾಸಸಾಹಿತ್ಯಸಂಪಾದನೆಯ ಕಾರ್ಯದಲ್ಲಿ ದುಡಿದು ದುಡಿದು ಹಣ್ಣಾದ ಸನ್ಮಾನ್ಯ ಗೊರಾಬಾಳ ಹನುಮಂತರಾಯರು, ಶ್ರೀವಿಜಯದಾಸರಿಂದ ರಚಿತವಾದ ಶ್ರೀಪುರಂದರದಾಸರಿಗೆ ಸಂಬಂಧಿಸಿದ, ಬೇರೆ ಬೇರೆ ೨೨ ಹಾಡು-ಸುಳಾದಿಗಳನ್ನು ಸಂಗ್ರಹಿಸಿ ಒಂದೆ ಎಡೆಯಲ್ಲಿ ನಮಗೆ ನೋಡಲು ದೊರೆಯುವಂತೆ ಉಪಕಾರಮಾಡಿದ್ದಾರೆ. ಇವೆಲ್ಲ ಹಾಡು-ಸುಳಾದಿಗಳನ್ನು, ತಮ್ಮ ಪ್ರಾಸಾದಿಕ ದೀಕ್ಷಾಗುರುಗಳಾದ ಶ್ರೀಪುರಂದರದಾಸರ ವಿಷಯಕವಾದ ಉತ್ಕಟ ಭಕ್ತಿ-ಶ್ರದ್ಧೆಗಳಿಂದ—ವಿಜಯದಾಸರು ರಚಿಸಿದ್ದಾರೆಂಬುದು, ಇವುಗಳನ್ನು ನೋಡಿದವರಿಗೆ ಗೋಚರವಾಗದಿರದು. ಈ ಹಾಡು-ಸುಳಾದಿಗಳಲ್ಲಿ —ಅಲ್ಲಲ್ಲಿ— ಪುರಂದರದಾಸರ ಜೀವನಚರಿತ್ರೆಯ ಮಾತುಗಳು ಬಂದಿರುವುವು.

ಸನ್ಮಾನ್ಯ ಗೊರಾಬಾಳ ಹನುಮಂತರಾಯರು, ತಮಗೆ ದೊರೆತ ಹಾಡು-ಸುಳಾದಿಗಳನ್ನು, ದೊರೆತ ರೂಪದಲ್ಲಿಯೆ ಸಂಪಾದಿಸಿ ಪ್ರಕಟಿಸಿರುವರೆಂದು ತೋರುವುದು; ಏಕೆಂದರೆ, ಜನಸಾಮಾನ್ಯರ ಬಾಯಲ್ಲಿ ವಿಕಾರಗೊಂಡ ಶಬ್ದಪ್ರಯೋಗಗಳೂ, ಛಂದೋದೋಷಗಳೂ ಈ ಸಂಪಾದಿತ ಕೃತಿಗಳಲ್ಲಿ ಸಾಕಷ್ಟು ಸೇರಿಕೊಂಡಿವೆ. ಶ್ರೀವಿಜಯದಾಸರ ಮೂಲರಚನೆಗಳಲ್ಲಿ ಈ ಬಗೆಯ ಅಪಭ್ರಂಶಗಳು ಇರಲಾರವು. ಇಲ್ಲಿಯ ಮೊದಲನೆಯ ಪದ್ಯವಾದ 'ಬಂಪದುರಿತ ವಿನಾಶನ' ಎಂಬ ಪದ್ಯದ ಬಹುಭಾಗವನ್ನು ನೋಡಿದರೆ, ಇವರ ನುಡಿಗಳೆಲ್ಲ ವಾರ್ಧಿಕಷಟ್ಪದಿಯ ರೂಪದಲ್ಲಿ ರಚಿತವಾಗಿವೆಯೆಂದು ತೋರುವುದು. ಈ ನುಡಿಗಳಲ್ಲಿ, ನಾರದರು ಪುರಂದರದಾಸರಾಗಿ ಹುಟ್ಟಬೇಕಾದ ಕಾರಣದ ಪೌರಾಣಿಕ ಸಂದರ್ಭದಿಂದ ಮೊದಲಾಗಿ, 'ಪುರಂದರವೆಂಬ ನಗರಿಯಲಿ ಜನಿತರಾದ' ವಿಷಯವೂ, ಅವರು ದೊಡ್ಡಪ

ರಾಗಿ 'ಕೆಲವು ದಿನ ಸಂಸಾರವೃತ್ತಿಯಲಿ ಚರಿಸಿದರು' ಎಂದೂ, ಬಳಿಕ ಅದನ್ನು 'ಜರಿದು ವೈರಾಗ್ಯವನ್ನು ತೊಟ್ಟು ದೃಢಮನಸಿನಲಿ ತರುಣಿ-ಮಕ್ಕಳು ಸಹಿತ ಸೇರಿದರು ಕಿಷ್ಕಿಂಧ ವರತಂಗ ಪಂಪದಲ್ಲಿ ?' ಎಂಬ ಕಥೆಯೂ ಬಂದಿರುವುದು. ಮುಂದೆ ೫ ನೆಯ ನುಡಿಯು ಹೀಗಿದೆ:

" ವಾಸವನೆ ಮಾಡಿದರು ಪ್ರಹ್ಲಾದನವತಾರ
ವ್ಯಾಸರಾಯರ ಬಳಿಯೆ ಮುದ್ರೆ ಗುರುಮಂತ್ರ ಉಪ—
ದೇಶವನು ಕೊಂಡು ವೈಷ್ಣವರಾಗಿ ಪುರಂದರ
ದಾಸರೆಂಬುವ ಪೆಸರಲಿ ॥

ದೇಶವನೆ ತಿರುಗಿ ಪುಣ್ಯಕ್ಷೇತ್ರಗಳ ಮೆಟ್ಟಿ
ಲೇಸಾಗಿ ಅಲ್ಲಿದ್ದ ಮಹಿಮೆಗಳ ಪೇಳಿ— ದು—
ರಾಶೆಯನು ತೊರೆದು ವಿಟ್ಠಲನ ಸನ್ನಿಧಿಯಲ್ಲಿ
ವಾಸವಾದರು ಧರ್ಮನಡತೆಯಲ್ಲಿ ॥

ಶ್ರೀಹರಿಯು ಹಿಂದೆ ನಾರದರಿಗೆ ಕೊಟ್ಟ ವಚನದಂತೆ 'ಇಂದಿರಾಪತಿ ದಯದಿಂದ ಒಲಿದು ಇವರ ಮುಂದೆ ಒಂದರಗಳಿಗೆ ತೊಲಗದಲೆ ಕುಣಿ ಕುಣಿದು ಆನಂದವನೆ ತೋರುತ' ಇದ್ದ ವಿಷಯ ೬ ನೆಯ ನುಡಿಯಲ್ಲಿದೆ. ೭ ನೆಯ ನುಡಿಯಲ್ಲಿ 'ಅವರಿಂದ ವಚನಗಳು ಎಲ್ಲ ವೇದಾರ್ಥಾಗಿ ಅವನಿ-ಯೊಳು ತುಂಬಿಹವು' ಎಂಬುದನ್ನು ಹೇಳಿ, ಅವುಗಳ ಮಹಿಮೆಯೆಂತಹ ದೆಂಬುದನ್ನು ಹೇಳಲಾಗಿದೆ. ೮ ನೆಯ ನುಡಿಯಲ್ಲಿ ಇವರ ಯಾಯಿವಾರದ ವಿಷಯವನ್ನೂ, ಅದರಿಂದ ದೊರೆತುದರಲ್ಲಿಯೆ 'ವಿಪ್ರರಿಗೆ ವ್ಯಾಪ್ತಾನ ಅಪರಿಮಿತವಾಗಿ' ಮಾಡಿಸುವುದನ್ನೂ ಹೇಳಿ, ತಪಸ್ವಿ-ಮುನಿಗಳೆಲ್ಲ ಇದ ರಿಂದ ಪುನೀತರಾಗುವರೆಂಬ ಸಂಗತಿಯನ್ನು ವಿವರಿಸಲಾಗಿದೆ. ಕೊನೆಯ ದಾದ ೯ ನೆಯ ನುಡಿಯು ಹೀಗಿದೆ:

" ಏನು ಇದು ಎಂದು ದೂಷಿಸದಿರಿ ದಾಸರಾ
ಸೂನು ಪೇಳಿದನು ಗುರು ವ್ಯಾಸಮುನಿರಾಯರಿಗೆ
ಆ ನಾರದರೆ ಪುರಂದರದಾಸರೆಂತೆಂಬ
ಈ ನುಡಿಯ ಸಿದ್ಧಾಂತವ ॥

ಧ್ಯಾನದಲಿ ತಿಳಿದು ಸುಜ್ಞಾನಿಗಳ ಪದನಖದ
ರೇಣು ನಾನಾಗಿ ಬಿನ್ನಯಿಸಿದೆನು ಜ್ಞಾನಮಯ
ಆನಂದ ವಿಜಯವಿಟ್ಠಲನ ಪಾದಾಂಬುಜವ
ಕಾಣುವ ಜನರು ಲಾಲಿಸಿ ॥

ಈ ಕೃತಿಯಲ್ಲಿ, ವಿಜಯದಾಸರ ಪರಂಪರೆಯ ಜೀವನಚರಿತ್ರೆಯ ಒಂದು ಪ್ರಮುಖಘಟನೆಯಾದ 'ನಾಯಕರ ಧನಲೋಭಸ್ವಭಾವದ ಪರಿ-ವರ್ತನೆಯ ಮೂಗುತಿಯ ಕಥೆ ಬಂದಿಲ್ಲ. ಗುರುಪುರಂದರದಾಸರ ಕೃತಿಯೊಂದರಲ್ಲಿ ಬಂದಿರುವ ದಾಸರ ಜೀವನಕಥೆಯ ಜಾಡಿನಲ್ಲಿಯೇ ಇದು ಹೊರಟಿರುತ್ತದೆ. ಅಲ್ಲದೆ 'ದಾಸರಾ ಸೂನು ಪೇಳಿದನು ವ್ಯಾಸಮುನಿರಾಯರಿಗೆ' ಎಂಬುದಾಗಿ ಕೊನೆಯ ಪದ್ಯದಲ್ಲಿ ಮಧ್ವಪತಿಯೇ ಗುರುಪುರಂದರ ದಾಸರು ಎಂಬ ಮಾತನ್ನು ಪುರಸ್ಕರಿಸಿದಂತಾಗಿದೆ. ಇದರ ಅಂಕಿತವು 'ಆನಂದವಿಜಯ ವಿಠಲ' ಎಂದು ಇದೆ. ಆದುದರಿಂದ ಈ ಹಾಡು ಗುರು ಪುರಂದರದಾಸರ ತರುವಾಯ ರಚಿತವಾದ ಕೃತಿಯೆಂದು ತೋರುವುದು. ಇದನ್ನು ವಿಜಯದಾಸರ ಕೃತಿಯೆಂದು ನಂಬುವುದು ಸರಿಯಲ್ಲವೆಂದು ನಮಗೆ ಎನಿಸುತ್ತದೆ.

'ಬೇಸರದೆ ಭಜಿಸಿರೋ ಪುರಂದರದಾಸರ' ಎಂಬ ಇನ್ನೊಂದು ೯ ನುಡಿಗಳ ಕೃತಿಯೂ ವಿಜಯದಾಸರ ಅಂಕಿತದೊಂದಿಗೆ ಇಲ್ಲಿ ಪ್ರಕಟವಾಗಿದೆ. ನಮಗೆ ದೊರೆತ ಹಳೆಯ ಒಂದೆರಡು ಹಸ್ತಪ್ರತಿಗಳಲ್ಲಿ ಈ ಪದಕ್ಕೆ ಕೇಶವ ವಿಠಲ* ಎಂದು ಬೇರೆ ದಾಸರ ಅಂಕಿತವಿದೆ. ಬಹಳ ಜನರು ಇದನ್ನು ವಿಜಯದಾಸರ ಕೃತಿಯೆಂದು ಒಪ್ಪಿಕೊಂಡಿರುವುದರಿಂದ, ಮಹಾಜನಪಂಥವನ್ನೇ ನಾವೂ ಹಿಡಿಯೋಣ.

ಈ ಕೃತಿಯ ಮೊದಲಿನ ಏಳು ನುಡಿಗಳಲ್ಲಿ ಮುಖ್ಯವಾಗಿ ಮೂಗುತಿಯ ಕಥೆಯೆ ಬೆಳೆದು ಬಂದಿರುವುದು.

"ಪುರಂದರ ಗಡದ ಒಳಗೆ ಹಿರಿಯ ಸಾವುಕಾರನೆನಿಸಿ
ಪರಿಪರಿ ಸೌಖ್ಯಗಳ ಸುರಿಸುತ ಇರುತಿರಲು
ನರಹರಿ ತ್ವರಿತ ಬ್ರಾಹ್ಮಣನಾಗುತ ಕರುಣದಲಿ ಅವರನು-
ದ್ಧರಿಸಲೋಸುಗ ಮನೆಗೆ ಪೋಗುತ ಯಜಮಾನನ ಕಂಡ
ಜರಿದು ಬ್ರಾಹ್ಮಣನ್ಹೊರಗೆ ಹಾಕಲು ಮರುದಿವಸ ಮತ್ಹೋಗಿ
ನಿಂತ ‖ ೧ ‖

* 'ಕೇಶವ ವಿಠಲ' ಎಂಬ ಅಂಕಿತದ ದಾಸರು, ದಾಸರ ಪೀಳಿಗೆಯ ಆಧಾರದಂತೆ 'ಅಭಿನವಜನಾರ್ದನ ವಿಠಲ' ಎಂಬ ದಾಸರ ಶಿಷ್ಯರು. (೧೯ನೆಯ ಶತಮಾನ).

ಇದರ ಶಿಥಿಲಬಂಧವನ್ನೂ ಭಾಷೆಯ ದೋಷಗಳನ್ನೂ ನೋಡುತ್ತಿರುವಾಗ, ಅನೇಕ ಉತ್ತಮ ಕೀರ್ತನೆಗಳನ್ನೂ ಗಂಭೀರಭಾವದ ಅಸಂಖ್ಯ ಸುಳಾದಿಗಳನ್ನೂ ಬರೆದ ವಿಜಯದಾಸರ ರಚನೆ ಇದಾಗಿರಬಹುದೇ?— ಎಂದು ಸಂದೇಹ ಬಾರದಿರದು. ಇನ್ನೂ ಮುಂದೆ ನೋಡಿ :

"ಬಾರಿಬಾರಿಗೆ ಸಾಹುಕಾರನ ಮೋರೆಗ್ಹತ್ತಿ ಮೋರೆಯಿಲ್ಲದೆ
ಆರು ತಿಂಗಳು ಬೆನ್ನಬೀಳಲು ನಾಯಕರೀತನ ॥
ಆರುಬಿಟ್ವಾರೆಂದು ಬೈಯುತ ಬೇಸತ್ತು ಎರಡು
ಹೇರು ರೊಕ್ಕ ಮುಂದೆ ಸುರಿಯುತ ಅದರೊಳಗೊಂದು ದು
ಡ್ಡಾರಿಸಿಕೋ ಎಂದು ಪೇಳಲು ನಾರಾಯಣ ಬಿಟ್ಹೋದ
ನಗುತ ॥ ೧ ॥

ಹಿತ್ತಲs ಬಾಗಿಲಿಗೆ ಹೋಗಿ ಮತ್ತೆ ಅತನ ಮಡದಿಗಾಗಿ
ಹತ್ತಿಬಿದ್ದನು ವಿತ್ತತಾ ಎನುತ ತನ ಮಗನ ಮುಂಜೆಂ-
ದತ್ತಿ ಕರವನು ಬಾಯಿ ತೆರೆಯುತ ಆ ಪ್ರಾಣಿ ನುಡಿದಳು
ಎತ್ತಣ ದ್ರವ್ಯವು ತನಗೆನುತ ನಿನ್ನ ಮೂಗಿನ
ಮುತ್ತಿನs ಮೂಗುತಿಯ ಕೊಡು ಎನೆ ಉತ್ತಮಳು
ತೆಗೆದಿತ್ತಳಾಕ್ಷಣ ॥ ೩ ॥

"ಜೋಕೆಯಿಂ ಮೂಗುತಿಯನೊಯ್ದು ಆಕೆ ಗಂಡನ ಕಣ್ಣೆದುರಿಗೆ
ಹಾಕಿದನು ತಾ ಪಾಕಿ ಕೊಡು ಎನುತ ಅದ ಕಂಡು ಇದು ನ-
ಮ್ಮಾಕೆದೆಂದು ಈತ ನುಡಿಯುತ್ತ ಅನ್ಯರದು ಇಂಥಾ
ದ್ಯಾಕೆ ಇರಬಾರದೇ ಎನ್ನುತ್ತ ಬೆಲೆ ಹೇಳು ಎನಲು
ನಾಕು ನೂರು ಪಾಕಿ ಕೊಡು ಎಂದ್ಹಾಕಿ ಹೋದನು ತಿರುಗಿ
ಬಾರವೆ ॥ ೪ ॥

ತಿರುಗಿ ಬ್ರಾಹ್ಮಣ ಬಾರದಿರಲು ಕರೆದು ತನ್ನ ಹೆಂಡತಿಯ
ಬರಿಯ ನಾಸಿಕವನ್ನೆ ಕಂಡನು—ಮೂಗುತಿಯು ಎಲ್ಲೆನೆ
ಮುರಿದಿಹುದೆಂದಾಕೆ ಪೇಳಲು—ಒಳಗ್ಹೋಗಿ ನೀ ತಾರದಿರೆ
ಅರೆವೆ ನಿನ್ನಯ ಜೀವವನೆನ್ನಲು— ವಿಷಕೊಂಬೆನೆಂದು
ಕರದಿ ಬಟ್ಟಲ ಧರಿಸಲಾಕ್ಷಣ ತ್ವರಿತದಿ ಹರಿ ಅದರೊಳ್ಹಾಕಿದ ॥ ೫ ॥

ಪುರುಷನಿ ಮುಗುತಿಯನೊಯ್ದು ಪುರುಷನ ಕೈಯೊಳಗೆ ಇಡಲು।
ತರಿಸಿ ತನ್ನಲಿದ್ದ ಪೆಟ್ಟಿಗೆಯು— ಅದು ಕಾಣದಿರಲು

ಬೆರಗಾಗಿ ನೋಡಿದನು ಮಡದಿಯು—ನಿಜಪೇಳು ಎನಲು
ಅರಸಿ ಪೇಳ್ದಳು ಕೊಟ್ಟ ಸುದ್ದಿಯು—ಅಭಿಮಾನಕಂಜಿ
ಅರೆದು ವಿಷವ ಕುಡಿವೆನೆನಲು ಸಿರಿರಮಣ ತಾ ಕೊಟ್ಟ ಖರೆಯ ॥ ೬ ॥

ದೇವ-ದೇವನು ಎನ್ನಮನದ ಭಾವವನ್ನು ತಿಳಿವುದಕೆ-
ತಾ ವೃದ್ಧ ಬ್ರಾಹ್ಮಣನಾಗಿ ಬಂದಿದ್ದ—ಪರಿಪಕ್ವನೆನಗಿ-
ನ್ನಾವ ಕಾಲಕೆ ಆಗಬೇಕೆಂದ—ವೈರಾಗ್ಯಭಾವದಿ
ಜೀವಿಸಿಕೊಂಡು ಇರುವುದೇ ಚೆಂದ—ಹೀಗೆನುತ ಮನೆ-ಧನ
ಕೋವಿದರ ಕರೆದಿತ್ತ ಹರುಷದಿ ಕಾವನಯ್ಯನ ದಾಸನಾದ ॥ ೭ ॥

ನೋಡಿದಿರಾ ಈ ಪದ್ಯವನ್ನು? ಇದರಲ್ಲಿ ದಾಸರ ಪೂರ್ವಾಶ್ರಮದ ಹೆಸರು ಬಂದಿಲ್ಲ. ಅವರ ತಂದೆ, ತಾಯಿ, ಹೆಂಡತಿ ಇವರ ಹೆಸರೇನೆಂಬುದೂ ತಿಳಿಯುವಂತಿಲ್ಲ. ಮಕ್ಕಳ ಮಾತನ್ನೇ ಇದರಲ್ಲಿ ಎತ್ತಿಲ್ಲ. ಮೂಗುತಿಯ ಕಥೆಗೆ ಮಾತ್ರ, ಇಲ್ಲಿ ಪ್ರಾಧಾನ್ಯ ದೊರೆತಿದೆ. ಮೊದಲ ಹಾಡಿನಲ್ಲಿದ್ದ ಪುರಂದರವೆಂಬ ನಗರ ಈ ಹಾಡಿನಲ್ಲಿ ಪುರಂದರಗಡವಾಗಿ ನಿಂತಿದೆ. ಆಯಿತು, ಮುಂದೆ?

ಲಕ್ಷ್ಮೀಪತಿಯ ಪಾದದಲ್ಲಿ ಲಕ್ಷ್ಯವಿಟ್ಟು ವ್ಯಾಸರಾಯರ
ಶಿಕ್ಷೆಯಿಂದಲಿ ಅಂಕಿತವ ಕೊಳುತ ಪದ ಕೊರತೆ ಐದು
ಲಕ್ಷ ಪದ ಸುಳಾದಿ ಪೇಳುತ—ಪ್ರತಿ ದಿವಸದಲ್ಲು
[ ಶಿಕ್ಷೆಯಿಂದಲಿ ಅಂಕಿತವ ಕೊಳುತ—ತ್ರಿಪಾದ ಕೊರತೆ
ಲಕ್ಷವೈದು ಪದಗಳ ಪೇಳುತ—ಪ್ರತಿ ದಿವಸದಲ್ಲಿ ]
ಪಕ್ಷಿವಾಹನ ನಾಟ್ಯವಾಡುತ—ಅಪರೋಕ್ಷವುಟ್ಟಲು
ಮೋಕ್ಷಸ್ಥಾನಕೆ ಕರೆದೊಯ್ದು ಅಧೋಕ್ಷಜನು ಸಂರಕ್ಷಿಸಿದ ॥ ೮ ॥

ಕೊನೆಯ ನುಡಿಯಲ್ಲಿ ಪುರಂದರದಾಸರ ದಿವ್ಯಮಹಿಮೆಯನ್ನು ಸಾರುತ್ತ 'ಮಾರಜನಕ ವಿಜಯವಿಠಲ ಆರಿಗಾದರೂ ಒಲಿವ ಕಾಣಿರೊ!' ಎಂಬ ಅಂಕಿತದ ಪಙ್ಕ್ತಿಯಿಂದ ಹಾಡು ಮುಗಿಯುತ್ತದೆ, ವಾಸ್ತವ ಜೀವನಾಪೇಕ್ಷಿಗಳಿಗೆ, ಈ ಹಾಡಿನಲ್ಲಿ ತೃಪ್ತಿಕರವಾದ ಯಾವ ಹೊಸಮಾತುಗಳೂ ಸಿಗುವುದಿಲ್ಲ.

ಈ ಹಾಡಿನಲ್ಲಿ ಯಾಚನೆಗಾಗಿ ಬಂದ ಬ್ರಾಹ್ಮಣ, ನಾಯಕರನ್ನು ಮಂಗನ [illegible] 'ಎತ್ತ ಹೋದನಮ್ಮಾ

ವಿಪ್ರನ ಎಲ್ಲಿ ಹುಡುಕಲಮ್ಮಾ' ಹಾಡಿನಲ್ಲಿ 'ಕಂದನ ಲಗ್ನಕೆ ಬೇಕೆಂದೆನುತ' ಎಂದಿದ್ದು ಅಲ್ಲಿ ಮದುವೆಯು ನೆಪದಿಂದ ಕೇಳಿದುದಾಗಿದೆ. ಇಬ್ಬರು ಕರ್ತೃಗಳಲ್ಲಿಯೂ ಈ ವಿಷಯದಲ್ಲಿ ಮತ್ತೈಕ್ಯವಿಲ್ಲ. ಈ ಹಾಡಿನಲ್ಲಿ ನಾಯಕರು ಹೆಂಡತಿಯನ್ನು ಕಂಬಕ್ಕೆ ಕಟ್ಟಿ ಬಡಿದಮಾತು ಇಲ್ಲವೇ ಇಲ್ಲ. ಆ ಹಾಡಿನಲ್ಲಿ ಕಂಬಕ್ಕೆ ಕಟ್ಟಿ ಬಡಿದ ಮಾತುಗಳಿವೆ. ಈ ಮಾತುಗಳನ್ನು ತೆಗೆದುಕೊಂಡೇ ನಮ್ಮಲ್ಲಿಯ ಒಬ್ಬ ಸಾಹಿತ್ಯಪಂಡಿತರು, ನಾಯಕರು ತಮ್ಮ ಹೆಂಡತಿಯನ್ನು ಬಡಿದು ಕೊಂದರೆಂದೂ, ಆಕೆಯ ಅಗಲಿಕೆಯ ಮೂಲಕ ಇವರಿಗೆ ಸಂಸಾರದಲ್ಲಿ ವಿರಕ್ತಿ ಹುಟ್ಟಿತೆಂದೂ, ಸಂಶೋಧಕನ ಆವೇಶದಲ್ಲಿ ಬರೆದಿರುವುದು ವಿಚಿತ್ರ ಸಂಗತಿಯೇ ಆಗಿದೆ. ಮೂಗುತಿಯ ಕಥೆಯು ನಮ್ಮ ಜನರಿಗೆ ಎಲ್ಲಕ್ಕೂ ಮೊದಲು ಗೊತ್ತಾದುದು ಶ್ರೀವಿಜಯದಾಸರಿಂದ. ಇದೇ ವಿಜಯದಾಸರು ತಮ್ಮ ಮತ್ತೊಂದು ಹಾಡು 'ಗುರುಪುರಂದರದಾಸರೇ ನಿಮ್ಮ ಚರಣ ಕಮಲವ ನಂಬಿದೆ' ಎಂಬುದರಲ್ಲಿ 'ತರುಣಿಸಹ ಹೊರಗ್ಹೊರಟನು. ಎಂದು ಹೇಳಿರುವುದನ್ನು ಆ ಸಾಹಿತ್ಯಪಂಡಿತರು ನೋಡಲಿಲ್ಲವೋ—ನೋಡಿಯೂ ಅದನ್ನು ಮರೆತಿದ್ದರೋ—ಎಂಬುದು ನಮಗೆ ತಿಳಿಯದು. ಯಾವುದಾದರೊಂದು ಐತಿಹಾಸಿಕಾಂಶವನ್ನು ಸತ್ಯವೆಂದು ಸಿದ್ಧಮಾಡಬೇಕಾದರೆ, ಸಂಶೋಧಕನು ಮೈತುಂಬ ಕಣ್ಣುಳ್ಳವನಾಗಿರಬೇಕು. ಎಲ್ಲ ಪ್ರಮಾಣಗಳನ್ನೂ ಜಾಳಿಸಿ ನೋಡಬೇಕು.

ಅದೇ 'ಗುರುಪುರಂದರದಾಸರೇ' ಎಂಬ ಹಾಡಿನಲ್ಲಿ, ಪುರಂದರದಾಸರು ಹುಟ್ಟಿದ ಊರನ್ನು 'ಪುರಂದರಾಯುಲಘಟ್ಟ', ಎಂದು ಹೇಳಲಾಗಿದೆ. ಆದರೆ 'ಬೇಸರದೆ ಭಜಿಸಿರೋ' ಎಂಬುದರಲ್ಲಿ 'ಪುರಂದರಗಡವ ಒಳಗೆ' ಎಂದು ಹೇಳಲಾಗಿದೆ. 'ಘಟ್ಟ' 'ಗಡ' ಇವು ಭಿನ್ನಾರ್ಥಕ ಶಬ್ದಗಳು. ಇವುಗಳಲ್ಲಿಯ ಅರ್ಥವ್ಯತ್ಯಾಸವನ್ನು ಅರಿಯದಷ್ಟು ವಿಜಯದಾಸರು ಭಾಷೆಯ ಅಜ್ಞಾನಿಗಳಲ್ಲವೆಂಬುದನ್ನು ಬೇರೆಯಾಗಿ ಹೇಳಬೇಕಾಗಿಲ್ಲ. ಅವರ ಅನೇಕ ಕೃತಿಗಳೇ ಅವರ ಭಾಷಾಪಾಂಡಿತ್ಯಕ್ಕೆ ಸಾಕ್ಷಿ ನುಡಿಯುವುವು. 'ಪುರಂದರಗಡ' ಎಂಬುದು. ವಿಜಯದಾಸರ ತರುವಾಯದ ಕೆಲವು ದಾಸರ ಬಳಕೆಯದಾಗಿದೆ. ವಿಜಯದಾಸರು 'ಘಟ್ಟ' ಎಂದು ಹೇಳಿರುವುದಕ್ಕೆ ಅವರು 'ಗಡ' ಎಂಬ ಅಪಾರ್ಥವನ್ನು ಕಲ್ಪಿಸಿರುವುದು. ಏಕೆಂದರೆ ಇವರ ಕಾಲದಲ್ಲಿ

ಮಹಾರಾಷ್ಟ್ರದಲ್ಲಿಯು ಪುರಂದರಗಡವು ಹೆಸರುವಾಸಿಯನ್ನು ಪಡೆದಿತ್ತು. 'ಪುರಂದರಾಲಯ' ಘಟ್ಟವು ಅಜ್ಞಾತ ದಶೆಯಲ್ಲಿ ಇರಬಹುದು.

ಇದೇ ವಿಜಯದಾಸರು ತಮ್ಮ ಇನ್ನೊಂದು ಕೃತಿಯಲ್ಲಿ 'ಪುರಂದರಾಲಯಘಟ್ಟ'ವನ್ನು 'ಪಾಕಶಾಸನಪುರ'ವೆಂದು ಪರ್ಯಾಯ ನಾಮದಿಂದ ಹೇಳಿದ್ದಾರೆ. 'ಪುರಂದರ' 'ಪಾಕಶಾಸನ' ಎರಡೂ ಇಂದ್ರನ ನಾಮಗಳು.

'ಪಾಕಶಾಸನಪುರ' ಎಂದು ಬಳಸಿದ ಪದ್ಯವಲ್ಲಿಯೆ ಪುರಂದರದಾಸರ ತಂದೆಯ ಹೆಸರು 'ಚಿನಿವಾರ ವರದಪ್ಪನಾಯಕ' ಎಂದು ಬಂದಿದೆಯಲ್ಲದೆ, ಪುರಂದರದಾಸರ ನಾಲ್ವರು ಮಕ್ಕಳ ಹೆಸರುಗಳೂ, ಅವರು ಯಾವ ಯಾವ ದೇವಾಂಶರೆಂಬುದೂ ನಿರೂಪಿತವಾಗಿದೆ :

> "ವರದಪ್ಪನೇ ಸೋಮ, ಗುರುರಾಯ ದಿನಕರನು,
> ಗುರುಮಧ್ವಪತಿಯೆ ಭೃಗು, ಅಭಿನವನವನೆ ಜೀವ
> ವರತನಯ ನಾಲ್ವರನು ಪಡೆದು ಉಪದೇಶದಲಿ
> ಪರಮಜ್ಞಾನಿಗಳ ಮಾಡಿ
>
> ಶರಧಿತೆರೆಯಂತೆ ಹರಿಗುಣಗಳನು ಪೊಗಳುತಿಹ
> ತರಳರನು ನೋಡಿ ಗುರು ವ್ಯಾಸಮುನಿರಾಯರಿಗೆ
> ಹಿರಿದಾಗಿ ಮನವುಬ್ಬಿ ಎರಗಿದಂತಃಕರಣ
> ಚರಿತೆಯಲಿ ನಲಿದಾಡಿದ ॥ ೪ ॥

ಪುರಂದರದಾಸರ ಮಕ್ಕಳ ಹೆಸರನ್ನು, ವಿಜಯದಾಸರಿಗೆ ಯಾವ ಪರಂಪರೆಯ ಪ್ರಮಾಣ ಒದಗಿಸಿದೆಯೋ ತಿಳಿಯದು. ಇತಿಹಾಸಪ್ರಮಾಣಗಳಿಂದ ನೋಡಿದರೆ, ಮಕ್ಕಳ ಸಂಖ್ಯೆಯಲ್ಲಿಯೂ ಹೆಸರುಗಳಲ್ಲಿಯೂ ವ್ಯತ್ಯಾಸ ಕಂಡುಬರುತ್ತದೆ. ವಿಜಯದಾಸರು ತಮ್ಮದೊಂದು ಸುಳಾದಿಯಲ್ಲಿಯೂ ಶ್ರೀಪುರಂದರದಾಸರಿಗೆ ನಾಲ್ಕು ಜನ ಮಕ್ಕಳೆಂಬುದನ್ನು 'ಭವದೂರರಾಗಿ ದಾಸರು ತಮ್ಮ ಸುತರೊಡನೆ ವಿರಚಿಸಿದರು ಪುರಂದರವರದ ಗುರು ಅಭಿನವ ಗುರುಮಧ್ವಪತಿ ಎಂಬಂಕಿತದಿಂದ ವಿವರಣೆ ಮಾಡೆ ಲೋಕವನು ಉದ್ಧರಿಸೆ' ಎಂಬ ಮಾತುಗಳಲ್ಲಿ ಹೇಳಿದ್ದಾರೆ.

## ೬ ವಿಜಯದಾಸರಲ್ಲದೆ ಬೇರೆಯವರು

ವಿಜಯದಾಸರ ಶಿಷ್ಯಪರಂಪರೆಗೆ ಸೇರಿದವರಾದರೂ, ಅವರ ಸಮಕಾಲೀನರೇ ಆದ ಪ್ರಾಣೇಶದಾಸರು ಶ್ರೀಪುರಂದರದಾಸರನ್ನು ಕುರಿತು ಒಂದು

ಹಾಡನ್ನು ರಚಿಸಿದ್ದಾರೆ. ಈ ಹಾಡೂ ಹೆಚ್ಚು ವಾಸ್ತವಾಂಶಗಳಿಂದ ಕೂಡಿದೆ:

"ದಾಸರಾಯಾ ಪುರಂದರ ದಾಸರಾಯಾ ॥ ಪಲ್ಲವಿ ॥

ದಾಸರಾಯ ಪ್ರತಿವಾಸರದಲಿ ಶ್ರೀನಿ।
ವಾಸನ ತೋರೊ ದಯಾಸಾಂದ್ರ ಮೂರುತಿ ॥ ಅ ಪ ॥

ವರದನಾಮಕ ಭೂಸುರನ ಮಡದಿಯ ಬ-
ಸಿರಲಿ ಬಂದು ನೀ ಮೆರೆದೆ ಧರಣಿಯೊಳು ॥ ೧ ॥

ಕುಲಿಶಧರಾಹ್ವಯ ಪೊಳಲೊಳು ಮಡದಿ-ಮ-
ಕ್ಕಳಕೂಡಿ ಸುಖದಿಂ ಕೆಲಕಾಲವಿರುತ್ತಿದ್ದೆ ॥ ೨ ॥

ಮನೆ ಧನ ಧಾನ್ಯ ವಾಹನ-ವಸ್ತುಗಳನೆಲ್ಲ
ತೃಣಕೆ ಬಗೆದು ಕೃಷ್ಣಾರ್ಪಣವೆಂದೆ ಬುಧರಿಗೆ ॥ ೩ ॥

ವ್ಯಾಸರಾಯರಲ್ಲಿ ಭಾಸುರಮಂತ್ರೋಪ-
ದೇಶವಕೊಂಡು ರಮೇಶನನೊಲಿಸಿದೆ ॥ ೪ ॥

ಪ್ರಾಕೃತಭಾಷೆಯಲಿ ನೀ ಕೃತಿಪೇಳಿ ಅ-
ಪ್ರಾಕೃತ ಹರಿಯಿಂದ ಸ್ವೀಕೃತ ನೀನಾದೆ ॥ ೫ ॥

ತೀರ್ಥ-ಕ್ಷೇತ್ರಗಳ ಮೂರ್ತಿಮಹಿಮೆಗಳ
ಕೀರ್ತಿಸಿ ಜಗದಿ ಕೃತಾರ್ಥನೆಂದೆನಿಸಿದೆ ॥ ೬ ॥

ಪಾತಕವನನಿಧಿ ಪೋತನೆನಿಪ ಜಗ-
ನ್ನಾಥ ವಿಠಲನ ಸಂಪ್ರೀತಿಯ ಪಡೆದೆ ॥ ೭ ॥

ಇದರಲ್ಲಿ ಮೂಗುತಿಯ ಕಥೆಯ ವಿಚಾರವಿಲ್ಲ. ತಂದೆಯ ಹೆಸರು, ಹುಟ್ಟಿದ ಸ್ಥಳದ ಹೆಸರುಗಳು ವಿಜಯದಾಸರು ಹೇಳಿದುವೇ ಆಗಿವೆ. (ಕುಲಿಶ ಧರಾಹ್ವಯಪೊಳಲು=ಪುರಂದರ ಎಂಬ ಹೆಸರಿನ ಪಟ್ಟಣ) ಪುರಂದರಗಡದ ಹೆಸರನ್ನು ಇವರೂ ಹೇಳಿಲ್ಲ.

ವಿಜಯದಾಸರ ಶಿಷ್ಯಪರಂಪರೆಗೆ ಸೇರಿದ 'ಅಭಿನವ ಜನಾರ್ದನ ವಿಠಲ' ಎಂಬ ಅಂಕಿತದ ದಾಸರದೊಂದು (೧೯ ನೆಯ ಶತಮಾನ) ಪುರಂದರ ದಾಸರ ಮೇಲಿನ ಸುಳಾದಿಯಿದೆ. ಇವರು ಅವರ ಜನ್ಮಸ್ಥಳವನ್ನು **'ಪುರಂದರ ಗಡ'** ಎಂದು ಹೇಳಿದ್ದಾರೆ. ಮಿಕ್ಕ ಮಾತುಗಳೆಲ್ಲ ವಿಜಯದಾಸರು ಹೇಳಿದಂತೆಯೇ ಇವೆ. ಇವರೂ ಮೂಗುತಿಯ ವಿಚಾರವನ್ನು ಹೇಳಿಲ್ಲ. ಕಳೆದ ಶತಮಾನದ ಕೊನೆಕೊನೆಯ ಭಾಗದಲ್ಲಿ ಆಗಿಹೋದ **'ಇಂದಿರೇಶ'** ಎಂಬ ಅಂಕಿತದ ಶೇಷಪ್ಪನಹಳ್ಳಿಯ ರಾಮಾಚಾರ್ಯರೆಂಬುವರು, ಸಂಸ್ಕೃತ ಶ್ಲೋಕ

ಗಳಲ್ಲಿ, ಪುರಂದರದಾಸರ ಮಹಿಮೆಯನ್ನು ಹೇಳಿದ್ದಾರೆ. ಇವರೂ ಪುರಂದರ ದಾಸರ ಜನ್ಮಸ್ಥಳವನ್ನು 'ಪುರಂದರಗಡ' ಎಂದು ಹೇಳಿದ್ದಾರೆ. ಬ್ರಾಹ್ಮಣನ ಮಗನ ಮುಂಜಿವೆಯು ಬದಲು ಮದುವೆಯೆಂಬ ಮಾತು ಬಂದಿದೆ. ಮೂಗುತಿಯ ಕಥೆಯ ವಿಷಯ ಇದರಲ್ಲಿ ಪ್ರಧಾನವಸ್ತುವಾಗಿದೆ.

" ಯೋ ಭೂತ್ ಪುರಂದರಗಡೇ ಪರಿಪೂರ್ಣ ಪತ್ನೀ-
ಪುತ್ರಾಪ್ತಬಾಂಧವ ಮುಖಾದ್ಭುತ ಸದ್ವಿಭೂತಿಃ ||
ಪೂರ್ವಾರ್ತಿಪುಣ್ಯಪರಿತೋಷಿತ ರುಕ್ಮಿಣೀಶಂ
ಸೋಽಯಂ ಪ್ರಸೀದತು ಪುರಂದರದಾಸವರ್ಯಃ || ೧ ||

* * *

ಸಂಯಾಚಿತಃ ಸುತವಿವಾಹಧನಾರ್ಥಮೇಕ-
ಕ್ಷೋಣೀಸುರೇಣ ಚಿರಮದ್ಯ ಪರೇಹನೀತಿ ||
ಕೃತ್ವಾ ದಿಶತ್ತ್ವನುತಮಂ ದ್ರವಿಣಂ ಕದರ್ಯಃ
ಸೋಽಯಂ ಪ್ರಸೀದತು ಪುರಂದರದಾಸವರ್ಯಃ || ೨ ||

ಅಪ್ರಾಪ್ಯಕಾಮಿತಧನಂ ಧರಣೀಸುರೇಶಃ
ಸಂಪ್ರಾರ್ಥಯನ್ ಶುಭತನೂಮಥಯಸ್ಯ ಪತ್ನೀಂ ||
ಸ್ಮಿತ್ವಾ ತಯಾರ್ಪಿತ ನಸಾಭರಣೇನ ತುಷ್ಟಃ
ಸೋಽಯಂ ಪ್ರಸೀದತು ಪುರಂದರದಾಸವರ್ಯಃ || ೩ ||

ಇತ್ಯಾದಿಯಾಗಿ ಮೂಗುತಿಯ ಕಥೆಯಲ್ಲದೆ ಈ ಸ್ತೋತ್ರದಲ್ಲಿ, ಶ್ರೀಪುರಂದಾಸರಿಗೆ ಸಂಬಂಧಿಸಿದ ಬೇರೆ ಅನೇಕ ಮಹಿಮಾವಿಶೇಷಗಳ ವಿಷಯವೂ ಇದೆ.

ಪುರಂದರಪುರ ಅಥವಾ ಪುರಂದರಾಲಯ ಘಟ್ಟವು, ಕಳೆದ ಶತಮಾನ ದಲ್ಲಿ ಬಾಳಿದ ದಾಸರಿಂದಲೇ **'ಪುರಂದರಗಡ'** ಎಂಬುದಾಗಿ ಮಾರ್ಪಟ್ಟಿರು-ವಂತೆ ಕಾಣುತ್ತದೆ. ಪುರಂದರದಾಸರು ಸ್ವತಃ ತಮ್ಮ ಜನ್ಮಸ್ಥಳದ ವಿಚಾರ ವನ್ನು ಎಲ್ಲಿಯೂ ಹೇಳಿದಂತಿಲ್ಲ. ತಮ್ಮ ಲೌಕಿಕನಾಮದ ನಿರ್ದೇಶವನ್ನೂ ಮಾಡಿದಂತಿಲ್ಲ.

## ೭ ಗುರುಪುರಂದರದಾಸರ ಪ್ರಕರಣ

ಗುರುಪುರಂದರದಾಸರು ವಿಜಯದಾಸರ ತರುವಾಯದ ಕಾಲದವ ರೆಂದು ಈ ಮೊದಲೇ ವಿದಿತಪಡಿಸಲಾಗಿದೆ. ಕಾಮಲಾಪುರದ ತಾಮ್ರಶಾಸನ

ಪಂತೆ ನೋಡಿದರೆ, ಪುರಂದರದಾಸರಿಗೆ 'ಗುರುರಾಯ' ಎಂಬ ಹೆಸರಿನ ಮಗನು ಇರಲಿಲ್ಲವೆಂದು ಹೇಳಬೇಕಾಗುತ್ತದೆ. ವಿಜಯದಾಸರು ಹೇಳಿದು-ದನ್ನು ನಂಬಿ, ಆ ಹೆಸರಿನ ಮಗನು ಇದ್ದನೆಂದು ಒಪ್ಪಿಕೊಂಡರೂ, ಪುರಂ-ದರದಾಸರ ವಿಷಯಕವಾದ ಪವಾಡದ ಪದ್ಯಗಳನ್ನು ರಚಿಸಿದವನಂತೂ ಆ ದಾಸರ ಮಗ ಗುರುರಾಯನಲ್ಲವೆಂಬುದನ್ನು, ವಿಮರ್ಶಕ ಬುದ್ಧಿಯ ಸಂಶೋಧಕರಾರೂ ಒಪ್ಪಿಕೊಳ್ಳದಿರಲಾರರು. ಏಕೆಂಬುದನ್ನು ಗುರುಪುರಂದರ ದಾಸರ ಹಾಡುಗಳಿಂದಲೇ ಸಿದ್ಧಮಾಡಿ ತೋರಿಸಬಹುದು.

ಮೊದಲನೆಯದಾಗಿ ಶ್ರೀಪುರಂದರದಾಸರ ಜೀವನವನ್ನು ಕುರಿತು ಹೇಳಿದ ಆ ದೀರ್ಘವಾದ ರಚನೆಯನ್ನೇ ತೆಗೆದುಕೊಳ್ಳೋಣ :

" ದಾಸರು ಜನುಮ ಪಡೆದ ವಿಸ್ತಾರವನೆ ಕೇಳಿ
ಲೇಸಾಗಿ ಭಕುತಿಯಿಂದೆಲ್ಲ ನೀವು।
ಸಾಸಿರದ ಜನ್ಮಗಳ ಪಾಪ ಭಸ್ಮಾಗುವುದು
ಪುಸಿಯಲ್ಲ ಹರಿವ ಹಾವನ್ನೆ ಪಿಡಿವೆ ॥

ಏಸು ಜನ್ಮದಿ ಪುಣ್ಯ ಮಾಡಿದರು ದೊರಕದು
ದೋಷವುಳ್ಳ ನರರಿಗೆ ದೊರೆಕೊಂಬುದೆ?
ವಸುಧೆಯೊಳಿವರಂಥ ದಾಸರು ಹಿಂದೆಮುಂದಿಲ್ಲ
ವಾಸುದೇವನೆ ಬಲ್ಲ ಅವರ ಮಹಿಮೆಗಳ ॥ ೧ ॥

ಈ ಪದ್ಯದ ಛಂದೋರೀತಿ ತೆಲುಗುಸಾಹಿತ್ಯದಲ್ಲಿ ವಿಶೇಷ ಪ್ರಚಾರದ-ಲ್ಲಿರುವ "ಸೀಸಪದ್ಯ" ಎಂಬ ಮಾತ್ರಾಗಣವೃತ್ತದ ರೀತಿಯಲ್ಲಿದೆ. ಸೀಸ-ಪದ್ಯ ಛಂದಸ್ಸನ್ನು ಕನ್ನಡ ಸಾಹಿತ್ಯದಲ್ಲಿ ಮೊದಲಿಗೆ ತಂದವರು ರಾಯಚೂರು ಪ್ರದೇಶದಲ್ಲಿ ಆಗಿಹೋಗಿರುವ ಹರಿದಾಸಕವಿಗಳು. **'ಶ್ರೀಕೃಷ್ಣಪಾರಿಜಾತ'** ಎಂಬ ಹಾಡುಗಬ್ಬವನ್ನು ಬರೆದ ಅಪರಾಲ ತಮ್ಮಣ್ಣ ಎಂಬ ಹರಿಭಕ್ತಕವಿಯು, ತನ್ನ ಕಾವ್ಯದಲ್ಲಿ ಸೀಸಪದ್ಯಗಳನ್ನು ತುಂಬ ಬಳಸಿದ್ದಾನೆ. ಆ ಕವಿಯೂ ೧೮-೧೯ನೆಯ ಶತಮಾನಗಳಲ್ಲಿ ಬದುಕಿಬಾಳಿದವನು. ಈ ಪದ್ಯದಲ್ಲಿಯ ಶಬ್ದಪ್ರಯೋಗಗಳೂ, ಭಾಷಾಪದ್ಧತಿಯೂ, ಛಂದಸ್ಸು-ಪ್ರಾಸಪದ್ಧತಿಗಳ ಶೈಥಿಲ್ಯವೂ ಆ ಕವಿಯ ರಚನೆಯಲ್ಲಿ ಇದ್ದಂತೆಯೆ ಇವೆ. ಇನ್ನು ಈ ಪದ್ಯದಲ್ಲಿ ಬಂದಿರುವ ವಿಷಯಪದ್ಧತಿಯನ್ನು ನೋಡೋಣ :

"ಸೃಷ್ಟಿಯೊಳು ಪುರಂದರದ ಪಟ್ಟಣದೊಳಗೊಬ್ಬ
ವಿಟ್ಠಲನೆಂಬ ಚಿನಿವಾರನಿರಲಾತಗೆ ।
ಪಟ್ಟದ ರಾಣಿ ಆಕೆಯು ಪೆಸರು ರುಕ್ಮಿಣಿಯು
ಇಷ್ಟಳಾಗಿಹಳು ಅತಿ ಸಿರಿಯಿಂದಲಿ ।

ಪಟ್ಟೆ ಧನಧಾನ್ಯ ಕೋಟ್ಯಾಧಿಕಾರಿಯು ಆಗಿ
ಅಷ್ಟದಿಕ್ಕಿಲಿ ದ್ರವ್ಯ ಮೆರೆಯುತಿರಲಾಗ ।
ಅಷ್ಟರೊಳಗೇ ಅವರ ಪೊಟ್ಟೆಯಲಿ ಪುಟ್ಟಿದರು
ಇಷ್ಟವಾದ ಪುರಂದರನೆಂಬ ಪುತ್ರ ॥ ೧ ॥

ವಿಜಯದಾಸರೂ ಅವರ ಅನುಯಾಯಿಗಳೂ ಹೇಳಿರುವಂತೆ, ವರದಪ್ಪನಾಯಕ ಪುರಂದರದಾಸರ ತಂದೆಯಲ್ಲ; ವಿಟ್ಠಲನಾಯಕರೆಂದು ಈ ದಾಸರು ಹೇಳುವರು. ಅದರಂತೆ ಪುರಂದರದಾಸರ ತಾಯಿಯ ಹೆಸರನ್ನು ಇನ್ನಾವ ದಾಸರೂ ಹೇಳಿಲ್ಲ; ರುಕ್ಮಿಣಿ ಎಂದು ಇವರು ಹೇಳಿದ್ದಾರೆ. ಈಗ ಹರಿದಾಸಪರಂಪರೆಯ ಪ್ರಚಾರದಲ್ಲಿರುವಂತೆ, ಪುರಂದರದಾಸರ ಹೆಸರು ಕೃಷ್ಣಪ್ಪನಾಯಕ, ಶೀನಪ್ಪನಾಯಕ ಎರಡೂ ಅಲ್ಲ. ಈ ದಾಸರ ಅಭಿಪ್ರಾಯದಂತೆ ಪುರಂದರ—ಎಂಬುದೇ ಶ್ರೀದಾಸರ ಅಂಕಿತನಾಮ.

ಇನ್ನೂ ಒಂದು ವಿಲಕ್ಷಣವೆಂದರೆ: ಮಿಕ್ಕದಾಸರು ಹೇಳಿರುವಂತೆ, ಪುರಂದರದಾಸರು ಮೊದಲಿನಿಂದಲೂ ಧನಲೋಭಿಗಳಲ್ಲ, ಕೃಪಣರಲ್ಲ—ಎಂಬುದು ಈ ದಾಸರ ಹೇಳಿಕೆ. ಮೊದನಿಲಿಂದಲೂ ಅವರು ಉತ್ಕಟಭಾವದ ಹರಿಭಕ್ತರು; ಜ್ಞಾನಿಗಳು; ದಾನಬುದ್ಧಿಯವರು. ಇದನ್ನು ನೋಡಿ :

" ಒಂದು ದಿನದಲಿ ಮಗನ ಕರೆದು ಕೂಡಿಸಿಕೊಂಡು
ಚೆಂದದಲಿ ಹರುಷಪೂರಿತನಾಗಿ ಪಿತನು ।
ಒಂದೆರಡು ಸಾವಿರದ ಹೊನ್ನುಗಳ ತಂದುಕೊಟ್ಟು
ಅಂದದಲಿ ಉದ್ಯೋಗ ಮಾಡೆಂದರು ॥

ಅಂದಮಾತನು ಕೇಳಿ ಒಳಿತೆಂದು ತಲೆದೂಗಿ
ಕಂದರ್ಪನಯ್ಯನ ಮನದಿ ಧೇನಿಸುತ ।
ಚೆಂದದಿಂ ಹೊಗಳಿ ಆನಂದದಲಿ ಬ್ರಾಹ್ಮಣರ
ವೃಂದದಲೆ ಕರೆದು ದ್ರವ್ಯವ ಕೊಟ್ಟರು ॥ ೪ ॥

ಹೀಗೆ ನಾಲುಕು ಬಾರಿ ನೋಡಿ ಎಲ್ಲರು ಬಂದು
ಹ್ಯಾಗೆ ಉದ್ಯೋಗ ಮಾಡುವನೊ ಎಂದು ।
ರಾಗದಿಂದಲಿ ಅವರು ವಿಟ್ಠಲನ ಗುಡಿಯೊಳಗೆ
ಹಗ್ಗದಿಂದಲಿ ..............ಕಟ್ಟಲು ॥
ಬಾಗಿಲಿಕ್ಕಿ ಬಿಟ್ಟರು ಹೀಗೇಳು ದಿನವೆಲ್ಲ
ಯೋಗಿಯಂತೆ ಧೇನಿಪರು ನಿರಾಹಾರದಿ ।
ರಾಗಭಕುತಿಯ ಮಾಡೆ ಕ್ಷೀರಸಾಗರಶಯನ
ಆಗ......... ಹರುಷಿತನಾದನು ॥ ೫ ॥

ಭಂಗಾರ ಹರಿವಣಕೆ ರಂಗುಮಾಣಿಕ ಬಿಗಿದು
ಶೃಂಗಾರವಾಗಿ ಥಳಥಳ ಹೊಳೆಯುತಿರಲು
ಅಂಗನೆಯು ಶ್ರೀದೇವಿ ಮಾಡಿ ಷಡುರಸದನ್ನ
ರಂಗನ ಬಳಿಯು ಹರಿವಾಣ ತರಲು ॥
ತುಂಗದೃಷ್ಟಿಯಲಿ ಶುಭಾಂಗ ದಾಸರ ನೋಡಿ
ಅಂಗ ನೇವರಿಸಿ ಊಟವನು ಮಾಡೆನಲು ।
ಕಂಗಳಿಂ ನೋಡಲಳವಲ್ಲ ಚೆಂಬು–ಥಾಲಿಗಳ
ಗಂಗೆ ಮೊದಲಾದವರು ನೀರ ತಂದಿಡಲು ॥ ೬ ॥

ಗುರುಪುರಂದರದಾಸರು ನಿರ್ಮಿಸಿದ ಪುರಂದರದಾಸರ ಪ್ರಾರಂಭ ಜೀವನದ್ದೇ ಆದ ಮಾಹಾತ್ಮ್ಯಚಿತ್ರವನ್ನು ನೋಡಿದಿರಾ? ಅಪರಿಮಿತವಾದ ಇವರ ಗುರುಭಕ್ತಿ, ಪುರಂದರದಾಸರಲ್ಲಿ ಸಾಮಾನ್ಯಮಾನವಸಹಜವಾದ ಲೌಕಿಕ ಲೋಭಮೋಹಗಳೂ, ಅಜ್ಞಾನವೂ ಇಲ್ಲವೇ ಇಲ್ಲವೆಂದು ಭಾವಿಸಿ, ಈ ಪವಾಡವನ್ನು ಸೃಷ್ಟಿಸಿರುವುದೇನೋ! ಇನ್ನೂ ಮುಂದಿನ ಘಟನಾ ವೈಚಿತ್ರ್ಯವನ್ನು ಕೇಳಿರಿ :

“ ಏನ ಮಾಡಿದರು ಉಣಲೊಲ್ಲದೇ ಘನಮಹಿಮ
ನೀನುಂಡು ಮಿಕ್ಕನ್ನವುಂಬೆನೆನಲು ।
ದೀನರಕ್ಷಕ ಭೂದುರ್ಗೆಯರ ಸಹಿತಾಗಿ
ತಾನುಂಡು.........ಉಚ್ಛಿಷ್ಟವ ॥
ನೀನೂಟ ಮಾಡೆಂದು ಹರುಷಪ್ರಸನ್ನನಾಗಿ
ತಾನೆ ಉಣಿಸಿದನು ಕರುಣದಲಿ ಈ ವಿಧದಿ ।
ನೀನು ಮಾಡಿದ ಪದವು ಶಾಸ್ತ್ರಸಮ್ಮತವಾಗ–
ಲೆ[illegible] ॥ ೭ ॥

ಮುಂದೆ ಎಂಟು ದಿನಗಳಾದ ಮೇಲೆ 'ಅಷ್ಟು ಮಂದಿಯು ಕೂಡಿ ಕೊಟ್ಟನೋ ಪ್ರಾಣವನ್ನಿವನೆಂದು, ಬಾಗಿಲ ತೆರೆದು ವಿಟ್ಠಲನ ಗುಡಿಹೊಕ್ಕು ಎಲ್ಲರು ನೋಡುತಿರಲು, ಅಷ್ಟದಿಕ್ಕು ಹೊಳೆವ ಹರಿವಾಣ! ದಿಟ್ಟಿಸಿ ನೋಡಲಾ ಗುಡಿಯೊಳಗೆ ದಾಸರು, ವಿಟ್ಠಲನ ಪದಧ್ಯಾನದಿ ಮಗ್ನರಾಗಿರಲು, ಬಟ್ಟಲು ಚೆಂಬು ಖಚಿತವಾದುದೆ ಎಂದು ಮುಟ್ಟಿ ನೋಡಿ ಆಶ್ಚರ್ಯಗೊಂಡರು.'

ಆಗ 'ತಂದೆ ತಾಯಿ ಬಂಧು ಬಳಗ ಎಲ್ಲರೂ ಬಂದು, ಕಂದ ನಿನ್ನ ಹೆಸರ ಕೊಂಬುದಿಲ್ಲವು!' ಎಂದು ಪಶ್ಚಾತ್ತಾಪದಿಂದ ಹೇಳಿದರು. ಬಳಿಕ ದೇವರಿಂದ ಬಂದ ಚಿನ್ನದ ಹರಿವಾಣ, ಚೆಂಬು, ಥಾಲಿ ಎಲ್ಲವನ್ನೂ ದಾಸರು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟುಬಿಟ್ಟರು. ಮುಂದೆ ದಾಸರು ಮನೆಗೆ ಬಂದು, ಹೆಂಡತಿಯ ಮನಸ್ಸನ್ನು ಪರೀಕ್ಷಿಸಬೇಕೆಂದು, ಆಕೆಯ ಕೈಯಲ್ಲಿ ಹಿಡಿಹಿಡಿ ಹೊನ್ನುಗಳ ಕೊಡಲು, ಆಕೆ 'ಹಿಂಡುಬ್ರಾಹ್ಮಣರುಗಳ ಕರೆದು, ಆ ದ್ರವ್ಯವನ್ನೆಲ್ಲ ಕಂಡಹಾಗೆ ಕೊಟ್ಟಳು. ಆಗ ದಾಸರು ಮನೆಯನ್ನು ಬಿಟ್ಟು ಹೆಂಡತಿಯೊಂದಿಗೆ ಪಂಢರಪುರಕ್ಕೆ ಬಂದು ಅಲ್ಲಿಯೆ ವಾಸವಾದರು. ಬಳಿಕ 'ಪುಂಡರೀಕವರದನ ಕಂಡು' ಅವನ ಆಜ್ಞೆಯನ್ನು ಕೊಂಡು ಹಂಪೆಗೆ ಬಂದರು.

ಗುರುಪುರಂದರದಾಸರ ಈ ಕಥನಕೃತಿಯಲ್ಲಿ ಮೂಗುತಿಯ ವಿಷಯವೇ ಬರುವುದಿಲ್ಲ. ಹೆಂಡತಿಯೊಂದಿಗೆ ಮನೆಯನ್ನು ಬಿಟ್ಟುಹೊರಟಾಗ ದಾಸರಿಗೆ ಮಕ್ಕಳಾಗಿದ್ದುವೋ ಇಲ್ಲವೋ ಎಂಬ ಮಾತನ್ನೇ ಎತ್ತಿಲ್ಲ. ಇವರು ಹೇಳಿದ ಹೊಸ ಮಾತು ಇನ್ನೂ ಒಂದು ಎಂದರೆ: ದಾಸರು ಹಂಪೆಗೆ ಬಂದಾಗ, ಅವರೊಂದಿಗೆ ಅಪ್ಪಣ್ಣ ಭಾಗವತ, ಪರಶುಭಾಗವತ ಎಂಬಿಬ್ಬರು ಶಿಷ್ಯರು ಜೊತೆಯಲ್ಲಿ ಇದ್ದರಂತೆ:

"ಅಪ್ಪಣ್ಣ ಭಾಗವತ ಪರಶುಭಾಗವತರೆಂಬ
ಒಪ್ಪುವ ಶಿಷ್ಯರು ಸಂಗಡದಿ ಇರಲು।
ಆ ಪಟ್ಟಣದಿ ವ್ಯಾಸರಾಯನೆಂಬಾಯತಿಯು
ತಪಮಾಡುತಿರಲು ಕಂಡು ॥

ತಪಸಿ ದಾಸರ ನೋಡಿ ಆಗೆಂದರು ।
ಉಪದೇಶ ನಿನಗೆ ಆಗಿದೆಯೊ ಇಲ್ಲವೊ ಎನಲು
ತಪಸಿ ಗುರು ಒಲಿವನಕ ವಿಟ್ಠಲನೆಂದರು. ॥ ೧೧ ॥

ಈ ಹರಿದಾಸರ ಅಭಿಪ್ರಾಯದಂತೆ ದಾಸರು ವ್ಯಾಸರಾಯರಿಗಾಗಿಯೆ ಹಂಪೆಗೆ ಬಂದವರಲ್ಲ. ಬಂದು ಕೆಲವು ದಿನಗಳಿದ್ದ ಮೇಲೆ, ಶ್ರೀವ್ಯಾಸ-ರಾಯರ ತಪೋಮಹಿಮೆಯನ್ನು ಕೇಳಿ ಅವರ ಬಳಿ ಹೋದವರು; ಅವರ ಹೇಳಿಕೆಯಂತೆ ಹರಿದಾಸದೀಕ್ಷೆಯನ್ನು ಪಡೆದವರು. 'ಮಂತ್ರ-ಮುದ್ರಾ ಧಾರಣೆ-ಉಪದೇಶ ತಡೆಯದೇ ಕೊಂಡು ವೈರಾಗ್ಯಭಕುತಿಯ ತಾಳಿ' ವಿಜಯ ನಗರದಲ್ಲಿ ಗುರುಪುರಂದರವಿಠಲನ ಪಾದಗಳನ್ನು ಸ್ಮರಿಸುತ್ತ ಬದುಕಿದವರು.

ಶ್ರೀವಿಜಯದಾಸರಿಂದಲೇ ಪುರಂದರದಾಸರ ಪವಾಡಪರಂಪರೆ ಹುಟ್ಟಿ, ಮುಂದೆ ಬೆಳೆಯುತ್ತ ನಡೆದಂತೆ ಕಾಣುತ್ತದೆ. ವಿಜಯದಾಸರು ಕಾಶಿಯಲ್ಲಿ ವಾಸವಾಗಿದ್ದಾಗ, ಶ್ರೀಪುರಂದರದಾಸರು ಅವರಿಗೆ ಕನಸಿನಲ್ಲಿ ದರ್ಶನ-ದೀಕ್ಷೆಗಳನ್ನು ಕೊಟ್ಟು, ಅವರನ್ನು ವ್ಯಾಸಕಾಶಿಗೆ ಕರೆದುಕೊಂಡು ಹೋಗಿ, ಶ್ರೀವೇದವ್ಯಾಸರ ದರ್ಶನಮಾಡಿಸಿದರೆಂದು, ವಿಜಯದಾಸರು ತಮ್ಮ ದೊಂದು ಕೃತಿಯಲ್ಲಿ ಹೇಳಿರುವರು. ಕಳೆದ ಶತಮಾನದ ಕೊನೆಯ ಭಾಗ ದಲ್ಲಿ ಬದುಕಿದ 'ತಂದೆ ಪುರಂದರ ವಿಠಲ' ಅಂಕಿತದ ಶ್ರೀಶ್ಯಾಮರಾಯ ದಾಸರೂ, ತಮಗೆ ಶ್ರೀಪುರಂದರದಾಸರೇ ದಾಸದೀಕ್ಷೆ-ಅಂಕಿತಗಳನ್ನು ಸ್ವಪ್ನದಲ್ಲಿ ದಯೆಪಾಲಿಸಿದ ಗುರುಗಳೆಂದೂ, ನಿನ್ನ ಒಂದೇ ಒಂದು ಹಾಡು ನನ್ನ ಹತ್ತು ಹಾಡುಗಳ ಫಲಕ್ಕೆ ಸಮಾನವೆಂದು ಶ್ರೀಪುರಂದರದಾಸರೇ ತಮಗೆ ಅನುಗ್ರಹಿಸಿ ಹೇಳಿರುವರೆಂದೂ—ಸ್ಪಷ್ಟವಚನಗಳಲ್ಲಿ ಹೇಳಿದ್ದಾರೆ. ಶ್ರೀಪುರಂದರದಾಸರ ಕೃತಿಗಳಿಗೂ ಈ ತಂದೆ ಪುರಂದರದಾಸರ ಕೃತಿಗಳಿಗೂ ಎಲ್ಲಿಯದೆಲ್ಲಿ ಅಂತರ? ಸಾಹಿತ್ಯ ವಿಮರ್ಶಕರಿಗೆ ಈ ದಾಸರ ಸಾಹಿತ್ಯದಲ್ಲಿ, ಯಾವ ಬಗೆಯ ಸಾಹಿತ್ಯಿಕ ಗುಣಗಳೂ ಕಂಡುಬಾರವು. ಆದುದರಿಂದಲೇ ಈ ದಾಸರ ಮುಗ್ಧ ಆತ್ಮವಿಶ್ವಾಸ, ವಿಮರ್ಶಕರಿಂದ ನಗೆಗೆ ಎಡೆಯಾಗದಿರದು.

'ಶರಣು ಶ್ರೀವ್ಯಾಸಮುನಿ ಚರಣಾಬ್ಜಭೃಂಗ' ಎಂದಿರುವ ವಿಜಯದಾಸರ ಹೆಸರಿನಿಂದ ಪ್ರಸಿದ್ಧವಾಗಿರುವ ಕೃತಿಯು ಅವರದೇ? — ಎಂದು ಯಾರಿಗೂ

ಸಂದೇಹ ಬರುವಂತಿದೆ. ಏಕೆಂದರೆ ಆ ಹಾಡಿನ ಕೊನೆಯ ಭಾಗ ಹೀಗಿದೆ:

" ಅಂತ್ಯಕಾಲದಲಿ ಸಿರಿವಿಠಲನನು ಸ್ಮರಿಸುತ ಸು-
ಪಂಥವನು ಹಿಡಿದು ಸದ್ಗತಿಯಲ್ಲಿ ಸೇರಿದರು
ಸಂತತವು ದಾಸರಪ್ರಿಯ ವಿಜಯವಿಠಲನಂಘ್ರಿಗಳ
ಚಿಂತೆಯೊಳಗಿಟ್ಟ ಗುರುವೆ ॥

ಇಲ್ಲಿ 'ಸಿರಿವಿಠಲ' 'ವಿಜಯವಿಠಲ' ಎಂದು ಎರಡು ಪದಗಳೂ ಅಂಕಿತಗಳಂತೆ ಕಾಣುತ್ತವೆ. 'ಸಿರಿವಿಠಲ' ಎಂದಿರುವಲ್ಲಿ ಛಂದೋಗಣಗಳು ಸರಿಯಾಗಿವೆ. 'ವಿಜಯವಿಠಲ' ಎಂದಿರುವಲ್ಲಿ ಆ ಗಣನಿಯಮ ತಪ್ಪಿಹೋಗಿದೆ. ಅಲ್ಲಿ 'ವಿಜಯ' ಎಂಬ ಪದವು ಹೆಚ್ಚಿಗೆ ಸೇರಿದಂತಿದೆ. ಅದನ್ನು ತೆಗೆದು ಬಿಟ್ಟರೆ, ಛಂದೋನಿಯಮ ಸರಿಯಾಗುತ್ತದೆ. ಆದುದರಿಂದಲೇ ಈ ಹಾಡು ವಿಜಯವಿಟ್ಠಲದಾಸರದಾಗಿರದೆ, ಸಿರಿವಿಟ್ಠಲ ದಾಸರದಾಗಿರಬಹುದೆಂದು ನಮಗೆ ತೋರುತ್ತದೆ.

ನಮ್ಮ ಈ ತೋರಿಕೆಗೆ ಇನ್ನೂ ಹೆಚ್ಚಿನ ಪ್ರಮಾಣವಾಗಿ ನಿಂತುದೆಂದರೆ, ಈ ಕೃತಿಯಲ್ಲಿಯ ೫ ನೆಯ ಪದ್ಯ:

" ಘೃತದ ಬಿಂದಿಗೆ ತಂದ ತಿಥಿಯ ಓಗರವುಂಡ
ಸತಿಯಳೆಂದಾ ನುಡಿಗೆ ಚತುರ ಭಾಗ್ಯವನಿತ್ತ
ಪಥದಲ್ಲಿ ತಾ ಕಾಯ್ದು ಪಥವನ್ನು ತಪ್ಪಿದರೆ
ಹಿತನಾಗಿ ಧೃತಿನೋಡಿದ ॥
ಕ್ಷಿತಿಯ ಶೋಧಿಸೆ ಅಪರಿಮಿತವಾಗಿ ಉಣ್ಣಿಸಿದ
ಯತಿಯ ಪಂಕ್ತಿಗೆ ಭಾಗಿರಥಿ ನದಿಯ ತರಿಸಿದ
ಸುತನಾಗಿ ನೀರನ್ನು ನಿಶಿತದಲಿ ತಂದನ-
ಪ್ರತಿ ದೈವ ತಾ ಕಿಂಕರ ॥ ೫ ॥

ಈ ನುಡಿಯಲ್ಲಿ ಸೂತ್ರರೂಪದಿಂದ ಬಂದ ಘಟನೆಗಳೆಲ್ಲ ಗುರು-ಪುರಂದರದಾಸರ ಕೃತಿಗಳಲ್ಲಿ ಕಥೆಗಳಾಗಿ ವಿಸ್ತಾರಗೊಂಡಿವೆ. ಗುರು-ಪುರಂದರದಾಸರು ಸೃಷ್ಟಿಸಿದ ಕಥೆಗಳೆಲ್ಲ ಒಂದೆ ನುಡಿಯಲ್ಲಿ ಹೀಗೆ ಸಂಕ್ಷೇಪಗೊಂಡು ಬರಬೇಕಾದರೆ, ಈ ಪದ್ಯದ ಕರ್ತೃ, ಗುರು ಪುರಂದರದಾಸರ ತರುವಾಯ ಆಗಿ ಹೋಗಿರಬೇಕು! ಆದುದರಿಂದಲೇ ಈ ಕೃತಿಯ ಕರ್ತೃ ವಿಜಯದಾಸರಾಗಿರದೆ, [illegible] ಹೇಳ

ಬೇಕಾಗುವುದು. ಈ ಅಂಕಿತ ಯಾವ ದಾಸರದೆಂಬುದನ್ನು ಸಂಶೋಧಿಸ ಬೇಕು. ಶ್ರೀವಿಜಯದಾಸರವೇ ಎಂದು ಹೇಳಬಹುದಾದ ಹಾಡು-ಸುಳಾದಿ ಗಳಲ್ಲಿ ಈ ಬಗೆಯ ಪವಾಡಗಳಾವುವೂ ಬಂದಂತಿಲ್ಲ.

ಗುರುಪುರಂದರದಾಸರು ಆಧುನಿಕರಾಗಿರುವರೆಂಬುದಕ್ಕೆ, ಅವರ ಇನ್ನೊಂದು ರಚನೆಯನ್ನೂ ನಾವು ಉದಾಹರಣೆಗೆ ತೆಗೆದುಕೊಳ್ಳಬಹುದು:

ಒಂದಾನೊಂದು ದಿವಸ ವ್ಯಾಸರಾಯರು, ಅತಿಸಾಧನೆಯ ದ್ವಾದಶಿಯ ಪಾರಣೆಯ ಪ್ರಸಾದಕ್ಕೆ ಬರಲು ಪುರಂದರದಾಸರಿಗೆ ಔತಣವಿತ್ತರಂತೆ. ಆದರೆ ದಾಸರು ದ್ವಾದಶಿಯ ದಿನ ಬೆಳಗಿನಲ್ಲಿ ಸ್ನಾನ-ಸಂಧ್ಯಾ-ಪೂಜಾದಿ ನಿತ್ಯಕರ್ಮ ಗಳನ್ನು ಮುಗಿಸಿಕೊಂಡು, ಹಾಡುಗಳನ್ನು ರಚಿಸಿ ಬರೆಯುವುದರಲ್ಲಿ ಆಸಕ್ತ ರಾಗಿ, ಗುರುಗಳು ತಮಗಿತ್ತ ಔತಣವನ್ನು ಮರೆತೇಬಿಟ್ಟರಂತೆ. ದಾಸರು ಪ್ರಸಾದಕ್ಕೆ ಬಾರದೆ ತಡಮಾಡಿದುದರಿಂದ, ಮಠದ ದಿಂಡೆಯರೂ ಪಂಡಿ ತರೂ ಕೋಪಗೊಂಡು ಗರ್ಜಿಸಿದರಂತೆ. ವ್ಯಾಸರಾಯರ ಪಾರಣೆಯ ಪ್ರಸಾದ ಸಕಾಲದಲ್ಲಿ ಮುಗಿದಿರಬಹುದು.

'ಹಗಲು ಒಂಬತ್ತು ತಾಸಾಗಿರಲು ಆಗೆದ್ದು' ದಾಸರು ಗುರುಗಳ ಬಳಿಗೆ ಬಂದು, ನಮಸ್ಕರಿಸಿ, ಅಪರಾಧಕ್ಕಾಗಿ ಕ್ಷಮೆಯನ್ನು ಯಾಚಿಸಿಪರಂತೆ, ದಾಸರನ್ನು ಕೋಪದಿಂದ ಬೈದಾಡಿದ ದಿಂಡೆಯರಿಗೂ ಪಂಡಿತರಿಗೂ ದಾಸರ ಯೋಗ್ಯತೆಯೆಂತಹದೆಂಬುದನ್ನು ತೋರಿಸಬೇಕೆಂದು, ಶ್ರೀವ್ಯಾಸರಾಯರು ಸಿಂಹಾಸನದಲ್ಲಿ ಬಂದು ಕುಳಿತು, ಅಲ್ಲಿಗೆ ದಾಸರನ್ನು ಬರಮಾಡಿಕೊಂಡ ರಂತೆ. ದಾಸರು ಅಂದು ರಚಿಸಿದ ಪದಗಳ ಪುಸ್ತಕ ಅವರ ಕೈಯಲ್ಲಿದ್ದಿತು. ಮುಂದಿನ ವಿಷಯವನ್ನು ದಾಸರ ಮಾತಿನಲ್ಲಿಯೆ ಕೇಳಿರಿ :

"ಪದ್ಯಗಳ ಬರೆದ ವಹಿ ಮುಂಕೊಂಡು ಹೋಗಿ
ಮಾಧ್ವಶಾಸ್ತ್ರದ ಮೇಲೆ ಕುಳ್ಳಿರಲಾಗ ಕಂಡು ॥
ಹದನನರಿಯದೆ ದಿಂಡೆಯನೊಬ್ಬನು ಆ
ಪದದ ವಹಿ ತೆಗೆದು ಬಿಸುಟಿದನಾಗ ॥ ೬ ॥

ಎರಡಾವರ್ತಿ ತೆಗೆಯಲಾಗ ತಿರುತಿರುಗಿ ಬಂದು
ವರಪುಸ್ತಕ ಬಂದು ಕುಳ್ಳಿರೆ ಬೇಗ ॥
ಗುರುವ್ಯಾಸರಾಯರು ನೋಡಿ ಹರುಷದಿಂದ
ಕರೆದು ಬೈದರವರಿಗೆ 'ಕಡು ಮೂರ್ಖ' ಎಂದು ॥ ೭ ॥

ಬರೆದ ವಹಿಯ ತೆಗೆದು ಬಿಸಾಟಿದರೆ
ತಿರುತಿರುಗಿ ಅದು ಮೇಲೆ ಬರೆ ||
ವರ ನಾಲ್ಕು ವೇದಾರ್ಥಗಳುಂಟು ಅದರಲ್ಲಿ
ನರರುತ್ತಮರೆಲ್ಲ ನೋಡಿ ಹರುಷದಿಂದ
ಧರೆಯೊಳು ಪುರಂದರ ಉಪನಿಷತ್ತೆಂದರು."

ಈ ಹಾಡನ್ನು, ಹದಿನಾರನೆಯ ಶತಮಾನದ ಪೂರ್ವಾರ್ಧದಲ್ಲಿ, ಶ್ರೀಪುರಂ-ದರದಾಸರಂತಹ ಶ್ರೇಷ್ಠ ವಾಗ್ಗೇಯಕಾರರ ಸಾಂನಿಧ್ಯದಲ್ಲಿ ಇರುವ— ಅವರ ಮಗ ಮಧ್ವಪತಿಯು ರಚಿಸಿರಬಹುದೆಂದು ಯಾರಿಗಾದರೂ ಎನಿಸಬಹುದೇ? ಈ ಹಾಡಿನಲ್ಲಿ ಮೂರು ಸಲ ಬಳಸಲಾಗಿರುವ 'ವಹಿ' ಎಂಬ ಪರಭಾಷಾಪದವನ್ನು, ಆಗಿನ ಕಾಲದ ಸಾಹಿತ್ತಿಕರು ಇನ್ನೆಲ್ಲಿಯಾದರೂ ಬಳಸಿರುವರೇ? 'ಆವರ್ತಿ' 'ಒಂಬತ್ತು ತಾಸು' 'ಅವನಿಗೆ ಬೈದರು' ಮೊದಲಾದ ಪದ-ಪ್ರಯೋಗಗಳೆಲ್ಲ ೧೯ ನೆಯ ಶತಮಾನದ ಉತ್ತರಾರ್ಧದುವೇ ಎಂದು ಹೇಳಬೇಕಾಗುವುದು. ಇದೇ ಹಾಡಿನಲ್ಲಿ 'ವಿಟ್ಠಲನ ಗುಡಿಯೊಳಗೆ ಬೆಂಕೆ ಹತ್ತಲು' ದಾಸರು ವ್ಯಾಸರಾಯರ ಎದುರು ಕುಳಿತಿರುವಾಗಲೇ ಕೈಯಿಂದ ಒರಸಿ ನಂದಿಸಿದ ಪವಾಡವೂ ಕಥಿತವಾಗಿದೆ. ಶೈಲಿಯಲ್ಲಿ ಅನುಚಿತಪದಪ್ರಯೋಗಗಳು ಈ ಪದ್ಯದಲ್ಲಿ ಉದ್ದಕ್ಕೂ ಇವೆ. ಗುರುಪುರಂದರದಾಸರ ಮುಗ್ಧ ಭಕ್ತಿ, ಪವಾಡಗಳ ಸೃಷ್ಟಿ, ಪುರಂದರದಾಸರ ಘನತೆಯನ್ನು ಹೆಚ್ಚಿಸುವುದಕ್ಕೆ ಸಹಾಯವನ್ನೇನೂ ಮಾಡಲಾರವೆಂದು ನಮಗೆ ಎನಿಸುವುದು.

ಗುರುಪುರಂದರದಾಸರಿಂದ ರಚಿತವಾದ ಶ್ರೀದಾಸರ 'ಅದ್ಭುತ ಮಹಿಮಾ' ಕಥನದ ಹಾಡುಗಳು ಇನ್ನೂ ಆರೇಳರಷ್ಟು ಇವೆ. ಬಡವಿಯಾಗಿ ಬಾಳುವ ಪುರಂದರದಾಸರ ಪತ್ನಿಗೆ—ದಾಸರು ಮನೆಯಲ್ಲಿ ಇಲ್ಲದಾಗ—ವೇಷಾಂತರದಿಂದ ಶ್ರೀವಿಟ್ಠಲನು ಬಂದು, ವಿವಿಧ ರೀತಿಯ ಸಂಪತ್ತನ್ನು ದಯೆಪಾಲಿಸಿದಂತೆಯೂ, ಪುರಂದರದಾಸರು ಮರಳಿ ಬಂದು ಸಂಪತ್ತನ್ನು ನೋಡಿ ಕಳವಳಗೊಂಡವರಾಗಿ, ಈ ಸಂಪತ್ತನ್ನು ಮರಳಿ ಒಯ್ಯದಿದ್ದರೆ 'ಜಿಹ್ವೆ ಕಿತ್ತಿಕೊಂಡು' ಸಾಯುವೆನೆಂದು ನಿರ್ಣಯಿಸಿದಂತೆಯೂ, ಆಗ ಶ್ರೀಹರಿ-ಮಾಯೆಯಿಂದ ಆ ಸಂಪತ್ತು ಇಲ್ಲವಾದಂತೆಯೂ, ಆಗ ದಾಸರು ಹರುಷಗೊಂಡು ಗಾಯನ ಮಾಡಿದಂತೆಯೂ ಕಥೆಯನ್ನು ಚಿತ್ರಿಸುವ ಏಳು ನುಡಿಯ ಒಂದು ಕೃತಿಯಿದೆ. ಅದರಂತೆಯೇ, ಹಂಗಿಸಿದ ಬೀಗನನ್ನು ಮನೆಗೆ

ಊಟಕ್ಕೆ ಕರೆದು ದಿವ್ಯಾನ್ನವನ್ನು ಉಣ್ಣಿಸಿ ಸಂತೃಪ್ತಿಪಡಿಸಿದ ಪವಾಡವನ್ನು ವಿವರಿಸುವ ೧೧ ನುಡಿಗಳ ಮತ್ತೊಂದು ಕೃತಿಯೂ ಪ್ರಚಾರದಲ್ಲಿದೆ.

ಶ್ರೀಹರಿಯು ಶ್ರೀ–ಭೂ–ದುರ್ಗೆಯರೊಂದಿಗೆ ಧರೆಗಿಳಿದು ಬಂದು, 'ನಾರದರೇ ಶ್ರೀಪುರಂದರದಾಸರು' ಎಂದು ಹೇಳಿದನೆಂದೂ, ಗಂಗಾ ಗೌತಮಿ ಮೊದಲಾದ ಪವಿತ್ರನದಿಗಳು ನಿತ್ಯವೂ ಬಂದು ದಾಸರ ಮನೆಯಂಗಳವನ್ನು ಸಾರಿಸಿ, ರಂಗವಲ್ಲಿಯನ್ನು ಇಕ್ಕುವರೆಂದೂ—ಪುರಂದರದಾಸರ ಒಬ್ಬ ಮಗನೇ—ಕಣ್ಣಾರೆ ಕಂಡು ಹಾಡಿದಂತಹ ಒಂದು ನಾಟ್ಯಗೀತವೂ ಗುರು ಪುರಂದರದಾಸರ ಅಂಕಿತದಲ್ಲಿದೆ. ಅದರಂತೆಯೇ ಗುರುಗಳಾದ ಶ್ರೀವ್ಯಾಸರಾಯರು, ನಿತ್ಯವೂ ನಿಶಾಂತಪ್ರಹರದಲ್ಲಿ ತಪ್ಪದೆ ಬಂದು, ದಾಸರ ಕುಟೀರಕ್ಕೆ ಪ್ರದಕ್ಷಿಣೆಯನ್ನು ಸಲ್ಲಿಸುತ್ತಿದ್ದ ಮತ್ತೊಂದು ಕೃತಿಯನ್ನೂ ಇವರೇ ರಚಿಸಿದ್ದಾರೆ.

ದಾಸರು ತಮ್ಮ ತಂದೆಯ ಶ್ರಾದ್ಧಕ್ಕೆ ವ್ಯಾಸರಾಯರನ್ನೂ ಶ್ರೀಪಾದರಾಜರನ್ನೂ ಬರಮಾಡಿಕೊಂಡಾಗ, ಲಕ್ಷ್ಮೀ-ಸರಸ್ವತೀ ಮೊದಲಾದ ದೇವಸ್ತ್ರೀಯರು ಅಡಿಗೆಮಾಡಿ ಬಡಿಸಿದರಂತೆ. ಆಗ ಬ್ರಹ್ಮಾದಿದೇವತೆಗಳೂ ಈ ವೈಭವನ್ನು ನೋಡಲು ಭೂಮಿಗಿಳಿದು ಬಂದಿದ್ದರಂತೆ. ಈ ಕಥಾನಿರೂಪಣೆಗಾಗಿ ಈ ದಾಸರು ೫ ಷಟ್ಪದಿಗಳನ್ನು ಬಳಸಿಕೊಂಡಿದ್ದಾರೆ. ಅಪ್ಪಣ್ಣಭಾಗವತರ ವೇಷದಿಂದ ಹರಿಯು ತುಪ್ಪದ ಬಿಂದಿಗೆಯನ್ನು ತಂದ ಮಹಿಮಾಕಥನಕ್ಕಾಗಿ ಇವರು, ೧೨ ನುಡಿಗಳನ್ನೊಳಗೊಂಡ ಒಂದು ದೀರ್ಘಕವನವನ್ನು ರಚಿಸಿದ್ದಾರೆ. ಇವೆಲ್ಲ ಪದ್ಯಗಳಲ್ಲಿಯೂ ೧೬ ನೆಯ ಶತಮಾನದ ಭಾಷಾಪದ್ಧತಿಯನ್ನು ನಾವು ಕಾಣಲಾರೆವು. ಆದುದರಿಂದಲೇ ಗುರುಪುರಂದರದಾಸರ ಕೃತಿಗಳು ದಾಸರ ಚರಿತ್ರೆಗೆ, ವಾಸ್ತವಪ್ರಮಾಣಗಳಿಗಾಗಿ ನಿಲ್ಲಲಾರವೆಂದು ಹೇಳಬೇಕಾಗುವುದು. ಈ ಗುರುಪುರಂದರದಾಸರು ಹೇಳಿರುವ ದಾಸರ ಮಹಿಮಾಕಥನಗಳನ್ನೇ ನಮ್ಮ ಪರಂಪರೆಯ ಹರಿದಾಸರು ಪುರಸ್ಕರಿಸಿದ್ದಾರೆ. ಇವುಗಳಲ್ಲಿಯ ಆಭಾಸಗಳಾವುವನ್ನೂ ಗಣನೆಗೆ ತಾರದೆ, ಈ ಕಥೆಗಳನ್ನೇ ಪುರಂದರದಾಸರ ಜೀವನಚರಿತ್ರೆಯೆಂದು ಪ್ರಚಾರಮಾಡುತ್ತಾರೆ.

## ೮ ಪುರಂದರದಾಸರ ಸಾಹಿತ್ಯದಲ್ಲಿ ಅವರ ಜೀವನ

ಪುರಂದರದಾಸರು ಶ್ರೀಹರಿಯ ದೀಕ್ಷಾಬದ್ಧ ಭಕ್ತರು. ಕನ್ನಡನಾಡಿನ ಭಾಗವತ ಕವಿಗಳ ಪರಂಪರೆಯ ಪದ್ಧತಿಯನ್ನೇ ಇವರೂ ಅನುಸರಿಸಿದಂತೆ

ತೋರುವುದು. ಭಾಗವತಪಂಥದ ಕವಿಗಳಾರೂ ತಮ್ಮ ಸ್ವಚರಿತ್ರೆಯನ್ನು, ತಮ್ಮ ಕೃತಿಗಳಲ್ಲಿ ಸ್ವಲ್ಪವೂ ಹೇಳಲು ಮನಸ್ಸುಮಾಡಿಲ್ಲ. ಅವರ ಅಂಕಿತ, ಉಪಾಸ್ಯದೈವತ ಇವುಗಳಷ್ಟೇ ಅವರ ಕೃತಿಯಲ್ಲಿ ಕಾಣುವುವು. ಕನ್ನಡನಾಡಿನ ಮೊದಲ ಭಾಗವತಕವಿಯಾಗಿ ನಮಗೆ ಚೌಂಡರಸನು ಕಾಣುವನು. ಇವನು **ಪಂಡರಿಗೆಯ** ವಿಟ್ಠಲನ ಉಪಾಸಕ. ಭಾಗವತಧರ್ಮಿಗಳ ಪದ್ಧತಿಯಂತೆ ಕಾವ್ಯಪ್ರಾರಂಭದಲ್ಲಿ ವಿಷ್ಣುಪ್ರಾಧಾನ್ಯ ಪಂಚಾಯತನ ದೇವತೆಗಳನ್ನು ಸ್ತುತಿಸುತ್ತಾನೆ. ತನ್ನ ಸ್ಥಳ-ಕಾಲಗಳ ಬಗೆಗೆ ಈತನು ತನ್ನ 'ಅಭಿನವದಕುಮಾರ ಚರಿತ್ರ' ಎಂಬ ಚಂಪೂಕೃತಿಯಲ್ಲಿ ಒಂದು ಮಾತನ್ನೂ ಹೇಳಿಕೊಂಡಿಲ್ಲ. ಆ ಮೇಲೆ ಒಬ್ಬರ ಹಿಂದೆ ಒಬ್ಬರಂತೆ ಮುಂದೆ ಬಂದ ಕುಮಾರವ್ಯಾಸ, ಲಕ್ಷ್ಮೀಶ, ಭಾಗವತದ ಕರ್ತೃಗಳು, ಕುಮಾರ ವಾಲ್ಮೀಕಿ—ಇವರಾರೂ ತಮ್ಮ ಸ್ಥಳ-ಕಾಲ-ಜೀವನಗಳ ವಿಚಾರದಲ್ಲಿ ಏನನ್ನೂ ಹೇಳದೆ, ಕನ್ನಡಸಾಹಿತ್ಯದ ಪ್ರಪಂಚದಲ್ಲಿ ಇದುವರೆಗೂ ಒಂದು ವಾದದ ವಿಷಯವಾಗಿ ಕುಳಿತಿದ್ದಾರೆ.

ಪುರಂದರದಾಸರೂ ಈ ಮಾರ್ಗವನ್ನೇ ಅನುಸರಿಸಿದ್ದಾರೆ. ತಮ್ಮ ಚರಿತ್ರೆಯನ್ನು ಪ್ರಕಟಿಸಬೇಕೆಂದು ಅವರು ಎಲ್ಲಿಯೂ ಹವಣಿಸಿದಂತೆ ಕಾಣುವುದಿಲ್ಲ ಎಂತಲೇ ಆವರ ಜನ್ಮಸ್ಥಳ ಒಡೆಯದ ಒಗಟ! ಹರಿದಾಸ ದೀಕ್ಷಾಪೂರ್ವದ ಜೀವನವಿಷಯ, ಕಲ್ಪನೆಯ ಅಭಾಸವುಯ! ಲೌಕಿಕ ಜೀವನದಲ್ಲಿಯ ಬಂಧು-ಬಾಂಧವಸಂಬಂಧ, ಏಳು, ಬೀಳು, ಸುಖ—ದುಃಖ ಇವಾವುವೂ, ಅವರ ಶಬ್ದಪ್ರಮಾಣಗಳಿಂದ ನಮಗೆ ಸ್ಪಷ್ಟವಾಗುವುದಿಲ್ಲ. ಶ್ರೀ ಪುರಂದರದಾಸರ ಕೆಲವೊಂದು ಕೃತಿಗಳಿಂದ, ನಮ್ಮ ಊಹೆ–ಅನುಮಾನಗಳು, ಸ್ವಲ್ಪಮಟ್ಟಿಗೆ ಅವರ ಜೀವನಭಾಗದ ವಾಸ್ತವಸಾಮೀಪ್ಯವನ್ನು ಕಂಡುಹಿಡಿಯಬಹುದಾಗಿದೆ.

ಪುರಂದರದಾಸರು ಸ್ವವಿಷಯಪರಿಚಯವನ್ನು ಮೊತ್ತಮೊದಲು ಮಾಡಿಕೊಟ್ಟಿರುವುದು, ಗುರುಗಳಾದ ಶ್ರೀವ್ಯಾಸರಾಯರನ್ನು ಕುರಿತು ರಚಿಸಿದ ಸುಳಾದಿಯಲ್ಲಿಯೇ ಎಂದು ಕಾಣುವುದು.

"ವ್ಯಾಸರಾಯರ ಚರಣಕಮಲದರ್ಶನವೆನ-
ಗೇಸು ಜನ್ಮದ ಸುಕೃತಫಲದಿ ದೊರಕಿತೊ, ಎನ್ನ
ಸಾಸಿರ ಕುಲಕೋಟಿ ಪಾವನವಾಯಿತು——

ಶ್ರೀಶನ ಭಜಿಸುವುದಕಧಿಕಾರಿ ನಾನಾದೆ.
ದೋಷರಹಿತನಾದ ಪುರಂದರವಿಠಲನ
ದಾಸರ ಕರುಣವು ಎನ್ನ ಮೇಲೆ ಇರಲಾಗಿ॥"

ದಾಸರು ತಮ್ಮ ಸ್ವಂತದ ಸಾಹಿತ್ಯದಲ್ಲಿ ಈ ಅವಸ್ಥೆಯಿಂದಲೇ ನಮಗೆ ಪರಿಚಿತರಾಗುವರು. 'ಗುರುವಿನ ಒಲುಮೆಯು ಆಗುವ ತನಕ ದೊರೆಯ ದಣ್ಣ ಮುಕುತಿ' ಎಂಬ ಕಾತರಭಾವದಲ್ಲಿರುವಾಗ, ಪುರಂದರದಾಸರಿಗೆ ವ್ಯಾಸರಾಯರ ಸಂದರ್ಶನದೊರೆತು, ಅವರ ಗುರುತ್ವಕ್ಕೆ ಇವರು ಒಳಗಾಗಿ-ದ್ದಾರೆ. ಅದುವರೆಗೆ ಇವರು ವಿಷ್ಣುಭಕ್ತರಾಗಿ ಇರಬಹುದು, ಆದರೆ ಯಾರ ಗುರುತ್ವವನ್ನೂ ವಹಿಸಿರಲಿಲ್ಲವೆಂದು ತೋರುವುದು. ತಮಗೆ ಗುರುವು ಒಬ್ಬ ಬೇಕೇ ಬೇಕು—ಎಂದು ಪುರಂದರದಾಸರು ಹಂಬಲಿಸಿ ಯೋಗ್ಯ ಗುರುಗಳನ್ನು ಹೊಂದಿರಬಹುದೆಂಬುದಕ್ಕೆ ಅವರ ಈ ಮಾತು ಗಳೇ ಸಾಕ್ಷಿ.

'ಗುರು ಉಪದೇಶವಿಲ್ಲದ ಜ್ಞಾನವು
ಗುರು ಉಪದೇಶವಿಲ್ಲದ ಸ್ನಾನವು
ಗುರು ಉಪದೇಶವಿಲ್ಲದ ಧ್ಯಾನವು
ಗುರು ಉಪದೇಶವಿಲ್ಲದ ಜಪವು
ಗುರು ಉಪದೇಶವಿಲ್ಲದ ತಪವು
ಗುರು ಉಪದೇಶವಿಲ್ಲದ ಮಂತ್ರ
ಗುರು ಉಪದೇಶವಿಲ್ಲದ ತಂತ್ರ (ಇವೆಲ್ಲ)
ಉರಗನ ಉಪವಾಸದಂತೆ ಕಾಣಿರೋ।
ಗುರು ವ್ಯಾಸರಾಯರೇ ಕರುಣದಿಂದಲಿ ಎನಗೆ
ಪುರಂದರ ವಿಠಲನೇ ಪರದೈವವೆಂದರುಹಿ
ದುರಿತಭಯವನೆಲ್ಲ ಪರಿಹರಿಸಿದರಾಗಿ
ವರಮಹಾಮಂತ್ರ ಉಪದೇಶಿಸಿದರಾಗಿ॥

'ವಿಷ್ಣುಸರ್ವೋತ್ತಮತ್ವ' ತತ್ತ್ವವನ್ನು ದಾಸರಿಗೆ ಮನವರಿಕೆ ಮಾಡಿ ಕೊಟ್ಟವರು, ಶ್ರೀ ವ್ಯಾಸರಾಯರು. ಅದುವರೆಗೆ ಇವರ ದೇವರ ವಿಷಯಕ ವಾದ ಕಲ್ಪನೆ ಬೇರೆ ರೀತಿಯದಾಗಿ ಇದ್ದಿತೆಂಬುದು, ಇಲ್ಲಿಯ ಮಾತುಗಳಿಂದ ಸಿದ್ಧವಾಗುವುದು. ಕನ್ನಡ ನಾಡಿನಲ್ಲಿ ಆಗಿನ ಕಾಲದಲ್ಲಿ ಹೆಚ್ಚು ಪ್ರಚಾರದ

ಲ್ಲಿದ್ದ ಭಾಗವತಪಂಥವು ಹರಿಭಕ್ತಿಪ್ರಧಾನ ಪಂಥವಾದರೂ, ಅದು ಹರಿ-ಹರರಲ್ಲಿ ಭೇದ ಮಾಡಕೂಡದೆಂದು ಬೋಧಿಸುವಂತಹದಾಗಿತ್ತು. ಪುರಂದರ ದಾಸರ ಮನೆತನ, ಈ ಬಗೆಯ ಭಾಗವತ ಪಂಥದ ಪ್ರಭಾವಕ್ಕೆ ಒಳಗಾಗಿರ ಬಹುದೆಂಬು, ಈ ಸುಳಾದಿಯ ಮಾತುಗಳು ಕಲ್ಪಿಸಹಚ್ಚುತ್ತವೆ. ಇದರ ಮುಂದಿನಭಾಗದಲ್ಲಿಯ ಮಾತುಗಳು, ಈ ಕಲ್ಪನೆಯನ್ನು ಪರಿಪೋಷಿಸಿ ದೃಢಗೊಳಿಸುವಂತಿವೆ :

'ಅಂಕಿತವಿಲ್ಲದ ದೇಹ ನಿಷೇಧವು
ಅಂಕಿತವಿಲ್ಲದ ಕಾವ್ಯ ಶೋಭಿಸದು
ಅಂಕಿತವಿಲ್ಲದೆ ಇರಬಾರದೆಂದು ಚ-
ಕ್ರಾಂಕಿತವನು ಮಾಡಿ ಎನ್ನಂಗಕೆ
ಪಂಕಜನಾಭ ಶ್ರೀಪುರಂದರ ವಿಠಲನ
ಅಂಕಿತವೆನಗಿತ್ತ ಗುರುವ್ಯಾಸ ಮುನಿರಾಯ !'

ಭಾಗವತರು ದ್ವಾದಶನಾಮಧಾರಿಗಳಾದರೂ, ಅವರು ಪಂಚಮುದ್ರೆ ಗಳನ್ನು ಧಾರಣ ಮಾಡುವುದಿಲ್ಲ. ಅಲ್ಲದೆ ಅವರು ಗುರುಗಳಿಂದ ತಪ್ತ ಮುದ್ರಾಂಕನವನ್ನೂ ಪಡೆಯುವುದಿಲ್ಲ. ಶ್ರೀವ್ಯಾಸರಾಯರು ಪುರಂದರ ದಾಸರಿಗೆ ತಪ್ತಮುದ್ರಾಂಕನ ದೀಕ್ಷೆಯನ್ನು ಕೊಟ್ಟು ಅವರನ್ನು ಮಾಧ್ವ ವೈಷ್ಣವರನ್ನಾಗಿ ಮಾಡಿದರೆಂಬುದು, ಇಲ್ಲಿಯ ಮಾತುಗಳಿಂದ ಸಿದ್ಧವಾಗು ತ್ತದೆ. ಅಲ್ಲದೆ ಮೊದಲಿನಿಂದಲೂ ಸಂಗೀತಜ್ಞಾನಿಗಳಾದ ಪುರಂದರದಾಸರು, ಅಂಕಿತವಿಲ್ಲದೆ ಪದಗಳನ್ನು ರಚಿಸುತ್ತಿರಬಹುದೆಂದೂ, ಶ್ರೀವ್ಯಾಸರಾಯರೇ ಅವರಿಗೆ ಕಾವ್ಯಾಂಕಿತವನ್ನು ಕೊಟ್ಟರೆಂಬುದೂ, ಈ ಸುಳಾದಿಭಾಗದಿಂದ ಗೊತ್ತಾಗುತ್ತದೆ. ಅಂಕಿತವಿಲ್ಲದೆ ಪೂರ್ವಜೀವನದಲ್ಲಿ ದಾಸರು ಮಾಡಿದ ಹಾಡು-ಕೀರ್ತನೆಗಳನ್ನು, ಪುರಂದರದಾಸರು ಆಮೇಲೆ ಉಪೇಕ್ಷೆಯಿಂದ ತ್ಯಜಿಸಿಬಿಟ್ಟಿರಬಹುದಾಗಿದೆ. ಒಂದು ವೇಳೆ ಅವು ಇದುವರೆಗೆ ಉಳಿದು ಕೊಂಡು ಬಂದಿದ್ದರೂ, ಅಂಕಿತವಿಲ್ಲದುದರಿಂದ ಅವು ಪುರಂದರದಾಸರ ಕೃತಿಗಳೆಂದು ಇಂದಿನವರಿಗೆ ಹೇಗೆ ಗೊತ್ತಾಗಬೇಕು ?

ಇದೇ ಸುಳಾದಿಯ ಕೊನೆಯ ಎರಡು ಸಾಲುಗಳು ಹೀಗಿವೆ :

'ಗುರು ವ್ಯಾಸರಾಯರ ಚರಣವೆನಗೆ ಗತಿ
ಪುರಂದರ ವಿಠಲನ ಅರಿತೆ ಇವರಿಂದ !'

ಈ ಮಾತುಗಳನ್ನು ನೋಡಿದರೆ, ಶ್ರೀಪುರಂದರದಾಸರಿಗೆ ಪರಮಾತ್ಮ ವಿಷಯಕವಾದ ನಿಜಜ್ಞಾನೋಪದೇಶವನ್ನು ಮಾಡಿದವರು ಶ್ರೀವ್ಯಾಸರಾಯರೇ ಎಂಬ ಮಾತು ನಮಗೆ ಗೊತ್ತಾಗುವುದಲ್ಲದೆ, ಪುರಂದರದಾಸರು ಬದುಕಿ ಬಾಳಿದ ಕಾಲವನ್ನು ತಿಳಿದುಕೊಳ್ಳುವುದಕ್ಕೆ ಅನುಕೂಲ ಪ್ರಮಾಣ ನಮಗೆ ದೊರೆಯುತ್ತವೆ. ಪುರಂದರದಾಸರು ತಮ್ಮ ಸಾಹಿತ್ಯದಲ್ಲಿ ತಮ ಜನ್ಮಸ್ಥಳ, ಜನ್ಮಕಾಲ, ಜನ್ಮದಾತೃಗಳ ಹೆಸರು-ದಶೆ, ತಮಗಿಟ್ಟ ವ್ಯವಹಾರ ನಾಮ—ಯಾವುವನ್ನೂ ತಮ್ಮ ಕೃತಿಗಳಲ್ಲಿ ಹೇಳಿಲ್ಲ.

ಶ್ರೀವ್ಯಾಸರಾಯರಂತಹ ಗುರುಗಳು ದೊರೆತ ಸಂಭ್ರಮಭಾವದಲ್ಲಿಯೇ ದಾಸರು ಈ ಭಾವನಿರ್ಭರತೆಯ ಹಾಡನ್ನು ರಚಿಸಿ ಹಾಡಿರಬೇಕು:

"ಹರಿದಾಸರ ಸಂಗ ದೊರೆಯಿತು ಎನಗೀಗ ಇನ್ನೇನಿನ್ನೇನು
ವರಗುರುವುಪದೇಶ ನೆರವಾಯ್ತು ಎನಗೀಗ ಇನ್ನೇನಿನ್ನೇನು ॥ ಪಲ್ಲ ॥

ಮಾಯದ ಸಂಸಾರ ಮಮಕಾರ ತಗ್ಗಿತು ಇನ್ನೇನಿನ್ನೇನು !
ತೋಯಜಾಕ್ಷನಾಮ ಜಿಹ್ವೆಯೊಳ್ ನೆಲಸಿತು ಇನ್ನೇನಿನ್ನೇನು ॥ ೧ ॥

ಹಲವು ದೈವಗಳೆಂಬ ಹಂಬಲ ಬಿಡಿಸಿತು ಇನ್ನೇನಿನ್ನೇನು
ಜಲಜನಾಭನ ಧ್ಯಾನ ಹೃದಯದೊಳ್ ನೆಲಸಿತು ಇನ್ನೇನಿನ್ನೇನು ॥ ೨ ॥

ತಂದೆತಾಯಿ ಮುಚುಕುಂದವರದನಾದ ಇನ್ನೇನಿನ್ನೇನು !
ಸಂದೇಹವಿಲ್ಲ ಮುಕುಂದ ದಯೆಮಾಡಿದ ಇನ್ನೇನಿನ್ನೇನು ॥ ೩ ॥

ಏನೆಂದು ಹೇಳಲಿ ಆನಂದ ಸಂಭ್ರಮ ಇನ್ನೇನಿನ್ನೇನು !
ಆ ನಂದಗೋಪನ ಕಂದನ ಮಹಿಮೆಯು ಇನ್ನೇನಿನ್ನೇನು ! ॥ ೪ ॥

ಎನ್ನ ವಂಶಗಳೆಲ್ಲ ಪಾವನವಾದುವು ಇನ್ನೇನಿನ್ನೇನು !
ಚಿನ್ಮಯ ಪುರಂದರ ವಿಠಲಯ್ಯ ದೊರಕಿದ ಇನ್ನೇನಿನ್ನೇನು ! ॥ ೫ ॥

ಗುರೂಪದೇಶವಾದುದೂ ಅದರಿಂದ ಮಾಯದ ಸಂಸಾರದ ಮಮಕಾರ ತಗ್ಗಿದುದೂ, ಹಲವುದೈವಗಳೆಂಬ ಹಂಬಲ ಬಿಟ್ಟುಹೋದುದೂ, ಎನೆಲ್ಲವೂ ಪುರಂದರವಿಠಲನೇ ಎಂಬ ಜ್ಞಾನವಾದುದೂ, ಈ ಹಾಡಿನಲ್ಲಿ ದಾಸರಿಂದ ನಿರೂಪಿತವಾಗಿದೆ. ದಾಸರ ಸಂಸಾರವಿಷಯಕ ಮೋಹವು ವ್ಯಾಸರಾಯರ ಸಂದರ್ಶನ-ಸದುಪದೇಶಗಳ ತರುವಾಯವೇ ಹೋಗಿರುವುದೆಂದು

ಈ ಪದ್ಯವು ತಿಳುಹಿದರೂ, ಪುರಂದರದಾಸರು ವ್ಯಾಸರಾಯರಂತಹ ಗುರುಗಳನ್ನು ಹುಡುಕುತ್ತ ಬರುವುದಕ್ಕೆ ತಕ್ಕುದಾದ ಮನಃಪರಿವರ್ತನಕ್ಕೆ ಮೂಲಕಾರಣಳು ಅವರ ಸಹಧರ್ಮಿಣಿಯೇ ಎಂಬುದು, ಪುರಂದರದಾಸರ ಈ ಚರಿತ್ರಾತ್ಮಕ ಪದ್ಯದಲ್ಲಿ ದೊರೆಯುವುದು. ಈ ಪದ್ಯ ನಮ್ಮ ನಾಡಿನಲ್ಲಿ ಬಹುಜನರಿಗೆ ಪರಿಚಯದ್ದಾಗಿರುವುದು :

"ಆದದ್ದೆಲ್ಲ ಒಳಿತೇ ಆಯಿತು—ನಮ್ಮ
ಶ್ರೀಧರನ ಸೇವೆಯು ಮಾಡಲು
ಸಾಧನಸಂಪತ್ತಾಯಿತು ॥ ಪಲ್ಲ ॥

ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆ ತಗ್ಗಿಸಿ ನಾಚುತಲಿದ್ದೆ ॥
ಹೆಂಡತಿ–ಸಂತತಿ–ಸಾವಿರವಾಗಲಿ
ದಂಡಿಗೆ–ಬೆತ್ತ ಹಿಡಿಸಿದಳಯ್ಯ ॥ ೧ ॥

ಗೋಪಾಳಬುಟ್ಟಿ ಹಿಡಿಯುವುದಕ್ಕೆ
ಭೂಪತಿಯಂತೆ ನಾಚುತಲಿದ್ದೆ ॥
ಆ ಪತ್ನಿಯು ತಾ ಪ್ರೀತಿಯಿಂದಲಿ
ಗೋಪಾಳಬುಟ್ಟಿಯ ಹಿಡಿಸಿದಳಯ್ಯ ॥ ೨ ॥

ತುಳಸೀಮಾಲೆಯ ಹಾಕುವುದಕ್ಕೆ
ಅಲಸಿಕೊಂಡು ನಡೆಯುತಲಿದ್ದೆ ॥
ಜಲಜಾಕ್ಷಿಯು ಶ್ರೀಪುರಂದರವಿಠಲನ
ತುಳಸೀಮಾಲೆಯ ಹಾಕಿಸಿದಳು" ॥ ೩ ॥

ಇದೊಂದು, ನಾಟ್ಯಗೀತತಂತ್ರದಿಂದ ಪುರಂದರದಾಸರು ತಮ್ಮ ಜೀವನ ಘಟನೆಯನ್ನು ತಿಳುಹಲು ರಚಿಸಿದ ಗೀತವಾಗಿದೆ. ಈ ಗೀತವು ದಾಸದೀಕ್ಷೆ ವಹಿಸಿದವರ ವೇಷ ಭೂಷಣಗಳನ್ನೂ ತಿಳುಹುವಂತಿದೆ

'ನಿಮ್ಮ ಭಾಗ್ಯ ದೊಡ್ಡದೋ, ನಮ್ಮ ಭಾಗ್ಯ ದೊಡ್ಡದೋ?' ಎಂಬ ಕೃತಿಯೂ ದಾಸರ ಲೌಕಿಕಾನುಭವದಲ್ಲಿ ಮೂಡಿದುದಾಗಿ ಕಾಣುತ್ತದೆ. ವಿಜಯನಗರದ ನರಪತಿ ಕೃಷ್ಣದೇವರಾಯನು, ದಾಸರ ತ್ಯಾಗಮಯ ಜೀವನವನ್ನು ಒರೆಗೆ ಹಚ್ಚಿ ನೋಡಬೇಕೆಂದು ಪ್ರಯತ್ನಮಾಡಿ, ಅವರ ಅದ್ವಿತೀಯ ತ್ಯಾಗ-ವೈರಾಗ್ಯಗಳನ್ನು ಪ್ರತ್ಯಕ್ಷ ಕಂಡ ಸಂದರ್ಭದಲ್ಲಿ, ದಾಸವರ್ಯರು ಈ ಹಾಡನ್ನು

ಹಾಡಿದರೆಂದು ಹೇಳುವ ಪರಂಪರೆಯು ಕಥೆಯಿದೆ. ಹಾಗೆ ಇದ್ದರೂ ಇರ ಬಹುದು. ಈ ಘಟನೆಯಲ್ಲಿ—ಅಸ್ವಾಭಾವಿಕತೆ ಅದ್ಭುತಗಳೇನೂ ಇರುವುದಿಲ್ಲ. ಯಾವನೇ ಒಬ್ಬ ಶ್ರೀಮಂತನ ಭೌತಿಕಸಂಪತ್ತು, ಹರಿದಾಸರ ಭಕ್ತಿ-ಜ್ಞಾನ-ವೈರಾಗ್ಯಗಳ ಸಂಪತ್ತು— ಇವುಗಳ ತುಲನಾತ್ಮಕ ವಿವರಣೆ ಇದರಲ್ಲಿ ಇದೆ-ಯೆಂದೂ ನಾವು ತಿಳಿದುಕೊಳ್ಳಬಹುದು :

**"ನಿಮ್ಮ ಭಾಗ್ಯ ಲಕ್ಷ್ಮೀದೇವಿ, ನಮ್ಮ ಭಾಗ್ಯ ನಾರಾಯಣ**
**ನಿಮ್ಮ ಭಾಗ್ಯದೊಡೆಯ ನಮ್ಮ ಪುರಂದರವಿಠಲನೋ ! ॥ ೫ ॥**

ಎಂಬ ಕೊನೆಯ ನುಡಿಯ ಮೂಲಕ, ಶ್ರೀಹರಿಯ ಲಕ್ಷ್ಮೀಪತಿತ್ವವನ್ನೂ ಸರ್ವೋತ್ತಮತ್ವವನ್ನೂ ಲೌಕಿಕಬುದ್ಧಿಯ ಆ ಶ್ರೀಮಂತನಿಗೆ ದಾಸರು ಪರ್ಯಾಯವಚನಗಳಿಂದ ನಿರೂಪಿಸಿದಂತೆ ಮಾಡಿದ್ದಾರೆ. 'ಲಂಗೋಟಿ ಬಲು ಒಳ್ಳೆಯದಣ್ಣ' ಎಂಬ ಕೃತಿಯೂ, 'ಲೊಳಲೊಟ್ಟೆ ಬದುಕು—ಲೊಳಲೊಟ್ಟೆ' ಎಂಬ ಹಾಡೂ, ದಾಸರ ವೈರಾಗ್ಯಜೀವನಪ್ರದರ್ಶಕಗಳಾಗಿವೆ.

## ೯ ಪುರಂದರದಾಸರ ದೇಶಸಂಚಾರ

ಅನೇಕ ಪುಣ್ಯಕ್ಷೇತ್ರ-ತೀರ್ಥಗಳನ್ನಿವರು ಪ್ರತ್ಯಕ್ಷ ಕಂಡವರೆಂಬುದಕ್ಕೆ ಬೇರೆ ಬೇರೆ ಕ್ಷೇತ್ರದೇವತಾಮೂರ್ತಿಗಳನ್ನು ಕುರಿತು ರಚಿಸಿದ ಇವರ ಅನೇಕ ಕೀರ್ತನೆಗಳು ಸಾಕ್ಷ್ಯವನ್ನು ನುಡಿಯುತ್ತಿವೆ. ತಿರುಪತಿಯ ತಿಮ್ಮಪ್ಪನ ಮೇಲೆ ಇವರು ರಚಿಸಿದ ಹಾಡುಗಳು ಲೆಕ್ಕವಾಗದಷ್ಟಿವೆ. ಅದರಂತೆಯೇ ಶ್ರೀರಂಗ-ಪಟ್ಟಣದ ರಂಗನಾಥ ದೇವರನ್ನು ಕುರಿತೂ ಅನೇಕ ಹಾಡುಗಳನ್ನು ರಚಿಸಿ-ದ್ದಾರೆ. ಇದನ್ನು ನೋಡಿದರೆ ದಾಸರು ಬಹಳಸಲ ತಿರುಪತಿ-ಶ್ರೀರಂಗಪಟ್ಟಣ ಗಳನ್ನು ಸಂದರ್ಶಿಸಿರುವರೆಂದು ತೋರುವುದು. ಕಂಚಿ, ಹಸ್ತಿಗಿರಿ, ಸಿಂಹ-ಗಿರಿ, ಕರಿಗಿರಿ, ಶ್ರೀಮುಷ್ಣ, ಮನ್ನಾರುಗುಡಿ, ಸೇತುಬಂಧನ, ಶ್ರೀಶೈಲ, ಕಾಳ ಹಸ್ತಿ, ಉಡುಪಿ ಮೊದಲಾದ ದಕ್ಷಿಣಭಾರತದ ಎಲ್ಲ ಕ್ಷೇತ್ರಗಳನ್ನೂ ಕಂಡಿರು-ವರು. ಗದುಗಿಗೆ ಬಂದು ಶ್ರೀವೀರನಾರಾಯಣನ ದರ್ಶನವನ್ನೂ ಪಡೆದಿರು-ವರು. ಶ್ರೀವೀರನಾರಾಯಣನನ್ನು ನೋಡಿ ಭಾವವಶರಾಗಿ ರಚಿಸಿದ ೨-೩ ಹಾಡು-ಉಗಾಭೋಗಗಳಲ್ಲಿ, ತಮ್ಮ ಅಂಕಿತದೊಂದಿಗೆ 'ಗದುಗಿನ ವೀರ ನಾರಾಯಣ' ಎಂಬ ಮಾತುಗಳನ್ನೂ ಸೇರಿಸಿರುವರು. ಈ ಹಾಡುಗಳನ್ನು

ನೋಡಿದ ಕೆಲವು ಜನ ಪರಂಪರಾಭಿಮಾನಿಗಳೂ, ಸುಪ್ರಸಿದ್ಧ ಸಂಶೋಧಕರೆನಿಸಿಕೊಂಡ ಕೆಲವು ಮಹಾಶಯರೂ, ಪುರಂದರದಾಸರಿಗೂ—ಕುಮಾರವ್ಯಾಸರಿಗೂ ಸಮಕಾಲೀನ ಸಂಬಂಧವನ್ನು ಕಲ್ಪಿಸಿ ಬರೆದಿದ್ದಾರೆ. ಹೀಗೆ ಸಂಬಂಧವನ್ನು ಕಲ್ಪಿಸುವಂತಹ ಯಾವ ಮಾತುಗಳೂ ದಾಸರ ಗದುಗಿನ ರಚನೆಗಳಲ್ಲಿ ಇಲ್ಲವೇ ಇಲ್ಲ. ಹೀಗಿದ್ದರೂ ಇತಿಹಾಸಪ್ರಜ್ಞೆಯ ಅಭಾವದಿಂದ, ಭಾವುಕತನದ ಮುಗ್ಧ ಆವೇಶದಿಂದ, ಪುರಂದರದಾಸರನ್ನೂ ಕುಮಾರವ್ಯಾಸನನ್ನೂ ಸಮಕಾಲೀನರೆಂದು ನಂಬಿ ಬರೆದಿರುವುದು ವಿಷಾದದ ಸಂಗತಿಯಾಗಿದೆ. ಪುರಂದರದಾಸರ ಹರಿದಾಸದೀಕ್ಷಾಜೀವನ ಪ್ರಾರಂಭವಾದುದು ಕ್ರಿ. ಶ. ೧೬ನೆಯ ಶತಮಾನದ ಮೊದಲಿನ ಎರಡು ದಶಕಗಳ ತರುವಾಯ. ಕುಮಾರವ್ಯಾಸನ ಕಾಲನಿರ್ಣಯ ಇನ್ನೂ ಆಗಿಲ್ಲವಾದರೂ, ಪುರಂದರದಾಸರು ಜನ್ಮಿಸುವುದಕ್ಕಿಂತ ಮೊದಲೇ ಕುಮಾರವ್ಯಾಸಕವಿಯು ಆಗಿ ಹೋಗಿರುವನೆಂಬುದು ನಿಸ್ಸಂದಿಗ್ಧವಾದ ವಿಷಯ. ಏಕೆಂದರೆ, ಕನ್ನಡ ಭಾಗವತಗ್ರಂಥದ ಹನ್ನೆರಡೂ ಸ್ಕಂಧಗಳ ಹಸ್ತಪ್ರತಿಯೊಂದು ದೊರೆತಿದ್ದು, ಅದನ್ನು ೧೫೧೯ನೆಯ ಇಸ್ವಿಯಲ್ಲಿ, ರಾಮಪ್ಪ ಎಂಬವನು ರಘುಪತಿ ಎಂಬವನಿಗಾಗಿ ಬರೆದುಕೊಟ್ಟಂತೆ, ಅದರ ಕೊನೆಯಲ್ಲಿ ಸ್ಪಷ್ಟ ಉಲ್ಲೇಖವಿದೆ.

ಕ್ರಿ. ಶ. ೧೫೧೯ರಲ್ಲಿ ಪ್ರತಿಮಾಡಿ ಇರಿಸಿಕೊಳ್ಳುವಷ್ಟು ಲೋಕಪ್ರೀತಿಯನ್ನು ಪಡೆದಿರಬೇಕಾದರೆ ಕನ್ನಡಭಾಗವತ, ಅದಕ್ಕಿಂತ ಮೊದಲು, ಕನಿಷ್ಠ ೫೦–೬೦ ವರ್ಷಗಳ ಹಿಂದೆ ರಚನೆಗೊಂಡಿರಬಹುದಾಗಿದೆ. ಎಂದರೆ, ಕ್ರಿ. ಶ. ೧೫ನೆಯ ಶತಮಾನದ ಮಧ್ಯಕಾಲವಾಗುವುದು. ಈ ಭಾಗವತದ ೧೧ ನೆಯ ಸ್ಕಂಧವನ್ನು ರಚಿಸಿದ **'ಸದಾನಂದಯೋಗಿ'** ಎಂಬವನು, ಕುಮಾರವ್ಯಾಸಕವಿಯು ಸಂಕ್ಷಿಪ್ತವಾಗಿ ಹೇಳಿದ ಪೌಲೋಮಾಸ್ತಿಕಾಖ್ಯಾನವನ್ನು ವಿಶದವಾಗಿ ಬರೆದು, 'ಪೌಲೋಮಾಸ್ತಿಕಪರ್ವ' ಎಂಬ ಹೆಸರಿನಿಂದ, ಕುಮಾರವ್ಯಾಸನ ಭಾರತದ ಆದಿಪರ್ವಭಾಗದಲ್ಲಿ ಸೇರಿಸಿದ್ದಾನೆ. ಸುಮಾರು ೧೪೫೦ ನೆಯ ಕಾಲದ ಒಳ್ಳೆಯ ಭಕ್ತಕವಿಯೊಬ್ಬನ ಮನಸ್ಸನ್ನು ಸೆಳೆದಿರಬೇಕಾದರೆ, ಕುಮಾರವ್ಯಾಸನ ಕೃತಿ ಆ ಕಾಲದಲ್ಲಿ ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿರಬೇಕು. ಯಾವುದೇ ಒಂದು ಕೃತಿಯು—ಮುದ್ರಣ ಪ್ರಚಾರದ ಅಭಾವವಿದ್ದ ಆ ಕಾಲದಲ್ಲಿ—ಬಹುಜನಪ್ರಿಯವಾಗಿ ನಿಲ್ಲಬೇಕಾದರೆ, ಏನಿಲ್ಲವೆಂದರೂ ೫೦-

೬೦ ವರ್ಷಗಳ ಕಾಲ ಸವೆಯಬೇಕಾಗುತ್ತಿದ್ದಿತು. ಈ ಅನುಮಾನ ನಿಯಮದಂತೆ ನೋಡಿದರೆ, ಕುಮಾರವ್ಯಾಸನ ಕಾಲ ೧೪ನೆಯ ಶತಮಾನದ ಕೊನೆಯ ದಶಕಕ್ಕೆ ಹೋಗಿ ತಲ್ಪುವುದು. ವಿಜಯನಗರದ ಕೃಷ್ಣದೇವರಾಯನಿಂದ ಆಜ್ಞಪ್ತನಾಗಿ, ಭಾರತದ ಕೊನೆಯ ಎಂಟು ಪರ್ವಗಳನ್ನು ರಚಿಸಿದ ತಿಮ್ಮಣ್ಣಕವಿಯ ಹೇಳಿಕೆಯನ್ನು ನೋಡಿದರೆ, ೧೬ನೆಯ ಶತಮಾನದ ಪ್ರಾರಂಭದಲ್ಲಿ ಕುಮಾರವ್ಯಾಸನ ಭಾರತ, ರಾಜಮನ್ನಣೆ-ಲೋಕಮನ್ನಣೆಗಳೆರಡಕ್ಕೂ ಪಾತ್ರವಾಗಿದ್ದಿತೆಂದು ಹೇಳಬಹುದು. ತಿಮ್ಮಣ್ಣನ ಮಾತುಗಳನ್ನಷ್ಟೇ ಪ್ರಮಾಣವಾಗಿ ತೆಗೆದುಕೊಂಡರೂ ಕುಮಾರವ್ಯಾಸ, ಪುರಂದರದಾಸರ ಉದಯಕ್ಕಿಂತ ಮೊದಲೇ ಅಸ್ತನಾಗಿರುವನೆಂದು ನಿಃಸಂದಿಗ್ಧವಾಗಿ ಹೇಳುವಂತಿದೆ. ವಸ್ತುಸ್ಥಿತಿಯು ಹೀಗಿರುವಾಗ, ಪುರಂದರದಾಸರು ಗದುಗಿಗೆ ಬಂದಾಗ, ಕುಮಾರವ್ಯಾಸನ ದರ್ಶನವು ಅವರಿಗೆ ಆಗುವ ಬಗೆಯೆಂತು? ರುದ್ರಭಟ್ಟ-ಷಡಕ್ಷರಿ-ಲಕ್ಷ್ಮೀಶರನ್ನು ಒಂದೇ ಕಾಲದಲ್ಲಿ ಒಯ್ದು ಕುಳ್ಳಿರಿಸಿದಂತಹ ಪುಕ್ಕಟೆ ಪುರಾಣದ ಪೊಳ್ಳುಕಥೆಯಿದು. ಹೊಸಕಾಲದ ಇತಿಹಾಸ ಸಂಶೋಧಕ ಪ್ರಭೃತಿಗಳೂ, ಈ ಬಗೆಯ ಪೊಳ್ಳುಕಥೆಯನ್ನು ಪ್ರಮಾಣವನ್ನಾಗಿ ಹಿಡಿಯುವುದು ವಿಲಕ್ಷಣ ಸಂಗತಿಯಾಗಿದೆ.

ದಾಸರ ಚರಿತ್ರೆಯನ್ನು ಬರೆದ ಹರಿಕಥೆಯ ವಿದ್ವಾಂಸರಂತೂ ಕುಮಾರವ್ಯಾಸನನ್ನು ದಾಸರ ಮನೆಗೆ ಕರೆತಂದು ಸವಿಯೂಟ ಮಾಡಿಸುತ್ತಾರೆ. ಈ ಘಟನೆಗೆ ಅವರು ಆಧಾರವಾಗಿ ತೆಗೆದುಕೊಂಡ ದಾಸರ ಕೃತಿಯಲ್ಲಿ ಅದರ ಸುಳಿವೇನಾದರೂ ಕಾಣುವುದೇನು ನೋಡಿರಿ:

'ಆರೋಗಣೆಯ ಮಾಡೇಳಯ್ಯ
ಶ್ರೀರಮಣ ಗದುಗಿನ ವೀರನಾರಾಯಣ ॥ ಪಲ್ಲವಿ ॥
ಸರಸಿಜಭವಾಂಡದ ಮೇರುಮಂಟಪ ದಿವಾ-
ಕರನು ದೀಪ ಪರಂಜ್ಯೋತಿ ಚಕ್ರ ॥
ಧರಣೀಮಂಡಲ ಪೋಲ್ವ ನವರತುನದ ಹೊನ್ನ
ಹರಿವಾಣದಲಿ ತಂದು ಬಡಿಸಿದಳೋ ಭೂಮಾ ॥ ೧ ॥
ಅಲ್ಲ ಹೇರಿಳೆ ನಿಂಬೆ ಮೆಣಸು ಯಾಲಕ್ಕಿಕಾಯಿ
ನೆಲ್ಲಿಯಂಬಟೆಕಾಯಿ ಬಿಡುಮಾಕಾಯಿ ॥

ಬಿಲ್ವಮಾಗಣಿ ಸೊಂಡೆ ಜೆಳ್ಳ ಪಾಪಟೆಕಾಯಿ
ಎಲ್ಲವನವ್ವ ತಾ ಬಡಿಸಿದಳೋ ಭೂಮ ॥ ೨ ॥

ಹಪ್ಪಳ ಸಂಡಿಗೆ ವಿವಿಧ ಶಾಕಂಗಳು
ತುಪ್ಪ ಸಕ್ಕರೆ ಹಣ್ಣು-ಹಂಪಲಗಳ ॥
ಕರ್ಪೂರ ಕಸ್ತೂರಿ ಪೂಸಿದ ರಸಾಯನವ
ಒಪ್ಪೆ ಶ್ರೀದೇವಿ ತಾ ಬಡಿಸಿದಳೊ ಭೂಮ ॥ ೩ ॥

ಎಣ್ಣೊರಿಗತಿರಸವೆಲ್ಲ ಮಂಡಿಗೆ ದೋಸೆ
ಅನ್ನ ಪಾಲಿನ ಪರಮಾನ್ನಗಳ ॥
ಸಣ್ಣ ಸೇವಗೆ ಶಾಲ್ಯನ್ನವ ನಿಮಿಷದಿ
ಬಣ್ಣಿಸಿ ಭೂದೇವಿ ಬಡಿಸಿದಳೋ ಭೂಮ ॥ ೪ ॥

ನೀ ನಿತ್ಯತೃಪ್ತನಹುದೋ ನಿನ್ನ ಉದರದೊಳು
ನಾನಾ ಜೀವರು ಬಂದು ಉಣಲು ಬೇಕು! ॥
ಶ್ರೀನಾಥ ಗದುಗಿನ ವೀರನಾರಾಯಣ
ಅನಾಥ ಬಂಧುವೆ ಪುರಂದರ ವಿಠಲಾ ॥ ೫ ॥

ಈ ಹಾಡಿನಲ್ಲಿ ಕುಮಾರವ್ಯಾಸಕವಿಗೆ ಸಂಬಂಧಿಸಿದ ಒಂದು ಶಬ್ದವ ನ್ನಾದರೂ ನಾವು ಕಾಣುವೆವೇ? ದಾಸರು ಕುಮಾರವ್ಯಾಸನನ್ನು ಊಟಕ್ಕೆ ಕರೆದ ಸಂದರ್ಭದಲ್ಲಿ ರಚಿಸಿದುದೆಂದು ನಿಃಸಂಕೋಚವಾಗಿ ಹೇಳುವವರನ್ನು ನಾವು ಏನೆಂದು ತಿಳಿದುಕೊಳ್ಳಬೇಕು?

ಈ ಹಾಡು ನಿಜವಾಗಿಯೂ ಪುರಂದರದಾಸರ ರಚನೆಯೇ ಆಗಿದ್ದರೆ, ಇದನ್ನು ಅವರು ಶ್ರೀವೀರನಾರಾಯಣದೇವರ ಕಲ್ಯಾಣಮಹೋತ್ಸವದ ಕಾಲ ದಲ್ಲಿ ಹಾಡಲೆಂದು ರಚಿಸಿರಬಹುದು. ಶ್ರೀದೇವಿ-ಭೂದೇವಿಯರು ಭೂಮ ಬಡಿಸಿದ ಬಣ್ಣನೆ ಇದರಲ್ಲಿದೆ. ನಿತ್ಯದ ಎಡೆಯನ್ನು 'ಭೂಮ' ಎಂದು ಹೇಳುವ ಪದ್ಧತಿಯಿಲ್ಲ. ಮದುವೆಯ ಊಟದ ಎಡೆಯನ್ನು ಮಾತ್ರ ಭೂಮ ದೆಡೆಯೆಂದು ಹೇಳುವ ಪರಂಪರೆ ನಮ್ಮಲ್ಲಿದೆ. ದೇವಾಲಯದಲ್ಲಿ ನಡೆಯುವ ಕಲ್ಯಾಣ ಮಹೋತ್ಸವವೆಂದರೆ, ಪ್ರತಿವರ್ಷವೂ ನಿಯಮಿತ ದಿನದಲ್ಲಿ ಭಕ್ತರು ಕೂಡಿ ಮಾಡುವ ದೇವರ ವಿವಾಹಸಮಾರಂಭ. ಸಾಮಾನ್ಯವಾಗಿ ನಮ್ಮ ಲೌಕಿಕ ವಿವಾಹಕಾಲದ ಎಲ್ಲ ಸಂಪ್ರದಾಯಗಳನ್ನೂ ದೇವರ ಕಾಲ್ಪನಿಕ ವಿವಾಹ ಮಹೋತ್ಸವಕ್ಕೂ ಅನ್ವಯಿಸುವುದುಂಟು. ಇಲ್ಲಿಯ ಹಾಡಿನಲ್ಲಿ

ಮದುಮಕ್ಕಳ ಭೂಮದೆಡೆಯು ವಿವರವಾದ ವರ್ಣನೆಯಿದೆ. ಕೊನೆಯು ನುಡಿಯಲ್ಲಿಯು ಎಲ್ಲ ಮಾತುಗಳೂ ದೇವರಿಗೇ ಅನ್ವಯಿಸುವುವು. ಮೊದಲಿನ ನಾಲ್ಕು ನುಡಿಗಳೆಲ್ಲ ದೇವರ ಭೂಮದೆಡೆಯು ವಾಸ್ತವಚಿತ್ರ.

ದಾಸ-ಕುಮಾರವ್ಯಾಸರಿಗೆ ಸಂಬಂಧಿಸಿದುದೆಂದು ಹೇಳುವ 'ಹರಿಶರಣರೆನ್ನ ಮನೆಯ ಮೆಟ್ಟಲು ಮನೆ ಪಾವನವಾಯಿತು!' ಎಂದು ಪ್ರಾರಂಭವಾಗುವ ಸುಳಾದಿಯೂ ಒಂದಿದೆ. ಇದರಲ್ಲಿಯೂ ಕುಮಾರವ್ಯಾಸನಿಗೆ ಸಂಬಂದಿಸಿದ ಮಾತುಗಳಾವುವೂ ಇಲ್ಲ. ಅಷ್ಟೇ ಅಲ್ಲದೆ, ಇದು ಪುರಂದರದಾಸರ ರಚನೆಯಾಗಿಯೂ ಕಾಣುವುದಿಲ್ಲ. ಇದರಲ್ಲಿ "ಸಿಕಾರಿಪುರದ ವ್ಯಾಸನೆನಿಸಿದೆ" ಎಂದು ಒಂದು ಮಾತಿದೆ. ಇದು ಕುಮಾರವ್ಯಾಸನನ್ನು ಕುರಿತು ಹೇಳಿದುದೆಂದು ಭಾವಿಸುವವರು, ಪುರಂದರದಾಸರ ವೈಷ್ಣವತತ್ತ್ವಕ್ಕೆ ಅಪಚಾರ ಮಾಡಿದಂತಾಗುತ್ತದೆ. ಮೊದಲನೆಯ ಮಾತೆಂದರೆ, ಕುಮಾರವ್ಯಾಸನಿಗೂ ಸಿಕಾರಿಪುರಕ್ಕೂ ಯಾವುದೇ ಬಗೆಯ ಸಂಬಂಧವಿದ್ದುದು ಇದುವರೆಗ ಕಂಡು ಬಂದಿಲ್ಲ. ಅಲ್ಲದೆ ಈ ಸುಳಾದಿಯಲ್ಲಿ ಬರೀ "ವ್ಯಾಸ" ಎಂಬ ಶಬ್ದವಿದೆಯೇ ಹೊರತು "ಕುಮಾರವ್ಯಾಸ" ಎಂಬ ಮಾತು ಇಲ್ಲ. ಎರಡನೆಯ ಮಾತೆಂದರೆ "ಸಿಕಾರಿಪುರದ ವ್ಯಾಸ" ಎಂಬ ಮಾತಿನ ಹಿಂದು-ಮುಂದಿನ ಸಂದರ್ಭವೆಲ್ಲ, ಶ್ರೀವೀರನಾರಾಯಣ ದೇವರನ್ನು ಕುರಿತಾಗಿದೆ ಹೊರತು, ಮಾನವಸಾಮಾನ್ಯ ಕವಿಯಾದ ಕುಮಾರವ್ಯಾಸನಿಗೆ ಹೊಂದುವುದಿಲ್ಲ.

'ಗಿಳಿಯು ಪಂಜರದೊಳಿಲ್ಲ!' ಎಂಬುದೊಂದು, ಶ್ರೀಪುರಂದರದಾಸರ ಭಾವಕವನ ಸುಪ್ರಸಿದ್ಧವಿದೆ ದಾಸರ ಮಿಕ್ಕಹಾಡುಗಳಿಗಿಂತ ಈ ಹಾಡಿನ ರಚನಾತಂತ್ರ ಬೇರೆ ರೀತಿಯದಾಗಿದೆ. ಅಕಾಲದಲ್ಲಿಯೆ ಮರಣಕ್ಕೆ ಗುರಿಯಾದ ತಮ್ಮ ಪ್ರೀತಿಯ ಮಗನನ್ನು ಕುರಿತು ದಾಸರು ರಚಿಸಿದ ಶೋಕಗೀತವೆಂದು ಇದನ್ನು ಕುರಿತು ಹೇಳುವವರೂ ಇದ್ದಾರೆ. ಇದು ದಿಟವಿರಬಹುದೆಂದು ನಮಗೂ ಎನಿಸುತ್ತದೆ. ಈ ಹಾಡಿನಲ್ಲಿಯ ರೂಪಕರೀತಿ, ಕರುಣೆಯ ಭಾವವನ್ನು ಪರಿಣಾಮಕಾರಿಯಾಗಿ ಮಿಡಿಯುತ್ತದೆ. 'ಕದವನಿಕ್ಕಿದಳಿದೆಕೊ!' ಎಂಬ ವಿಡಂಬನೆಯ ಪದ್ಯವೂ "ರಾಗಿ ತಂದಿರಾ ಭಿಕ್ಷಕೆ ರಾಗಿ ತಂದಿರಾ" ಎಂಬ ಶಬ್ದಶ್ಲೇಷದ ಗೀತವೂ ದಾಸರ ನಿತ್ಯಯಾತ್ರೆಯ ಕಾಲದ ಜನಜೀವನಾನುಭವದ ನಿದರ್ಶನಗಳಾಗಿವೆ. ಇದರಂತೆಯೆ "ಊಟಕ್ಕೆ

ಬಂದೆವು ನಾವು-ನಿಮ್ಮ ಕೋಟಲೆಗಳ ಬಿಟ್ಟು ಅಡಿಗೆ ಮಾಡವ್ವಾ !" ಎಂಬ ಪದ್ಯವೂ ಅವರ ವಾಸ್ತವಜೀವನದ ಪ್ರಾತಿನಿಧ್ಯ ಮಾಡುವಂತಹದಾಗಿದೆ.

'ಕತ್ತಲಿಕ್ಕುತಲಿವೆ ಕಣ್ಣು—ಬಲು
ಒತ್ತಿ ಬರುತಲಿದೆ ಕೈಕಾಲು ಜುಮ್ಮು ||
ಹೊತ್ತು ಹೋಗಿಸಬೇಡವಮ್ಮ—ಒಂದು
ತುತ್ತನಾದರು ಮಾಡಿ ಇಕ್ಕುವುದು ಧರ್ಮ || ೧ ||
ಒಡಲೊಳಗುಸಿಸಿರಿಲ್ಲವಮ್ಮ—ಗಳಿಗೆ
ತಡವಾದರೀ ಪ್ರಾಣ ಉಳಿವುದಿಲ್ಲಮ್ಮ ! ||
ನುಡಿಯು ಚಿತ್ತಕೆ ಬರಲಮ್ಮ—ಒಂದು
ಹಿಡಿ ಅಕ್ಕಿಯನ್ನದಿ ಕೀರ್ತಿ ಪಡೆಯಮ್ಮ || ೨ ||

ಕ್ಷೇತ್ರ-ತೀರ್ಥಯಾತ್ರೆಗಾಗಿ ದೇಶ ದೇಶ ಅಲೆದ ದಾಸರಿಗೆ ತುಂಬ ಹಸಿವೆಯ ವ್ಯಥೆಯನ್ನು ಅನುಭವಿಸಬೇಕಾಗಿ ಬಂದು, ಯಾರಲ್ಲಿಯೋ ಹೋಗಿ ಅನ್ನವನ್ನು ಕೇಳಿದ ಘಟನೆಯನ್ನು ನಾವು ಈ ಹಾಡಿನಿಂದ ಊಹಿಸ ಬಹುದು.

"ಬದುಕಿದೆನು ಬದುಕಿದೆನು ಭವವೆನಗೆ ಹಿಂಗಿತು!" ಎಂಬುದೊಂದು ಹಾಡು, ಕೆಲವು ಹಸ್ತಪ್ರತಿಗಳಲ್ಲಿ ಪುರಂದರದಾಸರ ಅಂಕಿತದಿಂದ ಕೂಡಿ ಇರುವುದಾದರೂ, ಕನಕದಾಸರದೆಂಬುದಾಗಿಯೂ ಇದು ಜನರ ಬಾಯಲ್ಲಿದೆ. ಈ ಹಾಡು ಪುರಂದರದಾಸರ ರಚನೆಯೆ ಅಹುದೆಂದು ನಮ್ಮ ಎಣಿಕೆ. ಶ್ರೀಹರಿಯ ಅನುಗ್ರಹದ ಅನುಭವವಾದಾಗ, ಆನಂದದ ಆಧಿಕ್ಯದಲ್ಲಿ ತೆಗೆದ ಸ್ವಗತ ಉದ್ಗಾರ ಈ ಹಾಡಿನಲ್ಲಿದೆಯೆಂದು ತೋರುವುದು.

"ಕನಕದಾಸನ ಮೇಲೆ ದಯೆ ಮಾಡಲು ವ್ಯಾಸಮುನಿಯ ಮಠದವರೆಲ್ಲ ದೂರಿಕೊಂಬುವರು !" ಎಂಬ ಹಾಡು, ಇಬ್ಬರೂ ದಾಸರ ಸಮಕಾಲೀನತೆಗೆ ಸಾಕ್ಷ್ಯವಾಗಿರುವುದಲ್ಲದೆ, ಪುರಂದರ ದಾಸರಲ್ಲಿ ಕನಕದಾಸರ ವಿಷಯಕವಾಗಿ ಇರುವ ಆದರ-ವಿಶ್ವಾಸಗಳನ್ನೂ ಪ್ರಕಟಿಸುವಂತಹದಾಗಿದೆ. ಅದರಂತೆಯೆ "ಚಿತ್ತಯಿಸಿದ ವ್ಯಾಸರಾಯ ಚಿತ್ತಜನಯ್ಯನ ಒಳಿಗ !" ಎಂಬ ಹಾಡು, ಗುರುಗಳಾದ ವ್ಯಾಸರಾಯರ ನಿರ್ಯಾಣ ಸಂದರ್ಭವನ್ನು ಕಣ್ಣಾರೆ ಕಂಡ ಚಿತ್ರವಾಗಿದೆ.

ದಾಸರು ತಾವು ರಚಿಸಿದ ಬೇರೆ ಬೇರೆ ವಿಷಯಕವಾದ ಕೃತಿಗಳ ಸಂಖ್ಯೆ ಎಷ್ಟೆಷ್ಟೆಂಬುದನ್ನು "ವಾಸುದೇವನ ನಾಮಾವಳಿಯ ಕ್ಲಪ್ತಿಯನು ! ವ್ಯಾಸರಾಯರ ಪರ್ಯಂತ ಪೇಳಿದೆನು ನಾನು!" ಎಂಬ ಪದ್ಯದಲ್ಲಿ ವಿವರಿಸಿರುವರು. ಈ ಪದ್ಯವೂ ಅವರ ವಾಸ್ತವಜೀವನಕ್ಕೆ ಸಂಬಂಧಿಸಿದುದೇ ಎಂದು ಬೇರೆ ಹೇಳಬೇಕಾಗಿಲ್ಲ.

## ೧೦ ಪವಾಡಗಳೊಂದಿಗೆ ಪುರಂದರದಾಸರು

ದಾಸರ ಜೀವನಕ್ಕೆ ಹೊಂದಿಕೊಂಡಿರುವ ಪವಾಡದ ಕಥೆಗಳು ಅಸಂಖ್ಯವಾಗಿರುವುವು. ಲೋಭಿಗಳಾದ ನಾಯಕರನ್ನು ಹರಿದಾಸವೃತ್ತಿಗೆ ತಿರುಗಿಸಿದ ಮೂಗುತಿಯ ಕಥೆಯು, ದಾಸರ ಪ್ರಥಮ ಪವಾಡವಾಗಿದೆ. ಅಲ್ಲದೆ, ದಾಸಪರಂಪರೆಯ ಪರಿಚಯವಿದ್ದ ಪ್ರತಿಯೊಬ್ಬರೂ ಹೊಸ ಹೊಸ ಪವಾಡದ ಕಥೆಯನ್ನು ಹೇಳುತ್ತಾರೆ. ಇವುಗಳಲ್ಲಿಯ ಹೆಚ್ಚಿನ ಕಥೆಗಳು, ಬಾಯಿಂದ ಬಾಯಿಗೆ—ಕಿವಿಯಿಂದ ಕಿವಿಗೆ—ಬಂದ ದಂತಕಥೆಗಳಾಗಿವೆಯೇ ಹೊರತು, ಅವುಗಳಿಗೆ ಪರಿಪೋಷಕವೆನಿಸುವಂತಹ ಲಿಖಿತ ಶಬ್ದಪ್ರಮಾಣಗಳಾವುವೂ ಇಲ್ಲ. ವಿಜಯದಾರ ಸತರುವಾಯದ ಕೆಲವು ದಾಸರು, ಈ ಪವಾಡದ ಕೆಲವೊಂದು ಪ್ರಸಂಗಗಳಿಗೆ ಸಾಹಿತ್ಯಸ್ವರೂಪವನ್ನು ಕೊಡಲು ಪ್ರಯತ್ನಿಸಿರುವರೆಂಬುದನ್ನು ಈ ಮೊದಲೇ ವಿದಿತಪಡಿಸಲಾಗಿದೆ.

ಪುರಂದರದಾಸರ ಅಂಕಿತದಿಂದಲೇ ಇರುವ ಕೆಲವೊಂದು ಪವಾಡದ ಕಥಾಕೃತಿಗಳಲ್ಲಿ ಬಹುಜನಪರಿಚಿತವಾದ ಪದ್ಯವಿದು :

"ಮುಯ್ಯಕ್ಕೆ ಮುಯ್ಯ ತೀರಿತು—ಜಗ
ದಯ್ಯ ವಿಜಯಸಹಾಯ ಪಂಢರಿರಾಯ ॥ ಪಲ್ಲ ॥

ಸಣ್ಣವನೆಂದು ನಾ ನೀರು ತಾರೆಂದರೆ
ಬೆಣ್ಣೆಗಳ್ಳ ಕೃಷ್ಣ ಮರುಳು ಮಾಡಿ ॥
ಚಿನ್ನದ ಪಾತ್ರೆಯ ನೀರ ತಂದಿತ್ತರೆ
ಕಣ್ಣ ಕಾಣದೆ ನಾನು ಟೊಣೆದೆ ಪಂಢರಿರಾಯ ॥ ೧ ॥

ಎನ್ನ ಹೆಸರ ಪೇಳಿ ಸೂಳೆಗೆ ಕಂಕಣ-
ವನ್ನು ನೀನು ಕೊಟ್ಟು ನಿಜವ ಮಾಡಿ ॥

ಎನ್ನ ನೋಯಿಸಿ ಅಪರಾಧಭಂಡನ ಮಾಡಿ
ನಿನ್ನ ಮುಯ್ಯಕೆಮುಯ್ಯ ತೋರಿದೆ ಪಂಢರಿರಾಯ ॥ ೨ ॥

ಭಕ್ತವತ್ಸಲನೆಂಬ ಬಿರುದು ಬೇಕಾದರೆ
ಕಿತ್ತು ಈಡಾಡೋ ಇನ್ನೊಂದು ಕಂಕಣವ ॥

ಮುಕ್ತಿಗೆ ನೀನಲ್ಲದಾರನು ಕಾಣೆನು
ಮುಕ್ತೇಶ ಪುರಂದರವಿಠಲ ಪಂಢರಿರಾಯ" ॥ ೩ ॥

ಪುರಂದರದಾಸರಮೇಲೆ ಕಂಕಣದ ಕಳವಿನ ಅಪರಾಧ ಬಂದು, ಪಂಢರಪುರದ ಅಧಿಕಾರಿ, ದಾಸರನ್ನು ಕಂಬಕ್ಕೆ ಕಟ್ಟಿ ದಂಡಿಸುತ್ತಿರುವಾಗ, ಅವರು ಈ ಹಾಡನ್ನು ಹಾಡಿ, ಶ್ರೀವಿಟ್ಠಲನನ್ನು ಪ್ರಾರ್ಥಿಸಿದರಂತೆ; ಆಗ ಪುರಂದರದಾಸರು ಅಪವಾದರಹಿತರೆಂಬುದನ್ನು ಪ್ರಮಾಣಿಸಿಕೊಡುವುದಕ್ಕಾಗಿ. ದಾಸರ ಬಿನ್ನಹದಮೇರೆಗೆ, ಶ್ರೀವಿಟ್ಠಲನು ತನ್ನ ಇನ್ನೊಂದು ಕೈಯ ಕಂಕಣವನ್ನೂ ಕಳಚಿ ಚೆಲ್ಲಿದನಂತೆ. ಆಗ ದಾಸರ ಮಾಹಾತ್ಮ್ಯದ ಅರಿವು ಉಂಟಾಗಿ, ಅಧಿಕಾರಿ ಪಶ್ಚಾತ್ತಾಪಪಟ್ಟವನಾಗಿ, ದಾಸರ ಕ್ಷಮೆಯನ್ನು ಯಾಚಿಸಿದನಂತೆ. ಪುರಂದರದಾಸರನ್ನು ದಂಡನೆಯ ಕಾಲದಲ್ಲಿ ಕಟ್ಟಿಹಾಕಿದ ಕಂಬವೆಂದು, ಪಂಢರಪುರದ ಪಾಂಡುರಂಗನ ದೇವಾಲಯದಲ್ಲಿಯ ಒಂದು ಕಂಬವನ್ನು, ನಮ್ಮ ಹರಿದಾಸ ಪರಂಪರೆಯವರು ತೋರಿಸುತ್ತಾರೆ. ಮಹಾರಾಷ್ಟ್ರದ ಸಂತ ಪರಂಪರೆಯವರು ಆ ಕಂಬವನ್ನು 'ಗರುಡ ಖಾಂಬ' ಎಂದು ಹೇಳುತ್ತಾರೆ. ಆ ಕಂಬಕ್ಕೆ ಒಂದು ವೈಶಿಷ್ಟ್ಯವನ್ನಲ್ಲಿ ಕೊಡಲಾಗುತ್ತದೆಯೆಂಬುದು ಸತ್ಯಸಂಗತಿ.

'ಗರುಡಾದ್ರಿವಾಸ ಶ್ರೀಪುರಂದರವಿಠಲ' ಎಂಬ ಅಂಕಿತದಿಂದ ಕೂಡಿದ 'ಕರೆದರೆ ಓ ಎನ್ನಬಾರದೆ?' ಎಂಬ ಏಳು ನುಡಿಗಳ ಪದ್ಯವೊಂದಿದ್ದು, ಇದರಲ್ಲಿ ಪ್ರತಿಯೊಂದು ನುಡಿಯೂ ಬೇರೆ ಬೇರೆ ಪವಾಡಕಥಾಸಂಕ್ಷೇಪವನ್ನು ಸೂಚಿಸುವಂತಹದಾಗಿದೆ:

"ಕರೆದರೆ ಓ ಎನ್ನಬಾರದೆ?
ಕರುಣಾಸಾಗರ ಅನಿಮಿತ್ತ ಬಂಧುವೆ ಕೃಷ್ಣ! ॥ ಪಲ್ಲ ॥

ತಂದೆ ವಿಠಲ ನಿನ್ನ ಗುಡಿಯೊಳಗೊಂದು ದಿನ
ಮಂದಮತಿಗಳು ಕಂಬಕೆ ಕಟ್ಟಲು ॥

ಸುಂದರ ರತ್ನಖಚಿತ ಕಡಗವನು ಬೇಗ
ಅಂದಾ ಸೂಳೆಗೆ ಇತ್ತು ಕಾಯ್ದುಕೊಂಡೆಲೊ ಈಗ" ॥ ೧ ॥

'ಮುಯ್ಯಕ್ಕೆ ಮುಯ್ಯ ತೀರಿತು' ಎಂಬ ಹಾಡಿನಲ್ಲಿ ಬಂದ ವಿಷಯವೇ ಇದು. ಇನ್ನೂ ಮುಂದೆ ನೋಡಿ:

"ಮಲತಾಯಿಯೆನ್ನನು ಕೊಲಲು ಬೇಕೆನುತ
ಹಾಲೊಳಗೆ ವಿಷವ ಬೆರಸಿರಲಾಕ್ಷಣ ॥
ತಿಳಿದವರಿಗೆ ಶ್ರೇಷ್ಠನಾದುದರಿಂದ ಗ-
ರಳವ ನೀನುಂಡು ನಿಜಕ್ಷೀರವೆನಗುಣಿಸಿದೆ ಈಗ ॥ ೨ ॥

ಪುರಂದರದಾಸರಿಗೆ ಮಲತಾಯಿ ಇದ್ದಳೆಂಬುದನ್ನು ತಿಳಿಸುವ ಇಲ್ಲಿಯ ಸಂಗತಿ, ಅನೇಕ ಪರಂಪರೆಯ ಹರಿದಾಸರಿಗೂ ಅಪರಿಚಿತ ವಿಷಯ.

"ಮಲ್ಲಿಕಾರ್ಜುನನ ಯಾತ್ರೆಗೆ ಹೋಗುವ ಮಾರ್ಗ-
ದಲ್ಲಿ ವ್ಯಾಘ್ರವು ಬಂದು ಕೊರಳ ಪಿಡಿಯೆ ॥
ಬಿಲ್ಲುಗಾರನಾಗಿ ಬಂದು ಆದಕೊಂದು ಭಕ್ತವ-
ತ್ಸಲ್ಲನೆಂಬುವ ಬಿರುದನುಳಿಸಿಕೊಂಡೆಲೊ ಈಗ ॥ ೩ ॥

ಈ ಪವಾಡವನ್ನೂ ಬಹುಜನರು ಅರಿಯರು.

"ಪರಿಸೆಯೊಳಗೆ ಮರದಡಿಯಲ್ಲಿ ಮಲಗಿರೆ
ಉರಗನು ಬಂದು ಅಂಗುಟ ಪಿಡಿಯೆ ॥
ಕರದಿಂದ ಮೈಯೆಲ್ಲವ ನೇವರಿಸುತ ಬಹು
ಪರಿಣಾಮವೆನಗಿತ್ತ ಪರಮಾತ್ಮನೇ ಈಗ ॥ ೪ ॥

ಕನಕದಾಸರ 'ಸಾಲದೇ ನಿನ್ನದೊಂದು ದಿವ್ಯನಾಮ' ಎಂಬ ಆತ್ಮ ಚರಿತ್ರರೂಪದ ಪದ್ಯದಲ್ಲಿಯ 'ತಿಂತ್ರಿಣಿಯ ಮರದಡಿಯಲ್ಲಿ ಉರಗಕಚ್ಚಿ ಒರಗಿರಲು' ಎಂಬ ಕಥಾ ಸಂದರ್ಭವನ್ನಿದು ನೆನಪಿಗೆ ತಂದುಕೊಡುತ್ತದೆ. ಅದರಿಂದ ಇದು ಸ್ಫೂರ್ತಿ ಪಡೆದಿದೆಯೋ, ಇದರಿಂದ ಅದು ಸ್ಫೂರ್ತಿ ಪಡೆದಿದೆಯೋ! ಮುಂದಿನ ನುಡಿಯನ್ನು ನೋಡಿ: ಇದೂ ಕನಕದಾಸರ ಕಥೆಯ ಜಾಡನ್ನು ಹಿಡಿದೇ ನಡೆದುದಾಗಿದೆ.

"ಕಳ್ಳರೊಂದು ದಿನದಲಿ ಬಂದು ಎನ್ನನು
ಕಳ್ಳಿಯ ಸಾಲೊಳಗೆ ಕಡಿದು ತುಳಿಯೆ।
ಅಲ್ಲಿಯೆ ವೈದ್ಯನಾಗಿ ಬಂದಡವಿಯ ತೊ-
ಷಧ ಕಟ್ಟಿ ಕಾಯ್ದು ಬೇಗ ಪಾಲಿಸಿ ಈಗ ॥ ೫ ॥

ಕನಕದಾಸರು ವೈರಿಗಳ ಶಸ್ತ್ರಗಳಿಂದ ಆಹತರಾಗಿ ಬಿದ್ದಾಗಲೂ, ಶ್ರೀಹರಿಯೇ ವೈದ್ಯನಾಗಿ ಬಂದು, ಅವರ ಗಾಯಗಳನ್ನು ಮದ್ದು ಮಂತ್ರಗಳಿಂದ ಮಾಯಿಸಿದ ವಿಷಯ ಅವರ ಆ ಕೃತಿಯಲ್ಲಿದೆ.

ಭೀಮರಥೀ ನದಿಯ ದಾಟಬೇಕೆನುತಲಿ
ನೇಮದಿಂದಲಿ ಬಂದು ತಟದಲಿ ನಿಲ್ಲಲು ||
ಶ್ರೀಮನೋರಮನೇ ನಿನ್ನಂಸದಿ ಪೊತ್ತೆನ್ನ
ಈ ಮಹಿಯೊಳಗೆ ತಂದಿತ್ತ ಹರಿಯೆ ಈಗ || ೬ ||

೨ ರಿಂದ ೬ ರ ವರೆಗಿನ ಐದು ನುಡಿಗಳಲ್ಲಿಯ ಪವಾಡಗಳೆಲ್ಲವೂ ಅಪೂರ್ವವಾದುವುಗಳು. ಪರಂಪರಾಪ್ರಿಯ ಹರಿದಾಸರಿಗೂ ಇವು ಗೊತ್ತಿದ್ದಂತಿಲ್ಲ. ಇನ್ನು ಕೊನೆಯ ನುಡಿ ಹೀಗಿದೆ :

"ಪರಿಪರಿ ಭಕ್ತರ ಕಾಯ್ದೆಯೆಂದು ನಿಗಮದಿ
ಪಿರಿದಾಗಿ ಪೇಳಿದ್ದು ನಿಜವಹುದು
ಗರುಡಾದ್ರಿವಾಸ ಶ್ರೀಪುರಂದರವಿಟ್ಠಲ
ಪೊರೆ ಜನ್ಮಜನ್ಮದ ತಾಯಿ ತಂದೆಯೆ ಈಗ || ೭ ||

ಇದು ನಿಜವಾಗಿಯೂ ಪುರಂದರದಾಸರ ಕೃತಿಯಾಗಿರಬಹುದೇ?— ಎಂದು ತಜ್ಞ ಸಂಶೋಧಕ ವಿಮರ್ಶಕರಿಗೆ ಸಂದೇಹ ಬಾರದೇ ಹೋಗದು. ಏಕೆಂದರೆ, ಈ ಹಾಡಿನ ವಿಷಯಗಳು ಅನುಕರಣದ ಫಲವಾಗಿವೆಯಲ್ಲದೆ ಪುರಂದರದಾಸರ ಮನಸ್ಸಂಸ್ಕೃತಿಯ ಗಾಂಭೀರ್ಯಕ್ಕೆ ಇವು ಒಪ್ಪಿಗೆಯಾಗಲಾರವೆನಿಸುವುದು ಅಲ್ಲದೆ ಭಾಷೆ-ಛಂದಸ್ಸುಗಳ ಶಿಥಿಲತೆಯೂ ಈ ಹಾಡನ್ನು ಪುರಂದರದಾಸರ ಕೃತಿಯೆಂದು ಒಪ್ಪಗೊಡದು. ಮಿಕ್ಕುದೆಲ್ಲ ಏನೇ ಇರಲಿ, ಪುರಂದರದಾಸರನ್ನು ಕುರಿತ ಕೆಲವು ಮಹಿಮಾ ಸಂದರ್ಭಗಳನ್ನಿದು ಕೂಡಿಸಿ ಹೆಣೆದಿರುವುದು.

ವಿಜಯವಿಠಲಾಂಕಿತದಿಂದ ಪ್ರಸಿದ್ಧವಾಗಿರುವ ಒಂದು ಉಗಾಭೋಗದಲ್ಲಿ 'ಪುರಂದರದಾಸರು ವೈಶ್ಯ ಮಾದಮ್ಮನ ವರಕುಮಾರಕರನು ಬದುಕಿಸಿದರು ಗಡ!' ಎಂಬುದೊಂದು ಮಹಿಮಾಸೂಚಕವಾದ ಮಾತು ಇರುವುದು. ಈ ವೈಶ್ಯ ಮಾದಮ್ಮ ಯಾರು, ಎಲ್ಲಿಯವಳು, ಪುರಂದರದಾಸರನ್ನು ಅವಳು ಕಂಡುದು ಯಾವಾಗ?— ಇವಾವ ವಿಷಯಗಳನ್ನೂ ಆ ಉಗಾಭೋಗ ತಿಳಿಸುತ್ತಿಲ್ಲ.

ದಾಸರ ಹೆಂಡತಿ, ಮನೆಗೆ ಬಂದ ಬೀಯಗನಿಗೆ ಔತನದೂಟ ಮಾಡಿ ಹಾಕುವುದಕ್ಕೆಂದು, ದಾಸರು ಮನೆಯಲ್ಲಿಲ್ಲದಾಗ ನೆರೆಮನೆಯ ಮೈಲಾರಪ್ಪನ ಮನೆಯಿಂದ "ಪರಶುಶಿಲೆ"ಯನ್ನು ತಂದಂತೆಯೂ ಅದರಿಂದ ಧನವನ್ನು ಪಡೆದು ಬೀಯಗರಿಗಾಗಿ ಸವಿಯೂಟದ ಅಡಿಗೆಯನ್ನು ಮಾಡಿದಂತೆಯೂ ಒಂದು ಅದ್ಭುತಘಟನೆಯ ಕಥೆಯೊಂದನ್ನೂ— ಶ್ರೀಪುರಂದರದಾಸರ ಜೀವನಕ್ಕೆ— ಪರಂಪರಾಗತ ಮನೆತನದ ಹರಿದಾಸರೊಬ್ಬರು ಅಂಟಿಸಿದ್ದಾರೆ. ಪುರಂದರದಾಸರು ಮನೆಗೆ ಬಂದು ಅಡಿಗೆಯ ವಿಜೃಂಭಣೆಯನ್ನು ನೋಡಿ, ವಾಸ್ತವಸಂಗತಿಯನ್ನೆಲ್ಲವನ್ನೂ ಕೇಳಿ ತಿಳಿದುಕೊಂಡು, ಸಂತಪ್ತರಾಗಿ ಆ ಅಡಿಗೆಯನ್ನೆಲ್ಲ ನದಿಯಲ್ಲಿ ಚೆಲ್ಲಿಸಿ, ಬೇರೆಯ ಅಡಿಗೆ ಮಾಡಿಸಿ ಊಟ ಮಾಡಿದರಂತೆ; ಸಂತಾಪದ ಭರದಲ್ಲಿ, ಮೈಲಾರಪ್ಪನ ಪರಶುಶಿಲೆಯನ್ನೂ ತುಂಗಭದ್ರೆಯ ಚಕ್ರತೀರ್ಥದಲ್ಲಿ ಒಗೆದರಂತೆ. ಮುಂದೆ ಆ ಶಿಲೆಗಾಗಿ ಮೈಲಾರಪ್ಪ ಬಂದು ಕಾಡಲು ತೊಡಗಿದಾಗ, ಬಳಿಯಲ್ಲಿದ್ದ ಮಧ್ವಪತಿಯನ್ನು ಕರೆದು, ಚಕ್ರತೀರ್ಥದಲ್ಲಿ ಮುಳುಗಿ, ನಾಲ್ಕು ಕಲ್ಲುಗಳನ್ನು ತೆಗೆದುಕೊಂಡು ಬರಲು ಹೇಳಿದರಂತೆ. ಮಧ್ವಪತಿ ಕೂಡಲೆ ಓಡಿಹೋಗಿ ಚಕ್ರತೀರ್ಥದಲ್ಲಿ ಧುಮುಕಿದನಂತೆ. ಚಕ್ರತೀರ್ಥವೆಂದರೆ ಮೊಸಳೆಗಳಿಂದ ತುಂಬಿದ ಆಳವಾದ ಮಡು ದಾಸರು ವ್ಯರ್ಥವಾಗಿ ಮಗನನ್ನು ಕೊಂದರೆಂದು, ಕೂಡಿದ ಜನರೂ ಮನೆಗೆ ಬಂದ ಬೀಯಗರೂ, ದಾಸರನ್ನು ಬಾಯಿಗೆ ಬಂದಹಾಗೆ ಬೈದುಬಿಟ್ಟರಂತೆ. ಮಡುವಿನಲ್ಲಿ ಮುಳುಗಿದ ಮಧ್ವಪತಿ, ಕ್ಷಣದಲ್ಲಿಯೇ ಓಡುತ್ತೋಡುತ್ತ ಬಂದು, ದಾಸರೆದುರು ನಾಲ್ಕು ಕಲ್ಲುಗಳನ್ನು ತಂದು ಇರಿಸಿದನಂತೆ. ಅವುಗಳಲ್ಲಿ ತನ್ನದಾವುದೂ ಇಲ್ಲ ಎಂದು ಮೈಲಾರಪ್ಪ ರಂಭಾಟ ಮಾಡಿದಮೇಲೆ, ದಾಸರು ಆ ಕಲ್ಲುಗಳ ಸ್ಪರ್ಶಗುಣವನ್ನು ಪ್ರತ್ಯಕ್ಷಪ್ರಯೋಗದಿಂದ ಸಿದ್ಧಮಾಡಿ ತೋರಿಸಿ, ಒಂದಕ್ಕೆ ನಾಲ್ಕು ಸ್ಪರ್ಶಶಿಲೆಗಳನ್ನು ಮೈಲಾರಪ್ಪನಿಗೆ ಕೊಟ್ಟರಂತೆ. ದಾಸರ ಮಹಿಮೆಯನ್ನು ಕಂಡ ಆ ವಾಮಾಚಾರದ ಪಂಥದ ಮೈಲಾರಪ್ಪ, ತನ್ನ ಅಪರಾಧಕ್ಕೆ ಪಶ್ಚಾತ್ತಾಪ ಪಟ್ಟು, ಪುರಂದರದಾಸರಲ್ಲಿ ಶಿಷ್ಯತ್ವವನ್ನು ವಹಿಸಿದನಂತೆ.

ಇದೊಂದು ತಳ-ಬುಡಗಳಾವುವೂ ಇಲ್ಲದ ದಂತಕಥೆ. ಇದರ ಸತ್ಯತೆಗಾಗಿ, ಯಾವ ದಾಸರ ಸಾಹಿತ್ಯದಲ್ಲಿಯೂ ಪದಾದೆ ಪ್ರಮಾಣ ಸಿಕ್ಕುವುದಿಲ್ಲ.

ಈ ಕಥೆಯನ್ನು ಸೃಷ್ಟಿಸಿರುವ ಭಾವಾವಿಷ್ಟನಿಗೆ, ಪುರಂದರದಾಸರ ಮಹಿಮೆಯನ್ನು ಹೇಳಲು ಹೊರಟ ತಾನು, ಅವರ ಪತ್ನಿಯ ವೈರಾಗ್ಯಪೂರ್ಣ ವ್ಯಕ್ತಿತ್ವದ ಬಗೆಗೆ ಅಪಚಾರವನ್ನು ಮಾಡುವೆನೆಂಬ ಪ್ರಜ್ಞೆಯೆ ಇದ್ದಂತೆ ಕಾಣುವುದಿಲ್ಲ. ಪುರಂದರದಾಸರನ್ನು ವೈರಾಗ್ಯದ ಕಡೆಗೆ ತಿರುಗಿಸಿದ ಮಹಾ ವ್ಯಕ್ತಿತ್ವ ಆಕೆಯದು. ಅಂತಹ ಸಾಧ್ವಿಯ ಅಂತಃಸ್ವರೂಪವನ್ನೂ ವಿಕೃತಗೊಳಿಸಲು ಈ ಪವಾಡನಿರ್ಮಾಣಕಾರರು ಸಾಕಷ್ಟು ಕಾರ್ಯಮಾಡಿದ್ದಾರೆ.

ಪುರಂದರದಾಸರ ಮೂಲಸ್ವರೂಪವನ್ನು ಶ್ರೀವ್ಯಾಸಗುರುಗಳಿಗೆ ತಿಳಿಸಿಕೊಡಲು, ಸಾಕ್ಷಾತ್ ಲಕ್ಷ್ಮೀದೇವಿಯೇ ವಿಜಯವಿಟ್ಠಲನ ಗುಡಿಯಲ್ಲಿ ನಡೆಯಿಸಿದ ಚಮತ್ಕಾರವೊಂದನ್ನು ಕುರಿತು ಕಥೆಹೇಳುವ ಪುರಂದರದಾಸಾಭಿಮಾನಿಗಳೂ ನಮ್ಮಲ್ಲಿ ಇದ್ದಾರೆ. ಪುರಂದಗದಾಸರಿಗೆ ಹರಿದಾಸ ದೀಕ್ಷೆಯನ್ನು ಕೊಟ್ಟ ಪರಮಗುರುಗಳ ಮೇಲೂ, ಅಜ್ಞಾನ-ಅವಿಸ್ಮರಣೆಗಳ ತೆರೆಯ ಮುಸುಕನ್ನು ಹಾಕಲು ಅವರು ಹಿಂದೆ ಮುಂದೆ ನೋಡುವುದಿಲ್ಲ.

ಬೇಲೂರಲ್ಲಿರುವಾಗ ಶ್ರೀಪುರಂದರದಾಸರು, ವೈಕುಂಠದಾಸರು ಆನೆಯಿಂದ ಸಾಯಬೇಕಾಗಿದ್ದ ಅಪಮೃತ್ಯುಯೋಗವನ್ನು ತಪ್ಪಿಸಿದರೆಂದು ಹೇಳುವ ಒಂದು ಮಹಿಮಾಕಥೆಯೂ ಇದೆ. ಗುರು ಪುರಂದರದಾಸರಂತೂ ಈ ಬಗೆಯ ಅದ್ಭುತ ಮಹಿಮೆಗಳನ್ನು ಹಲವಾರು ಹಿಡಿದುಹಾಕಿದ್ದಾರೆ.

ಭಾರತದಲ್ಲಿ, ಒಂದು ಮಾರ್ಗದ ಶರಣ-ಸಂತರನ್ನು ಇನ್ನೊಂದು ಮಾರ್ಗದ ಸಂತ-ಶರಣರು ಮನ್ನಿಸುವುದಿಲ್ಲವಾದರೂ, ಅವರವರ ಅನುಯಾಯಿವರ್ಗ, ಅವರವರ ಬಗೆಗೆ, ವಿವಿಧ ಘಟನೆಗಳನ್ನೊಳಗೊಂಡ ಮಹಿಮಾವಳಿಯನ್ನು ನಿರ್ಮಿಸಿರುತ್ತದೆ. ಆದರೆ ಈ ನಿರ್ಮಾಣತಂತ್ರದಲ್ಲಿ ಹೊಸ ರೀತಿಯನ್ನೇನೂ ಕಾಣುವಂತಿಲ್ಲ. ಅವರೆಲ್ಲರೂ ಭಾವಾವೇಶದ ಭಾರದಲ್ಲಿ ಬುದ್ಧಿಶಕ್ತಿಯನ್ನು ನಿರ್ವಿಣ್ಣಗೊಳಿಸಿಬಿಟ್ಟಿರುತ್ತಾರೆ. ಎಷ್ಟೋ ಸಲ ಒಂದೇ ಬಗೆಯ ಒಂದು ಘಟನೆ, ಬೇರೆ ಬೇರೆ ಸಂತ-ಶರಣರ ಮಹಿಮೆಗಳಲ್ಲಿ ಅಡಕವಾಗಿರುವುದು. ಆದರೂ ಒಬ್ಬ ಸಂತನ ಅನುಯಾಯಿ, ಇನ್ನೊಬ್ಬ ಸಂತನ ಮಹಿಮೆಯನ್ನು ಅಶ್ರದ್ಧೆಯಿಂದ ಕಾಣುತ್ತಾನೆ. ಆಗ ಪಾತ್ರ ಅವನು ತನ್ನ ಬುದ್ಧಿಯನ್ನು ಎಚ್ಚರಿಸಿರುತ್ತಾನೆ.

## ೧೧ ವಾಸ್ತವ ಇತಿಹಾಸವೇನಾದರೂ ಇದೆಯೆ ?

### I ಜನ್ಮಸ್ಥಳ ವಿಚಾರ

ಪುರಂದರದಾಸರು ಐತಿಹಾಸಿಕ ವ್ಯಕ್ತಿಯೆಂಬುದರ ಬಗೆಗೆ ಯಾವ ಸಂದೇಹವೂ ಇಲ್ಲ; ಆದರೆ ಅವರು ಭಕ್ತಕವಿಗಳಾಗಿ ಹರಿದಾಸಶ್ರೇಷ್ಠರಾ-ದುದರಿಂದ, ಅವರ ತರುವಾಯದ ಅನುಯಾಯಿ ವರ್ಗ, ಅವರನ್ನು ಅವತಾರಿ ಪುರುಷರ ಸ್ಥಾನಕ್ಕೇರಿಸುವ ಹುಮ್ಮಸದಲ್ಲಿ, ದಾಸರ ವಾಸ್ತವಜೀವನವನ್ನು ಕೇವಲ ಮಾಹಾತ್ಮ್ಯಗಳಿಂದ ಮುಚ್ಚಿಡಲು ಹೇಗೆ ಹೇಗೆ ಕಾರ್ಯ ಮಾಡಿರುವು ದೆಂಬುದನ್ನು ಇದುವರೆಗೆ ವಿವರಿಸಿ ಆಯಿತು ಅವರ ವಾಸ್ತವಜೀವನ ವನ್ನು ಪ್ರಕಟಿಸುವಂತಹ ಚಾರಿತ್ರಿಕ ಪ್ರಮಾಣಗಳೇನಾದರೂ ಸಿಕ್ಕುವುವೇ? ಎಂಬುದನ್ನೀಗ ವಿಚಾರಮಾಡೋಣ.

ಯಾವುದೇ ಐತಿಹಾಸಿಕ ಮಹಾವ್ಯಕ್ತಿಗಳ ಪರಿಚಯ ಮಾಡಿಕೊಡಬೇ ಕಾದಾಗ, ಎಲ್ಲಕ್ಕಿಂತ ಮೊದಲು ಆ ಮಹಾವ್ಯಕ್ತಿಯ ಜನ್ಮಸ್ಥಳ, ಜನ್ಮಕಾಲ ಗಳನ್ನು ಕುರಿತು ಹೇಳಬೇಕಾದುದು ಇತಿಹಾಸ ಲೇಖಕರ ಆವಶ್ಯಕ ಕರ್ತವ್ಯ ವಾಗಿದೆ. ಜನ್ಮಸ್ಥಳವು ಮಹಾರಾಷ್ಟ್ರದಲ್ಲಿರುವ ಐತಿಹಾಸಿಕ ಸ್ಥಳ 'ಪುರಂದರ ಗಡ' ಎಂಬುದು, ಇದುವರೆಗೆ ನಮ್ಮಲ್ಲಿಯ ಸಾರ್ವಜನಿಕ ನಂಬುಗೆಯಾಗಿದೆ. ಆದರೆ ಇದನ್ನು ಒಪ್ಪದಿರುವ ಸಂಶೋಧಕರೂ ಇಂದು ಮುಂದೆ ಬರಲು ತೊಡಗಿದ್ದಾರೆ. ಮಹಾರಾಷ್ಟ್ರ ಭಾಷೆಯಲ್ಲಿರುವ 'ಸಂತಮಾಲಿಕೆ'ಯಲ್ಲಿ ಪುರಂ ದರದಾಸರಿಗೂ ಒಂದು ಸ್ಥಾನ ದೊರೆತಿದೆ. ಮಹಾರಾಷ್ಟ್ರಕ್ಕೆ ಪುರಂದರದಾ ಸರು ಅಪರಿಚಿತರೇನೂ ಅಲ್ಲ. ಕ್ರಿ. ಶ. ೧೮ನೆಯ ಶತಮಾನದಲ್ಲಿ ಕರ್ನಾಟ ದಲ್ಲಿ ಆಗಿಹೋದ ಸಂತ ವಿಠೋಬಾ ಅಣ್ಣಾ ದಫ್ತರದಾರರು, ತಾವು ಪುರಂದರ ದಾಸರ ಅಂಶಾವತಾರಿಗಳೆಂದೂ ಅವರು ಐದು ಲಕ್ಷ ಗ್ರಂಥಗಳನ್ನು ಆ ಜನ್ಮ ದಲ್ಲಿ ಮುಗಿಸದಿದ್ದುದರಿಂದ, ಕಾಲುಲಕ್ಷ ಗ್ರಂಥಗಳನ್ನು ತಾವು ರಚಿಸಿ ಅವರ ಕಾರ್ಯವನ್ನು ಪೂರ್ಣಗೊಳಿಸಿರುವೆವೆಂದೂ ಹೇಳುತ್ತಿದ್ದ ವಿಷಯವು, ಶ್ರೀ ಆಜಗಾಂವಕರ ವಿರಚಿತ 'ಮಹಾರಾಷ್ಟ್ರ ಕವಿಚರಿತೆ'ಯಲ್ಲಿ ಪ್ರಕಟವಾಗಿದೆ. ಅಲ್ಲದೆ ವಿಠೋಬಾ ಅಣ್ಣಾ ದಫ್ತರದಾರ್ ಅವರ ಸಾಹಿತ್ಯಕೃತಿಗಳಮೇಲೆ, ಪುರಂದರದಾಸರ ಕೃತಿಗಳ ಛಾಯೆ ಸ್ಪಷ್ಟವಾಗಿ ಮೂಡಿದೆಯೆಂಬುದನ್ನು ತುಲನಾತ್ಮಕ ಅಭ್ಯಾಸ ಮಾಡಿದ ವಿದ್ವಾಂಸರು ಹೇಳುತ್ತಾರೆ. ಪುರಂದರ

ದಾಸರ ಕೊನೆಕೊನೆಯ ಕಾಲದಲ್ಲಿಯೆ ತಮ್ಮ ಭಕ್ತಿ ಸಾಹಿತ್ಯ ನಿರ್ಮಾಣಕಾರ್ಯ ವನ್ನು ಪ್ರಾರಂಭಿಸಿದ ಸಂತ ಏಕನಾಥರೂ, ಪುರಂದರದಾಸರ ಸಾಹಿತ್ಯದಿಂದ ಪ್ರಭಾವಿತರಾಗಿದ್ದರೆಂಬುದನ್ನು, ಇಬ್ಬರ ಸಾಹಿತ್ಯರೀತಿಗಳಿಂದ ಗುರುತಿಸ ಬಹುದಾಗಿದೆ. ಇಷ್ಟೆಲ್ಲವಾದರೂ ಮಹಾರಾಷ್ಟ್ರದಲ್ಲಿ, ಪುರಂದರದಾಸರು ಪುರಂದರಗಡದಲ್ಲಿ ಜನ್ಮಿಸಿದರೆಂಬ ಭಾವನೆ ಎಲ್ಲಿಯೂ ಇದ್ದಂತಿಲ್ಲ. ಇಂದಿನ ಪುರಂದರಗಡಕ್ಕೆ ಹೋಗಿ ನೋಡಿದರೆ, ಅಲ್ಲಿ ಪುರಂದರದಾಸರ ಸ್ಮಾರಕಗಳೂ ಇಲ್ಲ, ಅವರ ಸ್ಮರಣೆಯ ಮಾತುಗಳೂ ಇಲ್ಲ. ಪುರಂದರಗಡದಲ್ಲಿ 'ಪುರಂ ದರೇಶ್ವರ' ಎಂಬ ೧೮ನೆಯ ಶತಮಾನದ ಶಿವಮಂದಿರವೊಂದಲ್ಲದೆ, ಇನ್ನಾವ ವೈಷ್ಣವದೇವಾಲಯಗಳೂ ಇಲ್ಲ. ಗುರುಪುರಂದರದಾಸರ ಮಾತುಗಳನ್ನು ನಂಬುವುದಾದರೆ, ಅಲ್ಲಿ ಸ್ಥಳೀಯ ವಿಟ್ಠಲನ ಮಂದಿರವಿರಬೇಕು, ಆದರೆ ಆ ಮಂದಿರವಿದ್ದ ಕುರುಹುಗಳು ಕೂಡ ಅಲ್ಲಿ ಇಲ್ಲವೆಂದು, ಸಂಶೋಧನೆಯ ಉದ್ದೇಶದಿಂದಲೇ ಅಲ್ಲಿಗೆ ಹೋಗಿಬಂದ ಪುರಂದರದಾಸರ ಅಭ್ಯಾಸಿಗಳೊ ಬ್ಬರು ನಮಗೆ ತಿಳುಹಿದ್ದಾರೆ. ಪುರಂದರಗಡವೇ ದಾಸರ ಜನ್ಮಸ್ಥಳವಾಗಿದ್ದರೆ ವಿಟ್ಠಲನ ಅನನ್ಯಭಕ್ತರಾದ ಪುರಂದರದಾಸರ ಸ್ಮರಣೆಯನ್ನು, ವಿಟ್ಠಲನ ಭಕ್ತಿಪರಂಪರೆಯನ್ನು ಇದುವರೆಗೆ ಕಾಯ್ದುಕೊಂಡು ಬಂದಿರುವ ಮಹಾ- ರಾಷ್ಟ್ರೀಯರು ಎಂದೂ ಮರೆಯುತ್ತಿರಲಿಲ್ಲ. ಆದುದರಿಂದಲೇ 'ಪುರಂದರ ಗಡ'ವು ಪುರಂದರದಾಸರ ಜನ್ಮಸ್ಥಳವಾಗಿರಲಾರದೆಂದು ಹೇಳುವ ಸಂಶೋ- ಧಕರೂ ಮುಂದೆ ಬಂದಿದ್ದಾರೆ. ಇವರ ವಿಚಾರಸರಣಿ ಅಸ್ವಾಭಾವಿಕವೆನಿಸು ವುದಿಲ್ಲ, ಒಪ್ಪಲಾರದಂತಹದೂ ಎನಿಸುವುದಿಲ್ಲ.

ವಿಜಯದಾಸರ ಸಮಕಾಲೀನ ಹರಿದಾಸರೆಲ್ಲರೂ 'ಪುರಂದರಾಲಯ ಘಟ್ಟ', 'ಪುರಂದರ ಪುರ', 'ಪುರಂದರ ನಗರ' ಎಂದು ಹೇಳಿರುವರಲ್ಲದೆ ಒಬ್ಬಿಬ್ಬರು ಇದಕ್ಕೆ ಪರ್ಯಾಯನಾಮವಾಗಿ 'ಪಾಕಶಾಸನ ಪುರ', 'ಕುಲಿಶ ಧರಾಹ್ವಯ ಪಟ್ಟಣ' ಎಂದೂ ಹೇಳಿದ್ದಾರೆ. ಘಟ್ಟ ಎಂಬುದು ಬೆಟ್ಟದ ಓವರಿ ಎಂಬ ಅರ್ಥವನ್ನು ಕೊಡುವುದಲ್ಲದೆ, 'ಗಡ' ಎಂದರೆ ಕೋಟೆ ಎಂಬ ಅರ್ಥ ವನ್ನು ಹೇಳುವುದಿಲ್ಲ. ಆದುದರಿಂದ, 'ಪುರಂದರಾಲಯ ಘಟ್ಟ' ಎಂಬ ಗ್ರಾಮವೋ ಪಟ್ಟಣವೋ —ಬೇರೆಯೇ ಇರಬಹುದಾಗಿದೆ. ಇಷ್ಟೇ ಅಲ್ಲ, ಅದು ಕರ್ನಾಟಕಪ್ರದೇಶದಲ್ಲಿಯೇ ಇರಬಹುದಾಗಿದೆ. ದಕ್ಷಿಣದೇಶದಲ್ಲೆಲ್ಲ ಪುರಂದರ

ದಾಸರ ಜನ್ಮಸ್ಥಳವು, ಹಂಪೆಯ ಬಳಿಯಲ್ಲಿದ್ದಿತು— ಎಂಬ ಕಲ್ಪನೆ, ಬಹು-ಕಾಲದಿಂದಲೂ ಪ್ರಚಾರದಲ್ಲಿದೆ. ಪುರಂದರದಾಸರ ವಿಷಯದಲ್ಲಿ ತಮಿಳು, ತೆಲುಗು, ಇಂಗ್ಲಿಷ್ ಭಾಷೆಯಲ್ಲಿ ಬರೆದ ದಕ್ಷಿಣದೇಶದ ವಿದ್ವಾಂಸರು, ತಮ್ಮಲ್ಲಿ ಪ್ರಚಾರದಲ್ಲಿರುವ ಮಾತನ್ನೇ ಪುರಸ್ಕರಿಸಿ ಹೇಳಿದ್ದಾರೆ. ಈ ಸಂಗತಿಯೂ ಪುರಂದರದಾಸರ ಜನ್ಮಸ್ಥಳ ಕರ್ನಾಟಕದಲ್ಲಿಯೇ ಇದ್ದಿರಬಹುದೆಂಬ ಅನು-ಮಾನಕ್ಕೆ ಪುಷ್ಟಿಯನ್ನು ಕೊಡುತ್ತದೆ.

ಪುರಂದರದಾಸರಿಗಿಂತ ಪೂರ್ವದಲ್ಲಿ, ಕನ್ನಡನಾಡಿನ ಬಯಲುಸೀಮೆ-ಯಲ್ಲಿ ವಿಸ್ತಾರವಾಗಿ ಹಬ್ಬಿ-ಹರಡಿದ ಭಾಗವತ ಪಂಥದವರೆಲ್ಲರ ಉಪಾಸ್ಯ ದೈವತವೆಂದರೆ ಪಂಡರಿಗೆಯ ವಿಟ್ಠಲ. ವಿಟ್ಠಲನು ಕನ್ನಡನಾಡಿನ ದೈವತ ವೆಂಬುದನ್ನು, ಮಹಾರಾಷ್ಟ್ರದ ಮುಖ್ಯ ಸಂತಶ್ರೇಷ್ಠರಾದ ಜ್ಞಾನೇಶ್ವರ, ಏಕ-ನಾಥರು ತಮ್ಮ ಕೃತಿಗಳಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಉತ್ತರಕನ್ನಡದ ಈ ವಿಟ್ಠಲನ ಉಪಾಸನೆ, ಕನ್ನಡನಾಡಿನ ಎಲ್ಲ ಭಾಗವತರಲ್ಲಿ ಅಷ್ಟೇ ಅಲ್ಲದೆ, ದಕ್ಷಿಣದೇಶಗಳವರೆಗೂ ನಿಲುಕಿದ್ದಿತೆಂಬುದಕ್ಕೆ ಸಾಕಷ್ಟು ಪ್ರಮಾಣಗಳು ಸಿಕ್ಕು ತ್ತವೆ. ಆದುದರಿಂದ ವಿಟ್ಠಲನ ಭಕ್ತರಾದ ಪುರಂದರದಾಸರ ಮನೆತನದವರು, ಮಹಾರಾಷ್ಟ್ರದ ಪುರಂದರಗಡದವರೇ ಆಗಬೇಕಾದ ಕಾರಣವೇನೂ ಇಲ್ಲ. ಮುಳುಬಾಗಿಲಿನಲ್ಲಿ ಭಾಗವತ ಸಂಪ್ರದಾಯದ ಸಂನ್ಯಾಸಿಗಳ ಒಂದು ಮಠ-ವಿದೆ. ಅಲ್ಲಿಯ ಸ್ವಾಮಿಗಳು ವಿಷ್ಣುಪಂಚಾಯತನದ ಪೂಜೆಯನ್ನೇ ನಿತ್ಯವೂ ಮಾಡುವರು. ವಿಷ್ಣುವಿನ ಸ್ಥಾನದಲ್ಲಿ ಶ್ರೀಕೃಷ್ಣನ ಪ್ರತಿಮೆಯಿರುವುದು. ಶ್ರೀಮದಾನಂದತೀರ್ಥರ ದೀಕ್ಷಾಗುರುಗಳಾದ ಶ್ರೀ ಶ್ರೀ ಅಚ್ಯುತಪ್ರೇಕ್ಷರು ಕೂಡ ಮೊದಲು ಭಾಗವತ ಪಂಥದವರ ಗುರುಗಳೇ ಆಗಿರಬಹುದಾಗಿದೆ. ಆದುದರಿಂದ ಶ್ರೀಪುರಂದರದಾಸರ ಭಾಗವತಾನುಯಾಯಿ ಪೂರ್ವಜರು, ಕರ್ನಾಟಕದಲ್ಲಿಯೇ ಇರಬಹುದಾಗಿದೆ ದಾಸರ ಜನ್ಮಸ್ಥಳ ಪುರಂದರಾಲಯ ಘಟ್ಟವು. ಶಿವಮೊಗ್ಗೆಯ ಜಿಲ್ಲೆಯಲ್ಲಿ ಇರಬಹುದೇ ?— ಎಂಬ ಅನುಮಾನ ವನ್ನು, ಸುಪ್ರಸಿದ್ಧ ಇತಿಹಾಸ ಸಂಶೋಧಕರಾದ, ಶ್ರೀ. ಕಪಟರಾಳ ಕೃಷ್ಣರಾ-ಯರು, ಅನೇಕ ಐತಿಹಾಸಿಕ ಪ್ರಮಾಣಗಳೊಂದಿಗೆ ಸಂಶೋಧಕರ ಮುಂದೆ ಇರಿಸಿದ್ದಾರೆ. ವಿಚಾರಮಾಡಬಹುದಾದ ಅನುಮಾನವಿದು. ಆದರೆ 'ಹಂಪೆಯ ಬಳಿಯಲ್ಲಿ' ಎಂಬ ದಕ್ಷಿಣದೇಶಗಳಲ್ಲಿರುವ ರೂಢವಿಶ್ವಾಸಕ್ಕೆ ಇದು ವಿರೋಧಿ-ಯಾಗುವುದು.

ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ಪುರಂದರದಾಸರ ಜನ್ಮಸ್ಥಳದ ವಿಷಯವು ಇದುವರೆಗೂ ಇತಿಹಾಸ ಸಂಶೋಧಕರಿಗೆ ಸಮಸ್ಯೆಯಾಗಿಯೇ ಉಳಿದಿದೆ. ಆದರೆ ಒಂದು ಸಮಾಧಾನದ ವಿಷಯವೆಂದರೆ, ದಾಸರ ಜನ್ಮ-ಸ್ಥಳವನ್ನು, ಪರಂಪರೆಯ ಮಾತುಗಳ ಮೇಲೆ ವಿಶ್ವಾಸವಿಡದೆ, ಬೇರೆ ಬೇರೆ ಜನರು ಹುಡುಕುತ್ತಲಿದ್ದಾರೆ. ಸಪ್ರಮಾಣಸತ್ಯವು ಎಂದು ಬಯಲಿಗೆ ಬರು-ವುದೋ ನೋಡಬೇಕು.

## II ದಾಸರಕಾಲವಿಚಾರ :

ಜನ್ಮಸ್ಥಳದ ವಿಚಾರ ಅಸ್ಪಷ್ಟವಾಗಿ ಉಳಿದಿರುವಂತೆಯೆ, ಪುರಂದರ ದಾಸರ ಜನ್ಮಕಾಲವಾದರೂ ಅಸ್ಪಷ್ಟವಾಗಿಯೆ ಉಳಿದಿದೆ; ಆದರೆ ಅವರು ಬದುಕಿ ಬಾಳಿದ ಕಾಲವು ಕ್ರಿ.ಶ. ಹದಿನಾರನೆಯ ಶತಮಾನ ಎಂದು ಸ್ಥೂಲ-ವಾಗಿ ಹೇಳಬಹುದು. ಇದುವರೆಗಿನ ಸಾಹಿತ್ಯಸಂಶೋಧಕರು ಇದೇ ಮಾತು ಹೇಳುತ್ತ ಬಂದಿದ್ದಾರೆ. ೧೫೩೯ರ ವರೆಗೆ ವಿಜಯನಗರದಲ್ಲಿ ರಾಜಪೂಜ್ಯರಾಗಿ ಬದುಕಿದ ಶ್ರೀವ್ಯಾಸರಾಯ ಸ್ವಾಮಿಗಳು, ಪುರಂದರದಾಸರ ದೀಕ್ಷಾಗುರು-ಗಳಾದುದರಿಂದಲೂ, ಶ್ರೀವಿಜಯದಾಸರೂ ಮಧ್ವಪತಿದಾಸರೂ ಇವರ ನಿರ್ಯಾಣದಿನ ರಕ್ತಾಕ್ಷಿಸಂವತ್ಸರದ ಪುಷ್ಯ ಬಹುಳ ಅಮಾವಾಸ್ಯೆಯೆಂದು ಹೇಳಿರುವುದರಿಂದಲೂ, ಪುರಂದರದಾಸರಕಾಲ ಕ್ರಿ.ಶ. ೧೬ನೆಯ ಶತಮಾನ ವೆಂದು, ಸಂಶೋಧಕರು ನಿರ್ಣಯಾತ್ಮಕವಾಗಿ ಹೇಳುವುದಕ್ಕೆ ಸಾಧ್ಯವಾಗಿದೆ. ಆದರೆ ಪುರಂದರದಾಸರು ವ್ಯಾಸರಾಯರಿಂದ ಹರಿದಾಸದೀಕ್ಷೆ ಪಡೆದಾಗ, ಅವರು ಎಷ್ಟು ವಯಸ್ಸಿನವರಿರಬಹುದೆಂಬುದನ್ನು ಹೇಳುವುದಕ್ಕೆ ಪ್ರತ್ಯಕ್ಷ ಶಬ್ದಪ್ರಮಾಣಗಳಾವುವೂ ದೊರೆಯುವುದಿಲ್ಲ. ಅದನ್ನೂ ನಾವು ಅನುಮಾನ ಗಳ ಆಧಾರದಿಂದಲೇ ಹುಡುಕಿ ತೆಗೆಯಬೇಕಾಗುವುದು.

ಸಂಸ್ಕೃತ ಭಾಷೆಯಲ್ಲಿರುವ 'ಶ್ರೀಪುರಂದರದಾಸಮಾಹಾತ್ಮ್ಯಮ್' ಎಂಬ ಕೈಬರೆಹದ ಗ್ರಂಥದಲ್ಲಿ, ಪುರಂದರದಾಸರ ಜನ್ಮ-ನಿರ್ಯಾಣ ವರುಷ ಗಳನ್ನೂ ವ್ಯಕ್ತಪಡಿಸುವಂತಹದೊಂದು ಶ್ಲೋಕ ಹೀಗಿದೆ:

**ಪಾರ್ಥಶೂನ್ಯಶ್ರುತಿಹರಿ । ಯುತೇ ಶಾಕೇಹ್ಯಭೂದಯಮ್ ॥**
**ಭಿದಾವಸುಶ್ರುತಿಹರಿ । ಮಿತೇ ವೈಕುಂಠಮಾಪಹ ॥**

(೫ನೆಯ ವಿಲಾಸ, ೧೦ನೆಯ ಪದ್ಯ)

ಈ ಕೃತಿನಿರ್ಮಿತಿಯ ಕಾಲ ೧೦೦-೧೨೦ ವರ್ಷಗಳಿಗಿಂತ ಹಿಂದೆ ಹೋಗಲಾರದಾದುದರಿಂದ, ಈ ಜನ್ಮ-ನಿರ್ಯಾಣ ವರ್ಷಗಳ ವಿಚಾರವನ್ನು ಎಷ್ಟೊಂದು ಸಾಧಾರವಾಗಿ ಹೇಳಿರುವರೋ— ಎಂದು ಯಾರೂ ಸಂಶಯ ತಾಳಬಹುದು. ಆದರೂ ಇವರ ಕಾಲನಿರೂಪಣೆಗೆ, ಯಾವುದೋ ಪರಂಪರೆಯ ಮೂಲವು ಪ್ರಮಾಣವನ್ನು ಒದಗಿಸಿಕೊಟ್ಟಿರಬಹುದೆಂದು ತೋರುವುದು. ಮೇಲಿನ ಶ್ಲೋಕದಲ್ಲಿ ಪರ್ಯಾಯಪದಗಳಿಂದ ಶಕವರ್ಷಗಳ ಸಂಖ್ಯೆಯನ್ನು ವಿವರಿಸಿರುವುದರಿಂದ, ಆ ಸಂಖ್ಯೆಗಳಾವುವೆಂಬುದನ್ನು ನಾವೀಗ ನೋಡೋಣ:

ಹುಟ್ಟಿದ ವರ್ಷವನ್ನು ಹೇಳುವಾಗ 'ಪಾರ್ಥಶೂನ್ಯಶ್ರುತಿ ಹರಿ' ಎಂದು ನಾಲ್ಕುಪರ್ಯಾಯಪದಗಳಿರುವವು, ಪಾರ್ಥ = ೨ (ಅರ್ಜುನ-ಕರ್ಣ ಇಬ್ಬರೂ ಪಾರ್ಥರು). ಶೂನ್ಯ = ೦, ಶ್ರುತಿ = ೪, ಹರಿ = (ಚಂದ್ರ) ೧, ಈ ಅಂಕೆಗಳನ್ನು ಎಡಗಡೆಯಿಂದ ಒಂದರ ಮುಂದೆ ಒಂದನ್ನಿಟ್ಟು ಓದಬೇಕಾಗುವುದು. ಹಾಗೆ ಓದಿದರೆ, ೧೪೦೨ನೆಯ ಶಕವರ್ಷ ಎಂದರೆ ೧೪೮೦ನೆಯ ಕ್ರಿಸ್ತಶಕವರುಷ ಎಂದಾಗುವುದು.

ಇನ್ನು ವೈಕುಂಠಯಾತ್ರೆಯನ್ನು ಸೂಚಿಸುವ ಪರ್ಯಾಯಪದಗಳನ್ನು ನೋಡಿದರೆ ' ಭಿದಾವಸು ಶ್ರುತಿ ಹರಿ ' ಎಂದಿವೆ. ಈ ಪರ್ಯಾಯ ಪದಗಳು ಸೂಚಿಸುವ ಅಂಕೆಗಳಾವುವೆಂದರೆ, ಭಿದಾ=(ಪಂಚಭೇದ) ೫; ವಸು=(ಅಷ್ಟವಸು)=೮; ಶ್ರುತಿ=(ಚತುರ್ವೇದ) ೪; ಹರಿ=(ಚಂದ್ರ) ೧, ಇವುಗಳನ್ನು ಎಡಗಡೆಯಿಂದ ಓದಿದರೆ ೧೪೮೫ನೆಯ ಶಾ. ವಾ. ಶಕವರ್ಷ— ಎಂದರೆ ೧೫೬೪ (ಪುಷ್ಯಮಾಸವಾದುದರಿಂದ) ಕ್ರಿ. ಶಕವರ್ಷವು, ನಿರ್ಯಾಣವ ವರ್ಷವಾಗುವುದು. ಎಂದರೆ, ಇಲ್ಲಿಯ ಎಣಿಕೆಯಂತೆ ಶ್ರೀಪುರಂದರ ದಾಸರು ೮೪ ವರ್ಷಗಳ ಕಾಲ ಜೀವಿಸಿದ್ದರೆಂದು ಸಿದ್ಧವಾಗುವುದು. ಈ ಎಣಿಕೆ ಅಸ್ವಾಭಾವಿಕವೇನೂ ಎನಿಸುವಂತಿಲ್ಲ. ಏಕೆಂದರೆ, ಮೇಲಿನ ಶ್ಲೋಕದಲ್ಲಿಯ ವಿಷಯ ಗೊತ್ತಿಲ್ಲದ ಒಬ್ಬಿಬ್ಬರು ಇತಿಹಾಸ ಸಂಶೋಧಕರೂ, ಸಾಧಕ–ಬಾಧಕ ವಿಷಯಗಳ ಚರ್ಚೆಯನ್ನುಮಾಡಿ* 'ನಾವು ಲೆಕ್ಕಹಾಕಿದಂತೆ ಪುರಂದರದಾಸರು ಕ್ರಿ. ಶ. ೧೪೮೦-೧೫೬೪ ರ ಅವಧಿಯಲ್ಲಿ ಬಾಳಿರಬೇಕು. ದಾಸರ ಜನನವು ಕ್ರಿ. ಶ. ೧೪೮೦ ರ ಕೆಲವು ವರ್ಷ ಮುಂಚೆ ಜರುಗಿರು

---

* ಶ್ರೀ ಆರ್. ಎಸ್. ಪಂಚಮುಖಿ (ಮುಂಚಿನಬಳ್ಳಿಯ) ಶ್ರೀಪುರಂದರದಾಸರು.

ವುದೂ ಅಸಂಭಾವ್ಯವಲ್ಲ' ಎಂದು ಬರೆದಿದ್ದಾರೆ. ಡಾ. ಪಾಂ. ಭೀ. ದೇಸಾಯಿಯವರೂ ಜನ್ಮವರ್ಷ ೧೪೮೦ ನೆಯ ವರ್ಷ ಇರಬಹುದೆಂಬ ನಿರ್ಣಯಕ್ಕೇ ಬಂದಿದ್ದಾರೆ.

ಆದರೆ ಹಿಂದೆ ಹೇಳಿದ ಸಂಸ್ಕೃತಶ್ಲೋಕದಲ್ಲಿ ಜನ್ಮ-ನಿರ್ಯಾಣ ಶಕ ವರ್ಷಗಳು ಮಾತ್ರ ಇವೆ. ಸಂವತ್ಸರ, ಮಾಸ, ತಿಥಿ, ವಾರ ಮೊದಲಾದುವುಗಳಾವುವೂ ಅದರಲ್ಲಿ ಉಕ್ತವಾಗಿಲ್ಲ. ದಾಸರ ನಿರ್ಯಾಣವಿಷಯವನ್ನು ಹೇಳುತ್ತ ಶ್ರೀವಿಜಯದಾಸರು ಒಂದು ಸುಳಾದಿಯ ಕೊನೆಯ ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ:

"ಭಕ್ತಿಗೆಲ್ಲಿಯು ಸರಿಗಾಣೆ, ಮುಕ್ತಿಗೆಲ್ಲಿಯು ಸರಿಗಾಣೆ ।
ಮುಕ್ತ್ಯರ್ಥ ಹರಿಪಾದಾಸಕ್ತರಾಗಿ ಧ್ಯಾನಿಸುತ್ತ ।
ರಕ್ತಾಕ್ಷಿವತ್ಸರದರ್ಕವಾರ ಇಂದುಕ್ಷಯ ।
ಯುಕ್ತ ಪುಷ್ಯಮಾಸದಿ ಉದ್ಯುಕ್ತರಾಗಿ ಪುಷ್ಪಕದಿ ।
ವ್ಯಕ್ತವಾಗಿ ಪೊಳೆದು ಮಧುರೋಕ್ತಿಯಲ್ಲಿ ತರಣಿಯಂತೆ ।
ಮುಕ್ತಿಗೆ ಸಾರಿದರು ವಿರಕ್ತಿಮಾರ್ಗವನ್ನೆ ಪಡೆದು ।
ಮುಕ್ತಾಮುಕ್ತಾಶ್ರಯ ನಮ್ಮ ವಿಜಯವಿಠಲರೇಯನ
ಶಕ್ತನೆಂದು ಪೊಗಳಿ ಬಲು ರಿಕ್ತರಿಗಾಧಾರವಿತ್ತು ॥"

ಇದರಲ್ಲಿ ಪುರಂದರದಾಸರ ನಿರ್ಯಾಣಕಾಲದ ಸಂವತ್ಸರ, ಮಾಸ, ತಿಥಿ, ವಾರ ಇವೆಲ್ಲವುಗಳ ವಿವರಣೆಯಿದೆಯಾದರೂ, ಶಕವರ್ಷ ಸಂಖ್ಯೆಯನ್ನು ಹೇಳಲಾಗಿಲ್ಲ. ಈ ಮೊದಲು ಹೇಳಿದ ಗುರುಮಧ್ವಪತಿ ವಿಠಲಾಂಕಿತದ ದಾಸರು ವಿಜಯವಿಠ್ಠಲರ ಈ ಸುಳಾದಿಯಲ್ಲಿಯ ಮಾತುಗಳನ್ನು ಸ್ವೀಕರಿಸಿಯೆ 'ತೆರಳಿದರು ಪುರಂದರದಾಸರು' ಎಂಬ ನಿರ್ಯಾಣಗೀತವನ್ನು ರಚಿಸಿದಂತಿದೆ. ಅವರೂ ಶಕವರ್ಷ ಸಂಖ್ಯೆಯನ್ನು ಹೇಳಿಲ್ಲ (ಪಾಠಾಂತರಗಳ ಗಲಾಟೆಯಲ್ಲಿ ಇವರ ಈ ಹಾಡಿನಲ್ಲಿ 'ಮಂದವಾರ' 'ರವಿವಾರ' ಎಂದು ಎರಡು ವಾರಗಳ ಹೆಸರುಗಳೂ ಬಂದಿವೆ).

ಕ್ರಿ. ಶ. ೧೬ನೆಯ ಶತಮಾನದಲ್ಲಿ ರಕ್ತಾಕ್ಷಿ ಸಂವತ್ಸರ ೧೪೮೬ನೆಯ ಶಕವರ್ಷಕ್ಕೆ ಸಂಬಂಧಿಸುವುದೆಂದು, ಶ್ರೀ. ಸ್ವಾಮಿಕಣ್ಣು ಪಿಳ್ಳೆಯವರ ಕಾಲಗಣನೆಯು ಹೇಳುತ್ತದೆ. ಈ ವರ್ಷದ ಪುಷ್ಯ ಬಹುಳ ಅಮಾವಾಸ್ಯೆ

೨-೧-೧೫೬೫ ರಂದು ಆಗುವುದೆಂಬುದೂ, ಅದೇ ಕಾಲಗಣನೆಯ ಜಂತ್ರಿಯಿಂದ ಹೊರಡುತ್ತದೆ. ಈಗ ನಾವು 'ಪುರಂದರದಾಸ ಮಾಹಾತ್ಮ್ಯಮ್' ಗ್ರಂಥದಲ್ಲಿಯ ನಿರ್ಯಾಣ ಶಕವರ್ಷಾಂಕವನ್ನು ಒಪ್ಪಿದರೆ, ಸಂವತ್ಸರ, ತಿಥಿ ವಾರಗಳು ತಪ್ಪಿಹೋಗುವುವು; ವಿಜಯದಾಸರ ಹೇಳಿಕೆಯನ್ನು ತೆಗೆದುಕೊಂಡರೆ, ಸಂಸ್ಕೃತ ಗ್ರಂಥದಲ್ಲಿ ಹೇಳಿದ ಶಕವರ್ಷದ ಸಂಖ್ಯೆ ತಪ್ಪಿಹೋಗುವುದು. ಈ ತೊಡಕನ್ನು ಹೇಗೆ ತಪ್ಪಿಸುವುದು ?

ವಿಜಯದಾಸರು ಹೇಳಿದ ಸಂವತ್ಸರ, ತಿಂಗಳು, ತಿಥಿ, ವಾರಗಳನ್ನೇ ಹೆಚ್ಚು ಸತ್ಯವಾದುವುಗಳೆಂದು ನಾವು ಸ್ವೀಕರಿಸಬೇಕಾಗುವುದು. ಏಕೆಂದರೆ ವಿಜಯದಾಸರು ಪುರಂದರದಾಸರ ಸಾಕ್ಷಾತ್ ಪರಂಪರೆಗೆ ಸೇರಿದವರಾದುದರಿಂದ, ಪುರಂದರದಾಸರ ಪುಣ್ಯತಿಥಿಯ ಉತ್ಸವವನ್ನು ಜರುಗಿಸುವ ಪರಂಪರೆ ಅವರ ಕಾಲದಲ್ಲಿ ಜಾಗೃತವಾಗಿರಬಹುದು. ಸಂಸ್ಕೃತಗ್ರಂಥ ನಿರ್ಮಿತಿಯ ಕಾಲ ತರುವಾಯದ್ದಾದುದರಿಂದ, ಪರ್ಯಾಯ ಪದಗಳಿಂದ ಸಂಖ್ಯೆಯನ್ನು ಹೇಳುವಾಗ ಸ್ವಲ್ಪ ತಪ್ಪಾಗಿರಬಹುದು. ಈ ಇಬ್ಬರು ಕೃತಿಕಾರರು ಬರೆದಿಟ್ಟ ಮಾತುಗಳಿಂದ, ಶ್ರೀಪುರಂದರದಾಸರು ೧೪೮೦ ರಿಂದ ೧೫೬೫ನೆಯ ಇಸ್ವಿಯವರೆಗೆ ೮೫ ವರ್ಷಗಳ ಕಾಲ ಬದುಕಿದ್ದರೆಂಬ ಸಿದ್ಧಾಂತಕ್ಕೆ ನಾವು ಬರಬಹುದಾಗಿದೆ. ಅವರು ಜನ್ಮಿಸಿದ ತಿಥಿ, ವಾರ, ಮಾಸಗಳು ಮಾತ್ರ ಗೊತ್ತಾಗುವಂತಿಲ್ಲ.

### III ದಾಸರ ಕುಲವೃತ್ತ

ದೇಶ-ಕಾಲಗಳನ್ನು ಕುರಿತು ಚರ್ಚಿಸಿ ಆದಮೇಲೆ, ನಾವೀಗ ಪುರಂದರದಾಸರ ಕುಲವೃತ್ತದ ಕಡೆಗೆ ದೃಷ್ಟಿಯನ್ನು ಹಾಯಿಸೋಣ! ಸಾಮಾನ್ಯವಾಗಿ ನಮ್ಮ ಭಾರತೀಯ ಪದ್ಧತಿಯೆಂದರೆ, ಪ್ರಸಕ್ತವ್ಯಕ್ತಿಯ ಪಿತೃ-ಪಿತಾಮಹ-ಪ್ರಪಿತಾಮಹರ ಪರಿಚಯವನ್ನೂ ಗೋತ್ರ-ಸೂತ್ರಗಳ ಪರಿಚಯವನ್ನೂ ಮೊದಲು ಮಾಡಿಕೊಡಬೇಕಾಗುವುದು. ಪಿತಾಮಹ-ಪ್ರಪಿತಾಮಹರ ಹೆಸರುಗಳನ್ನು ಯಾರೂ ಹೇಳಿಯೇ ಇಲ್ಲ. ತಂದೆಯ ಹೆಸರನ್ನು ಶ್ರೀವಿಜಯದಾಸರೂ ಅವರ ಅನುಗಾಮಿಗಳೂ **'ವರದಪ್ಪ ನಾಯಕ'** ಎಂದು ಹೇಳಿರುವರಾದರೆ, ಗುರುಪುರಂದರದಾಸರು **'ವಿಟ್ಠಲ ನಾಯಕ'** ಎಂದು ಹೇಳಿದ್ದಾರೆ. ಇವುಗಳಲ್ಲಿ ಯಾವುದೊಂದನ್ನು ಸತ್ಯವೆಂದು ನಂಬ

ಬೇಕೋ ತಿಳಿಯದ ವಿಷಯ. ಶ್ರೀವಿಜಯದಾಸರು ಪುರಂದರದಾಸರ ಹತ್ತಿರದ ಪರಂಪರೆಯವರಾದುದರಿಂದ, ಅವರು ಹೇಳಿದ ಹೆಸರೇ ಸತ್ಯವಿರಬಹುದೆಂದು ಊಹಿಸಬಹುದಾಗಿದೆ. ಇನ್ನಾರೂ ಹೇಳದೆ ಇದ್ದ ಶ್ರೀಪುರಂದರದಾಸರ ತಾಯಿಯ ಹೆಸರನ್ನು, ಗುರು ಪುರಂದರದಾಸರು 'ರುಕ್ಮಿಣಿ' ಎಂದು ಹೇಳಿದ್ದಾರೆ. ತಂದೆಯ ಹೆಸರು ವಿಟ್ಠಲನೆಂದಾದಮೇಲೆ, ತಾಯಿಯ ಹೆಸರು 'ರುಕ್ಮಿಣಿ' ಎಂದಾಗಲೇಬೇಕಲ್ಲವೆ? ಈ ಹೆಸರುಗಳು ಗುರುಪುರಂದರದಾಸರ ಕಲ್ಪನಾಲೋಕದುವಾಗಿರಬಹುದು. ಅಜ್ಞಾತನಾಮದ ಪಿತೃಗಳು ತರ್ಪಣ ಕಾಲದಲ್ಲಿ 'ರಾಮ' 'ಕೃಷ್ಣ' ಎಂಬ ಕಲ್ಪಿತನಾಮವನ್ನು ಪಡೆಯುವುದಿಲ್ಲವೇ? ಹಾಗೆ! ವಿಜಯದಾಸರು ಹೇಳಿದ ಚರಿತ್ರೆಗಿಂತ, ತಾವು ಹೇಳುವ ಚರಿತ್ರೆ, ಎಲ್ಲ ರೀತಿಯಿಂದಲೂ ನವೀನವವಾಗಿರಬೇಕೆಂದು, ಗುರುಪುರಂದರದಾಸರ ಉದ್ದೇಶವಿದ್ದಂತೆ ಕಾಣುತ್ತದೆ. ಆದುದರಿಂದಲೇ ಅವರು, ಪುರಂದರದಾಸರ ಚರಿತ್ರಚಿತ್ರಣವನ್ನು ಬೇರೆ ರೀತಿಯಿಂದಲೆ ಮಾಡಿದ್ದಾರೆ. ಆದರೆ ಹೆಚ್ಚು ಜನರು ವಿಜಯದಾಸರ ಹೇಳಿಕೆಯನ್ನೇ ಎತ್ತಿಹಿಡಿದಿದ್ದಾರೆ.

ಶ್ರೀಪುರಂದರದಾಸರ ಪೂರ್ವಜೀವನದ ವ್ಯವಹಾರನಾಮವನ್ನು, ಗುರುಪುರಂದರದಾಸರ ಹೊರತು ಇನ್ನಾರೂ ಹೇಳಿರುವುದಿಲ್ಲ. ಅವರು ದಾಸರ ಮೂಲ ಹೆಸರೇ **'ಪುರಂದರ'** ಎಂದು ಹೇಳುತ್ತಾರೆ. ಆದರೆ ನಮ್ಮ ಹರಿದಾಸಪರಂಪರೆಯವರಲ್ಲಿ **'ಶ್ರೀನಿವಾಸನಾಯಕ' 'ಕೃಷ್ಣಪ್ಪನಾಯಕ'** ಎಂಬ ಎರಡು ಹೆಸರು ಪ್ರಚಾರದಲ್ಲಿವೆ. ಇವು ಹೇಗೆ, ಯಾವಾಗ, ಯಾರಿಂದ ಪ್ರಚಾರದಲ್ಲಿ ಬಂದಿವೆಯೋ ತಿಳಿಯುವಂತಿಲ್ಲ. ದಾಸರ ಸಹ-ಧರ್ಮಿಣಿಯ ಹೆಸರನ್ನೂ ಬೇರೆ ಯಾವ ದಾಸರೂ ಹೇಳಿಲ್ಲ; ಆದರೆ ಗುರು ಪುರಂದರದಾಸರು 'ಗೌತಮೀಬಾಯಿ' ಎಂದು, ಅವರ ಹೆಸರು ಹೇಳಿದ್ದಾರೆ. ನಮ್ಮ ಹರಿದಾಸಪರಂಪರೆ ಗುರುಪುರಂದರದಾಸರು ಹೇಳಿದ ಹೆಸರನ್ನು ಪುರಸ್ಕರಿಸಿದಂತಿಲ್ಲ; ದಾಸರ ಹೆಂಡತಿಯ ಹೆಸರು **'ಸರಸ್ವತೀ-ಬಾಯಿ'** ಎಂದು ನಮ್ಮ ನಾಡಿಗರ ಮನದಲ್ಲಿ ರೂಢವಾಗಿದೆ. ಗುರು-ಪುರಂದರದಾಸರ ಹೇಳಿಕೆಗೆ ನಮ್ಮ ಪರಂಪರೆ, ಸ್ವಲ್ಪವೂ ಅವಕಾಶವನ್ನು ಕೊಡದಿರುವುದು, ಎಲ್ಲರೂ ವಿಚಾರಮಾಡಬೇಕಾದ ವೈಶಿಷ್ಟ್ಯಪೂರ್ಣ ವಿಷಯವೇ ಆಗಿದೆ. ನಮ್ಮ ನೆರೆಹೊರೆಯ ಪ್ರಾಂತಗಳಲ್ಲಿ ಪರಂಪರಾಗತ

ಪ್ರಚಾರದಲ್ಲಿರುವ ಪುರಂದರದಾಸರ ಚರಿತ್ರವಿಷಯವು, ವಿಜಯದಾಸರ ಉಕ್ತಿಯನ್ನೇ ಹೆಚ್ಚಾಗಿ ಅನುಸರಿಸಿದಂತಿದೆ.

ಪುರಂದರದಾಸರ ಗೋತ್ರ-ಸೂತ್ರಗಳನ್ನು ಕುರಿತು, ಅವರ ತರುವಾಯದ ಯಾವ ದಾಸರೂ ಹೇಳಿದ ಮಾತುಗಳು ನಮಗೆ ಸಿಕ್ಕುವುದಿಲ್ಲ. ಆದರೆ ಬಳ್ಳಾರಿ ಜಿಲ್ಲೆಯ ಕಮಲಾಪುರದಲ್ಲಿ ದೊರೆತ ಕ್ರಿ. ಶ. ೧೫೨೬ ನೆಯ ವರ್ಷದಲ್ಲಿ ಲಿಖಿತವಾದ ಒಂದು ತಾಮ್ರಶಾಸನದಿಂದ ಪುರಂದರದಾಸರು **'ವಸಿಷ್ಠಗೋತ್ರ'**ದವರೆಂದೂ ಯಜುಶ್ಶಾಖೆಯವರೆಂದೂ ಸಪ್ರಮಾಣವಾಗಿ ಗೊತ್ತಾಗುತ್ತದೆ.

ಪುರಂದರದಾಸರ ಮಕ್ಕಳ ಸಂಖ್ಯೆ-ಹೆಸರುಗಳೂ ಸಂಶೋಧಕರಿಗೆ ಒಂದು ಸಮಸ್ಯೆಯ ವಿಷಯಗಳೇ ಆಗಿವೆ. ಪುರಂದರದಾಸರ ಜೀವನವಿಚಾರವನ್ನೂ ಹಲವಾರು ಮಹಿಮಾವಿಶೇಷಗಳನ್ನೂ ಹೇಳಿದ ಗುರುಪುರಂದರ ದಾಸರ ಕೃತಿಗಳಲ್ಲಿ, ದಾಸರ ಮಕ್ಕಳ ಅಸ್ತಿತ್ವದ ವಿಚಾರವೆಲ್ಲಿಯೂ ಬಂದಂತಿಲ್ಲ. ಅವರು ವೈರಾಗ್ಯ ತಾಳಿ 'ತಮ್ಮ ಹೆಂಡತಿಯನ್ನು ಕರಕೊಂಡು ಪಂಢರಾಪುರಕ್ಕೆ ಬಂದು ವಾಸವಾದಾಗ' 'ಅಪ್ಪಣ್ಣ ಭಾಗವತ, ಪರಶುಭಾಗವತರೆಂತೆಂಬ ಒಪ್ಪುವ ಶಿಷ್ಯರು' ಸಂಗಡವಿದ್ದರೆಂದು ಹೇಳಿರುವರಲ್ಲದೆ, ಮಕ್ಕಳ ಮಾತನ್ನು ಎತ್ತಿಯೇ ಇಲ್ಲ. ಆದರೆ ವಿಜಯದಾಸರ ಹಾಡು-ಸುಳಾದಿಗಳಲ್ಲಿ ಅನೇಕ ಕಡೆಗೆ ಪುರಂದರದಾಸರಿಗೆ ನಾಲ್ಕು ಜನ ಮಕ್ಕಳಿದ್ದಂತೆ ಉಲ್ಲೇಖಗಳು ದೊರೆಯುತ್ತವೆ.

"ದಾಸರು ದಾಸರಸುತರು ನಾಲ್ವರ ಮುಂದೆ
ದೇಶಕಾಲವ ತಿಳಿದು ಲೇಶ ಸಂಶಯವಿಡದೆ... ಇತ್ಯಾದಿ

—ಸುಳಾದಿ

"ತರುಣಿ-ಮಕ್ಕಳು ಸಹಿತ ಸೇರಿದರು ಕಿಷ್ಕಿಂಧ
ವರಗಿರಿ ತುಂಗಭದ್ರಾತಟ ಹಂಪೆಯಲಿ!"

—ಸುಳಾದಿ

"ಭವದೂರರಾಗಿ ದಾಸರು ತಮ್ಮ ಸುತರೊಡ-
ನೆವಿರಚಿಸಿದರು ಪುರಂದರ, ವರದ, ಗುರು, ಅಭಿ-
ನವ ಗುರು ಮಧ್ವಪತಿಯೆಂಬ ಅಂಕಿತದಿಂದ..."

—ಸುಳಾದಿ

ಇವಲ್ಲದೆ ವಿಜಯದಾಸರದೆಂದು ಪ್ರಕಟವಾಗಿರುವ ಸಿರಿವಿಠಲಾಂಕಿತ 'ಶರಣು ಶ್ರೀವ್ಯಾಸಮುನಿ ಚರಣಾಬ್ಜಭೃಂಗ' ಎಂಬ ಹಾಡಿನಲ್ಲಿ ಹೇಳಲಾಗಿರುವ ಪುರಂದರದಾಸರ ನಾಲ್ಕು ಮಕ್ಕಳ ಹೆಸರುಗಳನ್ನು ಕುರಿತು, ಹಿಂದೆಯೆ ವಿವರಿಸಲಾಗಿದೆ.

ವಿಜಯದಾಸರ ಪರಂಪರೆ ಪುರಂದರದಾಸರ ಮಕ್ಕಳ ಹೆಸರುಗಳನ್ನು ಕ್ರಮವಾಗಿ ವರದ, ಗುರು, ಅಭಿನವ, ಮಧ್ವಪತಿ ಎಂದು ಹೇಳುವುದಾದರೂ ಕಮಲಾಪುರದ ತಾಮ್ರಶಾಸನ, ಪುರಂದರದಾಸರ ಮೂರು ಜನ ಮಕ್ಕಳ ಅಸ್ತಿತ್ವವನ್ನು ಕುರಿತು ಮಾತ್ರ ಹೇಳಿರುವುದು (೧೫೨೬) ಅದರಂತೆಯೆ ಅವರವರ ಹೆಸರುಗಳನ್ನು ಪರಂಪರೆಗಿಂತ ಬೇರೆ ಬೇರೆಯಾಗಿದ್ದಂತೆ ಹೇಳು ವುದು. ಮೊದಲನೆಯವನು ಲಕ್ಷ್ಮಣದಾಸ, ಇನ್ನೊಬ್ಬನು ಹೇಬಣ್ಣ (ಹೈಬಣ್ಣ ?) ದಾಸ; ಮೂರನೆಯವನು ಮಧ್ವಪದಾಸ. ವಿಜಯದಾಸರು ಹೇಳಿದ ಮಧ್ವಪತಿಯೆ ಈ ಮಧ್ವಪದಾಸನಾಗಿರಬಹುದಾದರೂ, ಮಿಕ್ಕ- ಎರಡು ಹೆಸರುಗಳು ಪರಂಪರೆಗಿಂತ ತೀರ ಭಿನ್ನವಾಗಿವೆ. ತಾಮ್ರಶಾಸನವು ವಾಸ್ತವಬೋಧಕ ಪ್ರಮಾಣವೆನಿಸುವುದರಿಂದ, ಅದರಲ್ಲಿ ಉಕ್ತವಾದ ಹೆಸರು ಗಳೇ ಪುರಂದರದಾಸರ ಪುತ್ರರ ನಿಜವಾದ ನಾಮಗಳೆಂದು ತಿಳಿದುಕೊಳ್ಳಲು ಅಡ್ಡಿಯೇನೂ ಇರದು.

ಈ ಶಾಸನದಲ್ಲಿಯ ಇನ್ನೂ ಒಂದು ಮಾತು ನಮಗೆ ಮಹತ್ತ್ವದುದಾಗಿ ತೋರುವುದು. ಅದೆಂದರೆ: ಪುರಂದರದಾಸರ ಮೂವರೂ ಮಕ್ಕಳನ್ನು ತಂದೆಯ ಹೆಸರಿನೊಂದಿಗೆ ಉಲ್ಲೇಖಿಸುವಾಗ 'ಶ್ರೀಪುರಂದರದಾಸಜಃ' ಎಂಬ ವಿಶೇಷಣ, ಪ್ರತಿಯೊಂದು ಹೆಸರಿನೊಡನೆಯೂ ಇರುವುದು. ಶಾಸನಗ ಳೆಂದರೆ ಅವು ಲೌಕಿಕ ವ್ಯವಹಾರ ಸಂಬಂಧದುವಾಗಿರುವುವು. ಆದುದರಿಂದ ಅವು ರಾಜಕೀಯ ಕಟ್ಟಳೆಗಳಿಗೆ ಒಳಪಡುವುವು. ಅವುಗಳಲ್ಲಿ ನಿಜವಾದ ಹೆಸರುಗಳನ್ನಲ್ಲದೆ, ಭಾವನಾತ್ಮಕ ಅಂಕಿತನಾಮಗಳನ್ನು ಉಲ್ಲೇಖಿಸಲು ಬರುವುದಿಲ್ಲ. ಆದುದರಿಂದ ಶಾಸನದಲ್ಲಿ ಮೂರು ಸಲ ಬೇರೆ ಬೇರೆಯಾಗಿ ಬಂದಿರುವ '**ಶ್ರೀಪುರಂದರದಾಸಜಃ**' ಎಂಬ ಮಾತನ್ನು ನೋಡಿದರೆ, ಶ್ರೀದಾಸರ ಪೂರ್ವಾಶ್ರಮದ ಮೂಲ ಹೆಸರೇ 'ಪುರಂದರ ನಾಯಕ' ಎಂದು ಇರಬಹುದೆಂದು ಎನಿಸುತ್ತದೆ. ಗೋತ್ರ-ವೇದಶಾಖೆಗಳೊಂದಿಗೆ ಸಾಂಪ್ರದಾ

ಯಿುಕನಾಮ ನಿರ್ದೇಶನವನ್ನು ಮಾಡಬೇಕಾಗಿ ಬಂದ ಈ ಶಾಸನದಲ್ಲಿ, ದಾಸರ ವಾಸ್ತವನಾಮವೇ ಉಲ್ಲಿಖಿತವಾಗಿರಬೇಕು.

ಇನ್ನೊಂದು ನೆನಪಿನಲ್ಲಿ ಇರಿಸಬೇಕಾದ ಮಾತೆಂದರೆ, ಶಾಸನದ ಕಾಲದಲ್ಲಿ (ಕ್ರಿ. ಶ. ೧೫೨೬) ದಾಸರ ಮೂವರು ಮಕ್ಕಳೂ ದಾಸದೀಕ್ಷೆಯನ್ನು ಪಡೆದಿದ್ದರೆಂಬುದನ್ನು ಈ ಶಾಸನ ಸಿದ್ಧಗೊಳಿಸುತ್ತದೆ. ಅಲ್ಲದೆ, ಮೂವರೂ ಗುರು ವ್ಯಾಸರಾಯರಿಂದ ಭೂದಾನವನ್ನು ಪಡೆಯುವಂತಹ ಸತ್ಪಾತ್ರರೂ, ಪ್ರೌಢವಯಸ್ಕರೂ ಆಗಿದ್ದರೆಂಬುದನ್ನು ತಿಳುಹುತ್ತದೆ.

ದಾಸರಿಗೆ ಮದುವೆಯಾದ ಒಬ್ಬ ಹೆಣ್ಣುಮಗಳಿದ್ದಳೆಂಬುದು, ಗುರು ಪುರಂದರದಾಸರ 'ತಿಳಿಯದು ಜನರಿಗೆ ಜ್ಞಾನಿಗಳ ಮಹಿಮೆ!' ಎಂಬ ಹಾಡಿನಿಂದ ಗೊತ್ತಾಗುತ್ತದೆ; ಆಕೆಯ ಹೆಸರು 'ಲಕ್ಷ್ಮಿ' ಎಂಬುದು ಗಂತಕಥೆಯಲ್ಲಿದೆ. ಈ ಮಗಳ ಸಂಬಂಧವನ್ನು ಹಚ್ಚಿಯೇ ಗುರುಪುರಂದರದಾಸರು, ದಾಸರ ಅದ್ಭುತಮಹಿಮೆಯೊಂದನ್ನು ಸೃಷ್ಟಿಸಿದ್ದಾರೆ :

'ದಾಸರ ಬೀಗನು ರೋಷದಿ ಮನೆಯೊಳು
ಸೊಸೆಯು ಕರೆದು ಪರಿಹಾಸ್ಯದಿಂದ ॥
ದೇಶ ತಿರುಗುವ ಅನ್ನಕಾಣದಾತನ ಮನೆಯು
ಊಟ (?) ವಿಲ್ಲದೆ ಬಹಳ ದಿನವಾಯಿತೆಂದ ॥ ೨ ॥

ತಂದೆ ಬಳಿಯಲಿ ಬಂದು ಮಗಳು ಪೇಳಿದಳಾಗ
ತಂದ ಮಾತುಗಳೆಲ್ಲ ಪೇಳಿದಳು ॥
ಹೊಂದಿ ಬಡತನದಲ್ಲಿಯಿದ್ದದ್ದು ಅವರಿಗೆ
ಅಂದವಾಗಿದೆಯೆಂದು ಪೇಳಿದರಾಗ' ॥ ೩ ॥

ಮತ್ತೆ ಮತ್ತೆ ಮರುಕದಿಂದ ಹೇಳಬೇಕೆನಿಸುತ್ತದೆ ನಮಗೆ! ಈ ಅಬದ್ಧ ಭಾಷಾಪದ್ಧತಿಯನ್ನೂ ಅನುಚಿತಪದಪ್ರಯೋಗಗಳನ್ನೂ ಬುದ್ಧಿವಂತರೆಂಬವರು ನೋಡಬೇಕು. ಇಂತಹ ಕೃತಿಯನ್ನು ರಚಿಸಿದವನು, ಪುರಂದರದಾಸರ ಪುತ್ರನಾಗಿರಬಹುದೆ? ಇಂತಹ ಜ್ಞಾನದರಿದ್ರನಿಗೆ ಶ್ರೀವ್ಯಾಸರಾಯರಂತಹ ಪ್ರಚಂಡ ಬುದ್ಧಿಮಾರ್ತಾಂಡರು, ಭೂದಾನವನ್ನು ಕೊಡಲು ಸಿದ್ಧರಾಗಬಹುದೆ? ಮುಂದಿನ ಪದ್ಯಗಳನ್ನು ನೋಡಿ :

' ಪುತ್ರಿಯೆ ಮುನಿಸು ತಿಳುಹಿ ಮತ್ತೆ ಮನದಲ್ಲಿ
ಸತ್ಯವಾಡಿದರಿದು ಪುಸಿಯಲ್ಲವು ॥
ವ್ಯರ್ಥ ನೀ ಚಿಂತೆ ಮಾಡುವುದೇಕೆ? ಒಳಿತೆಂದು
ನಿತ್ಯ ನಾ ಮಾಡುವ ಕೃತ್ಯ ಕಂಡಾಡಿದರು ॥ ೪ ।

ಧ್ಯಾನದಲಿ ಕುಳ್ಳಿರೆ ಅರಿಕೆಯಿಲ್ಲದ ಹಾಗೆ
ದಾನವಾಂತಕ ರಂಗ ಸಡಗರದಿ ॥
ಅನುವಾದ ಇಂದ್ರ–ಕುಬೇರರ ಕರೆಸಿ ಇಂ-
ದಿನ ದಾಸರ ಮನೆ ಪ್ರಸ್ಥ ಸಾಗಿಸಿರೆಂದ ' ॥ ೫ ॥

ಶ್ರೀಹರಿಯ ಆಜ್ಞೆಯಾದಮೇಲೆ ವಿಲಂಬವಿದೆಯೆ? ಇಂದ್ರ-ಕುಬೇರರಿಬ್ಬರೂ ಧರೆಗೆ ಇಳಿದುಬಂದು, ಪುರಂದರದಾಸರ ಮನೆಗೆ ಊಟಕ್ಕೆ ಬರಬೇಕೆಂದು ಊರ ಜನರಿಗೆಲ್ಲ ಔತಣ ಕೊಟ್ಟರು. ದಾಸರ ಮನೆಯಲ್ಲಿ ಭೂರಿ ಭೋಜನವೆಂಬುದನ್ನು ಕೇಳಿ, ಪುರಜನರೆಲ್ಲ ಸೋಜಿಗಪಟ್ಟರು. ಮನೆಗೆ ಹೋಗಿ ನೋಡಿದರೆ, ನೈವೇದ್ಯಸಿದ್ಧತೆಯ ಲಕ್ಷಣವೇ ಇಲ್ಲ. ಹೊತ್ತು ಮೀರಿ ಹೋಗಲು, ಊರ ಜನರು ಹಸಿವೆಯನ್ನು ತಾಳದೆ ದಾಸರ ಮನೆಯತ್ತ ಎಡೆಯಾಡತೊಡಗಿದರು. ಆಗ:

' ಹನ್ನೊಂದು ತಾಸಿಗೆ ಸಕಲ ಪಾಕಗಳಾಗೆ
ಚೆನ್ನಾಗಿ ತಾವೇ ಸರ್ವರನು ಕುಳ್ಳಿರಿಸಿ ॥
ಮುನ್ನೆ ಸಾಲು ಸಮೆಯ ದೀವಿಗೆಗಳನಿಟ್ಟು
ಚೆನ್ನ ಸಕ್ಕರಿ-ತುಪ್ಪದಿಂ ಕೈಯ ತೊಳೆದರು ॥ ೮ ॥

ಬೀಗನು ಸಹಿತವನ ಮನೆಯ ಮಂದಿಗೆಲ್ಲ
ಆಗಲೆ ದಿವ್ಯವಸ್ತ್ರಗಳ ಕೊಟ್ಟು ॥
ಹೋಗಿಬನ್ನಿರಿ ಬಹಳ ತಡವಾಯಿತು ಎಂದು
ಬೇಗನೆ ಹರಿಯ ಸನ್ನಿಧಿಯಲ್ಲಿ ನಿಲ್ವರು ' ॥ ೯ ॥

ಆಗ ನಿಂದೆಯಾಡಿದ ಬೀಗ, ದಾಸರ ಈ ಮಹಿಮೆಯನ್ನು ನೋಡಿ ಭಯ-ಭಕ್ತಿಗಳಿಂದ, ತನ್ನ ಅಪರಾಧವನೊಪ್ಪಿಕೊಂಡು, ಕ್ಷಮಿಸಬೇಕೆಂದು ದಾಸರ ಅಡಿಗಳ ಮೇಲೆ ಬಿದ್ದು ಹೊರಳಾಡಲುತೊಡಗಿದಾಗ :

' ನುಡಿದರು ದಾಸರು ಏನೂ ಅರಿಯೆವು ಎಂದು
ಬಡವೆನಗೆ ಒಬ್ಬರ ಗೊಡವೆಯಾಕೆ ॥
ಪೊಡವಿಗೊಡೆಯ ಗುರುಪುರಂದರವಿಠಲನು
ಮಾಡುವ ಚರಿತೆ ತಾನೊಬ್ಬನೆ ಬಲ್ಲ ॥ ೧೧ ॥

ದಾಸರಿಗೆ ಮಗಳಿದ್ದಳೆಂಬುದನ್ನು ಹೇಳುವುದಕ್ಕಾಗಿ ಹೊರಟು—ಸಂದರ್ಭವಶರಾಗಿ ಗುರುಪುರಂದರದಾಸರ ಈ ಹಾಡನ್ನು ಇಲ್ಲಿ ಹೇಳಬೇಕಾಗಿ ಬಂದಿತು. ಪ್ರಸಂಗ ಅಧಿಕವೆನಿಸಿದರೆ, ವಾಚಕರು ದಯೆಯಿಟ್ಟು ಕ್ಷಮಿಸಬೇಕು. ಬೇರೆ ಯಾವ ದಾಸರ ಕೃತಿಗಳಲ್ಲಿಯೂ ಪುರಂದರದಾಸರ ಮಗಳ ಬಗೆಗೆ ಉಲ್ಲೇಖಗಳು ನಮಗೆ ದೊರೆತಿಲ್ಲ. ಹರಿಕಥೆಯು ದಾಸರ ಪ್ರಪಂಚದಲ್ಲಿ ಮಾತ್ರ, ಪುರಂದರದಾಸರ ಮಗಳು 'ಲಕ್ಷ್ಮಿ'ಯು ಹೆಸರು ಸುಳಿದಾಡುತ್ತದೆ.

## IV ದಾಸರ ಗುರು-ಶಿಷ್ಯ ಸಂಬಂಧ

ಪುರಂದರದಾಸರು ಮತ್ತು ಅವರ ಕೌಟುಂಬಿಕ ಜನರ ವಾಸ್ತವಪರಿಚಯವನ್ನು ಕುರಿತು ಇದುವರೆಗೆ ಊಹೆ-ಚರ್ಚೆಗಳನ್ನು ನಡೆಯಿಸಿದುದಾಯಿತು. ಈಗ ವ್ಯಾಸರಾಯರ ಮತ್ತು ಪುರಂದರದಾಸರ ಗುರು-ಶಿಷ್ಯಸಂಬಂಧವನ್ನು ಕುರಿತು ಸ್ವಲ್ಪ ವಿಚಾರಮಾಡೋಣ! ಶ್ರೀವ್ಯಾಸರಾಯರೇ ತಮ್ಮ ದೀಕ್ಷಾಗುರುಗಳೆಂಬುದನ್ನು ಪುರಂದರದಾಸರು ತಮ್ಮದೊಂದು ಸುಳಾದಿಯಲ್ಲಿ ಹೇಳಿರುವ ವಿಷಯ ಹಿಂದೆಯೆ ಬಂದಿದೆ. ಇವರ ಸಂದರ್ಶನವಾಗುವವರೆಗೆ ದಾಸರಿಗೆ ಬೇರೆ ಯಾವ ಗುರುಗಳ ಸಂಬಂಧವೂ ಬಂದಂತಿಲ್ಲ. ಹಾಗಾದರೆ ದಾಸರಿಗೆ ವ್ಯಾಸರಾಯರ ಸಂದರ್ಶನಸಮಯ ಎಂದು ಒದಗಿ ಬಂದಿರಬಹುದು?

ಸುಮಾರು ೧೪೮೦ನೆಯ ಕ್ರಿ. ಶ. ವರ್ಷದಲ್ಲಿ ಹುಟ್ಟಿರಬಹುದಾದ ಪುರಂದರದಾಸರು, ಲೌಕಿಕ ಸಂಪತ್ತಿನಬಗೆಗೆ ವಿರತಿಯನ್ನು ತಾಳಿ, ಮನೆ ಬಿಟ್ಟು ಹೊರಟು ಪಂಪಾಕ್ಷೇತ್ರಕ್ಕೆಬಂದಾಗ, ದೊಡ್ಡದೊಡ್ಡವರಾದ ನಾಲ್ಕೈದು ಜನ ಮಕ್ಕಳ ತಂದೆ. ಹಿರಿಯ ಮಗ ಮತ್ತು ಮಗಳ ಮದುವೆಯಾಗಿದ್ದಿತೆಂಬ ಆಖ್ಯಾಯಿಕೆಗಳೂ ಪರಂಪರಾಗತವಾಗಿ ಬಂದಿವೆ. ಎಂದ ಮೇಲೆ, ಪುರಂದರದಾಸರಿಗೆ ದೀಕ್ಷೆಯ ಕಾಲದಲ್ಲಿ ಸಾಕಷ್ಟು ವಯಸ್ಸು ಆಗಿರಬಹುದು. ಹಾಗಾದರೆ ಆಗ ದಾಸರಿಗೆ ಎಷ್ಟು ವರ್ಷಗಳ ವಯಸ್ಸು ಆಗಿರಬಹುದು?

ಶ್ರೀವ್ಯಾಸರಾಯರ ಕಾಲವು ಕ್ರಿ. ಶ. ೧೪೪೭ ರಿಂದ ೧೫೩೯ ರ ವರೆಗಿನ ೯೨ ವರ್ಷಗಳ ಅವಧಿ—ಎಂಬುದನ್ನು ಚರಿತ್ರಸಂಶೋಧಕರು ಸಿದ್ಧಮಾಡಿ ತೋರಿಸಿದ್ದಾರೆ. ಆದುದರಿಂದ ದಾಸರಿಗೂ ವ್ಯಾಸರಾಯರಿಗೂ ವಯಸ್ಸಿನ

ಅಂತರ ೩೩ ವರ್ಷಗಳಷ್ಟಾಯಿತು. ವ್ಯಾಸರಾಯರು ಹಂಪೆಗೆ ಬಂದು ನೆಲಸಿದ ಕಾಲವೆಂದರೆ, ವಿಜಯನಗರದಲ್ಲಿ ಕೃಷ್ಣದೇವರಾಯನ ಆಳಿಕೆಯು ಪ್ರಾರಂಭವಾದ ಕೆಲವು ಕಾಲದನಂತರ. ಕೃಷ್ಣದೇವರಾಯನ ಆಡಳಿತ ಕ್ರಿ.ಶ. ೧೫೦೯ ರಲ್ಲಿ ಪ್ರಾರಂಭವಾಗಿ ೧೫೩೦ ರಲ್ಲಿ ಸಮಾಪ್ತಿಯಾಯಿತು. ಈ ಅವಧಿಯಲ್ಲಿಯೆ ಕ್ರಿ. ಶ. ೧೫೨೧ನೆಯ ವರ್ಷ, ಈ ರಾಜನಿಗೆ ಕುಹುಯೋಗ ಬಂದಡಸಿದಾಗ, ವಿಜಯನಗರದ ಸಿಂಹಾಸನದ ಮೇಲೆ ಕುಳಿತು, ವ್ಯಾಸ-ರಾಯರೇ ಸಾಮ್ರಾಜ್ಯಸೂತ್ರಗಳನ್ನು ಕೈಕೊಂಡಿದ್ದರೆಂದು ಚರಿತ್ರಕಾರರು ಹೇಳುತ್ತಾರೆ. ಆದುದರಿಂದ ಇದಕ್ಕಿಂತ ಮೊದಲೇ ವ್ಯಾಸರಾಯರು ಹಂಪೆಗೆ ಬಂದು, ರಾಜಗುರುಮರ್ಯಾದೆಯಿಂದ ಹಂಪೆಯಲ್ಲಿ ನೆಲಸಿದ್ದರೆಂದು ತೋರುವುದು. 'ಕಂದನಿಗೆ ಕಾಲಿಲ್ಲವಮ್ಮ' ಎಂಬ ವ್ಯಾಸರಾಯರ ಕೀರ್ತನೆ-ಯೊಂದರಲ್ಲಿ, ಕೃಷ್ಣದೇವರಾಯ, ಉದಯಗಿರಿಯ ವಿಜಯಯಾತ್ರೆಯಲ್ಲಿ ತಂದ ಶ್ರೀಕೃಷ್ಣಮೂರ್ತಿಯ ನಾಮನಿರ್ದೇಶನವಿದೆ. (೧೫೧೩-೧೪) ಆಗಲೆ ವ್ಯಾಸರಾಯರು ವಿಜಯನಗರಕ್ಕೆ ಬಂದು ನೆಲಸಿದ್ದರೆಂದು ಹೇಳಲು ಬರುವಂತಿದೆ. ಕುಹುಯೋಗಕಾಲದಲ್ಲಿ ಸಿಂಹಾಸನಾಧಿಷ್ಠಿತರಾದಾಗ ವ್ಯಾಸರಾಯರ ವಯಸ್ಸು ೭೩-೭೪ ವರ್ಷಗಳಿದ್ದಿರಬಹುದು.

ಕೃಷ್ಣದೇವರಾಯನಿಂದ ತಮಗೆ ದಾನವಾಗಿ ದೊರೆತ ಭೂಭಾಗವನ್ನು, ವ್ಯಾಸರಾಯರು ಬೇರೆ ಬೇರೆ ವೃತ್ತಿಗಳನ್ನಾಗಿ ವಿಭಾಗಿಸಿ, ವಿವಿಧ ಗೋತ್ರ-ಸೂತ್ರ - ಶಾಖೆಗೊಳಪಟ್ಟ ೩೧ಲ ಜನರಿಗೆ ದತ್ತಿಯನ್ನಾಗಿ ಕೊಟ್ಟ ವಿವರ, ಕಮಲಾಪುರದ ತಾಮ್ರಶಾಸನದಲ್ಲಿ ಇದೆ. ಈ ವೃತ್ತಿಗಳನ್ನು ಪಡೆದ ಬ್ರಾಹ್ಮಣರಲ್ಲಿ ಪುರಂದರದಾಸರ ಮೂವರು ಮಕ್ಕಳ ಹೆಸರುಗಳೂ ಇವೆ. *

---

ಧೀಮಾನ್ ಲಕ್ಷ್ಮಣದಾಸಾಖ್ಯಃ ಶ್ರೀಪುರಂದರದಾಸಜಃ।
ವಸಿಷ್ಠಗೋತ್ರಜೋ ವೃತ್ತಿದ್ವಯಮತ್ರೈಹಿ ಯಾಜುಷಃ। ॥೧೭೪॥
ವಸಿಷ್ಠಾನ್ವಯ ಸಂಭೂತಃ ಶ್ರೀಪುರಂದರದಾಸಜಃ।
ದ್ವಿಜೋ ಹೇಬಣದಾಸಾಖ್ಯೋ ಯಾಜುಷೋತ್ರ ದ್ವಿವೃತ್ತಿಕಃ ॥೧೭೮॥
ವಸಿಷ್ಠಗೋತ್ರ ಸಂಭೂತಃ ಶ್ರೀಪುರಂದರದಾಸರದಾಸಜಃ।
ಧೀಮಾನ್ ಮಧ್ವಪದಾಸಾಖ್ಯೋ ಯಾಜುಷೋತ್ರ ದ್ವಿವೃತ್ತಿಕಃ ॥೨೮೨॥

(ಎಪಿಗ್ರಾ. ಇಂಡಿಕಾ ೩೧. ಸಂಚಿಕೆ ೩)

ಕ್ರಿ. ಶ. ೧೫೨೬ ನೆಯ ಫೆಬ್ರುವರಿ ದಿನಾಂಕ ೨೪ ರಂದು ಈ ಶಾಸನ ನಿರ್ಮಾಣ ವಾಗಿದೆ. ಪುರಂದರದಾಸರ ಪ್ರಬುದ್ಧ ಮಕ್ಕಳಿಗೆ ಶ್ರೀ ವ್ಯಾಸರಾಯರು ೧೫೨೬ ರಲ್ಲಿ ಆದರದಿಂದ ವೃತ್ತಿದಾನ ಮಾಡಿರುವರೆಂದ ಮೇಲೆ, ಪುರಂದರದಾಸರು ಹರಿದಾಸದೀಕ್ಷೆ ಪಡೆದು, ಅಷ್ಟರಲ್ಲಿಯೆ ತಮ್ಮ ವೈರಾಗ್ಯ ಜೀವನದ ಮೂಲಕ ಬಹುಜನ ಮನ್ನಣೆಗೆ ಪಾತ್ರರಾಗಿರಬೇಕು.

ದಾಸರು ರಚಿಸಿದ ಶ್ರೀವ್ಯಾಸರಾಯ ಸುಳಾದಿಯಲ್ಲಿ, ಕೃಷ್ಣದೇವ ರಾಯನ ಕುಹುಯೋಗ ನಿವಾರಣೆಯ ಮಾತಿನ ಉಲ್ಲೇಖವೂ ಇದೆ:

'ಶೇಷಾವೇಶ ಪ್ರಹ್ಲಾದನವತಾರವೆನಿಸಿದೆ
ವ್ಯಾಸರಾಯನೆಂಬ ಪೆಸರು ನಿನಗೆಂದಂತೆ
ದೇಶಾಧಿಪಗೆ ಬಂದ ಕುಹುಯೋಗವನು ನೂಕಿ
ನೀ ಸಿಂಹಾಸನವೇರಿ ಮೆರೆದ ಜಗವರಿಯೆ
ವ್ಯಾಸಾಬ್ಧಿಯನು ಬಲಿಸಿ ಕಾಶೀ ದೇಶದೊಳೆಲ್ಲ
ಭಾಸುರ ಕೀರ್ತಿಯನು ಪಡೆದೆ ನೀ ಗುರುರಾಯ
ವಾಸುದೇವ ಪುರಂದರ ವಿಟ್ಠಲನ ದಾಸರೊಳು
ಲೇಶ ನಿನ್ನಂತೆ ವೆಗ್ಗಳರ ಕಾಣೆನು ನಾನು!'

ಈ ಕುಹುಯೋಗ ೧೫೨೧ ರಲ್ಲಿಯೆಂಬುದನ್ನು ಈ ಮೊದಲೇ ಹೇಳ ಲಾಗಿದೆ. ಈ ಸುಳಾದಿಯು ೧೫೨೧ ರ ತರುವಾಯವೇ ರಚಿತವಾಗಿದೆಯೆಂದು ಭಾವಿಸಬಹುದು. ಕುಹುಯೋಗ ನಿವಾರಣಾ ಪ್ರಸಂಗವನ್ನು ದಾಸರು ಕಣ್ಣಾರೆ ಕಂಡಿರುವರೆಂದಮೇಲೆ, ಪುರಂದರದಾಸರಿಗೆ ಹರಿದಾಸದೀಕ್ಷೆ ಅದ ಕ್ಕಿಂತ ಮೊದಲೇ ದೊರೆತಿರಬಹುದಾಗಿದೆ. ೧೫೨೦ ನೆಯ ವರ್ಷ, ಅಥವಾ ಅದಕ್ಕಿಂತ ಮೊದಲು ಒಂದೆರಡು ವರ್ಷಗಳಲ್ಲಿಯೆ ಪುರಂದರದಾಸರಿಗೆ ವ್ಯಾಸರಾಯರ ಗುರುದೀಕ್ಷಾ ಸಂಬಂಧ ಬಂದಿರಬಹುದು. ಆಗ ಪುರಂದರ ದಾಸರಿಗೆ ೩೯–೪೦ ವರ್ಷಗಳಾಗಿರಬಹುದು. ಆಗ ದಾಸರ ಹಿರಿಯ ಮಗನ ವಯಸ್ಸು ೨೨-೨೩ ವರ್ಷಗಳಿದ್ದರೆ ಅದು ಅಸ್ವಾಭಾವಿಕವೇನೂ ಅಲ್ಲ. ಅಂದಿನ ಲೋಕಪದ್ಧತಿಯಂತೆ, ಆತನ ಮದುವೆಯೂ ಆಗಿರಬಹುದು. ಮಗಳೊಬ್ಬಳು ಇದ್ದುದು ನಿಜವಾದರೆ, ಆಕೆಯ ಲಗ್ನವೂ ಆಗಿದ್ದಿತೆಂದರೆ, ತಪ್ಪೇನೂ ಎನಿಸದು. ಕೊನೆಯ ಮಗನಾದ ಮಧ್ವಪತಿಯು ಹನ್ನೆರಡು

ವರ್ಷದವನಾದರೂ ಇರಬಹುದು. ಏಕೆಂದರೆ ಮುಂದೆ ೬ – ೭ ವರ್ಷಗಳಿಗೇ ಅವನು 'ಧೀಮಾನ್ ಮಧ್ವಪ' ಎಂಬ ವಿಶೇಷಣದೊಂದಿಗೆ, ಶ್ರೀವ್ಯಾಸರಾಯರಿಂದ ವೃತ್ತಿದಾನವನ್ನು ಪಡೆಯುತ್ತಾನೆ. ಪುರಂದರದಾಸರಿಗೆ ಇನ್ನೊಬ್ಬ ನಾಲ್ಕನೆಯ ಮಗನು ಇದ್ದುದು ನಿಜವಿದ್ದರೆ, ಅವನು ಅಕಾಲಮರಣಕ್ಕೆ ತುತ್ತಾಗಿರಬೇಕು. ಅವನ ಅಗಲಿಕೆಯ ಸಂತಾಪವೇ ದಾಸರ ಹೃದಯದಿಂದ 'ಗಿಳಿಯು ಪಂಜರದೊಳಿಲ್ಲ' ಎಂಬ ಹಾಡಾಗಿ ಹೊರಹೊಮ್ಮಿರಬೇಕು.

## V ಪುರಂದರದಾಸರ ಪೂರ್ವಜೀವನ

೩೯–೪೦ ನೆಯ ವಯಸ್ಸಿನಲ್ಲಿ ಹರಿದಾಸದೀಕ್ಷೆಯನ್ನು ಸ್ವೀಕರಿಸಿದ ಪುರಂದರದಾಸರು, ಅದಕ್ಕೆ ಪೂರ್ವದಲ್ಲಿ, ವಿದ್ಯೆ–ಸಂಸ್ಕೃತಿಗಳ ದೃಷ್ಟಿಯಿಂದ ಹೇಗಿರಬಹುದು? ಸಾಂಪ್ರದಾಯಿಕ ಕಥೆಗಳಂತೂ ಅವರು ಧನಲೋಭಿಗಳೂ, ಹಣವೊಂದನ್ನಲ್ಲದೆ ಇನ್ನಾವುದನ್ನೂ ಲಕ್ಷ್ಯಿಸದ ಸಂಸ್ಕೃತಿವಿಹೀನರೂ ಎಂಬುದನ್ನು ಗಟ್ಟಿಯಾಗಿ ಸಾರುತ್ತವೆ. ಆದರೆ ದಾಸರು ಮಾಡಿದ ಭಕ್ತಿಸಾಧನೆ, ತತ್ತ್ವಜ್ಞಾನಸಿದ್ಧಿ, ಮಾನವನೀತಿಯ ಪ್ರಸಾರ, ಸಂಗೀತಕಲಾ ಸಂಶೋಧನೆ—ಪ್ರಚಾರ, ಜೀವನಾನುಭವಬೋಧನೆ—ಇವುಗಳನ್ನೆಲ್ಲ ನೋಡಿದರೆ, ಮೊದಲಿಂದಲೂ ಅವರ ಸ್ವಭಾವ, ಜ್ಞಾನನಿಷ್ಠ-ಕಲಾನಿಷ್ಠವಾಗಿರಬೇಕೆಂದು ತೋರುವುದು. ಲೋಕದಲ್ಲಿ ಜ್ಞಾನೋಪಾಸಕರೆನಿಸಿಕೊಳ್ಳುವ ಅನೇಕ ಮಹಾಪುರುಷರು, ಒಂದು ಬಗೆಯ ಮಾನಸಿಕ ಅಶಕ್ತತೆಯ ವ್ಯಾಧಿಗಳಿಂದ ಬಳಲುತ್ತಿರುವುದು, ಲೋಕ ಕಂಡ ಅನುಭವದ ಮಾತಾಗಿದೆ. ಅದರಂತೆಯೆ ಧನಲೋಭ ಪುರಂದರದಾಸರ ಮನಸ್ಸನ್ನು ಕಾಡಿರಬಹುದು; ಎಂದ ಮಾತ್ರಕ್ಕೆ, ಅವರು ಜ್ಞಾನ–ಕಲೋಪಾಸಕರಾಗಿದ್ದಿಲ್ಲವೆಂದು ಹೇಳುವುದು ಸರಿಯೆನಿಸದು. ತತ್ತ್ವಜ್ಞಾನ–ಸಂಗೀತಕಲೆಗಳು ನಾಲ್ವತ್ತು ವರ್ಷ ವಯಸ್ಸಾದ ಮೇಲೆ, ಒಮ್ಮೆಲೇ ಮಾನವನ ಕೈವಶವಾಗುವಂತಹವಲ್ಲ. ಜನ್ಮತಃ ಅವುಗಳ ಕಡೆಗೆ ಒಲವುಬೇಕು; ಎಳೆಯತನದಿಂದಲೂ ಅವುಗಳ ಬಗೆಗೆ ಉತ್ಕಟವಾದ ಆಸಕ್ತಿ–ಅಭ್ಯಾಸಗಳು ಬೇಕು. ಪುರಂದರದಾಸರು ಮೊದಲಿನಿಂದಲೂ ಇವುಗಳನ್ನು ಅಭ್ಯಾಸದಿಂದ ಬೆಳೆಸಿಕೊಂಡವರಾಗಿರಬೇಕು. ಕವಿತ್ವ-ರಚನೆಯ ಪರಿಚಯವೂ ಅವರಿಗೆ ಚೆನ್ನಾಗಿ ಇರಬೇಕು. ದೀಕ್ಷೆಗಿಂತ

ಮೊದಲು ಅಂಕಿತವಿಲ್ಲದೆ ಅವರು ಕವನಗಳನ್ನು ರಚಿಸುತ್ತಿರಬೇಕು. ವ್ಯಾಸರಾಯರಿಂದ 'ಅಂಕಿತವಿಲ್ಲದ ಕವನ ನಿಷಿದ್ಧವೆಂದು' ತಿಳಿದ ಮೇಲೆ, ಅವರು ಸಾಂಕಿತ ಕವನಗಳನ್ನು ರಚಿಸತೊಡಗಿರಬೇಕು. ಅದರಂತೆಯೇ ಅವರು ಶಾಸ್ತ್ರಶುದ್ಧವಾಗಿ ಸಂಗೀತದ ಅಭ್ಯಾಸ ಮಾಡಿ, ಅಂದಿನ ಪದ್ಧತಿಯಂತೆ ಶಾಸ್ತ್ರೀಯ ವರ್ಣ-ಕೃತಿಗಳನ್ನು ಹಾಡುತ್ತಿರಬೇಕು. ದೀಕ್ಷಾಬದ್ಧರಾದ ಮೇಲೆ ಅವರು ಸಂಗೀತ ಭಕ್ತಿರಸ ಪೋಷಣೆಗಾಗಿಯೇ ಹುಟ್ಟಿದೆಯೆಂದು ಹೇಳಲು ಪ್ರಾರಂಭಿಸಿರಬೇಕು:

**'ಕೇಳನೋ ಹರಿ ತಾಳನೋ–**
**ತಾಳಮೇಳಗಳಿದ್ದು ಭಾವವಿಲ್ಲದ ಗಾನ!'**

ಎಂದಿರುವ ದಾಸರ ಕೀರ್ತನೆಯನ್ನು ಪರಿಶೀಲಿಸಿದರೆ, ಪೂರ್ವಜೀವನದ ತಮ್ಮ ಶಾಸ್ತ್ರೀಯ ಸಂಗೀತದ ಕಲ್ಪನೆಯನ್ನೇ ಬೀಳುಗಳೆದಿದ್ದಾರೆಂದು ಭಾವಿಸುವಂತಿದೆ. ನಾದ-ಲಯಗಳ ಹಾರಾಟ-ಕುಣಿದಾಟಗಳು, ಭಕ್ತನ ಭಕ್ತಿ ಸಾಧನೆಗೂ, ಹೃದಯಸಂಶೋಧನಕ್ಕೂ ಸಹಕಾರಿಯಾಗಲು ಸಾಧ್ಯವಿದೆಯೆ?

## VI ಪುರಂದರದಾಸರ ಮತ–ಪಂಥವಿಚಾರ

ಪುರಂದರದಾಸರು ಹುಟ್ಟಿದುದು ಭಾಗವತ ಪಂಥಾನುಯಾಯಿಯಾದ ಮನೆತನದಲ್ಲಿ. ಭಾಗವತಪಂಥವು ಮಾನವನ ಭವವಿಮುಕ್ತಿಗೆ ಭಗವದ್ಭಕ್ತಿಯೇ ಏಕೈಕ ಸಾಧನವೆಂದು ಒಪ್ಪಿದರೂ, ಅವರ ಮುಕ್ತಿಯ ಕಲ್ಪನೆ ಒಂದು ಬಗೆಯ ಅದ್ವೈತ ಭಾವವನ್ನೇ ಪುರಸ್ಕರಿಸುವುದು. ಶ್ರೀಹರಿಯನ್ನು ಉಪಾಸ್ಯದೈವತವನ್ನಾಗಿ ಒಪ್ಪಿಕೊಂಡರೂ, ತ್ರಿಮೂರ್ತಿಗಳಲ್ಲಿ ಅಭೇದವನ್ನು ನಿರೂಪಿಸುವುದು. ಜಗತ್ಸತ್ಯತ್ವವನ್ನು ಸ್ಪಷ್ಟವಾಗಿ ಈ ಪಂಥವು ಒಪ್ಪಿಕೊಳ್ಳದು. ದೇವತಾತಾರತಮ್ಯವಾದವನ್ನೂ ಜೀವತಾರತಮ್ಯವಾದವನ್ನೂ ಇದು ವಿಚಾರ ಮಾಡಿದಂತೆಯೇ ಇಲ್ಲ. ಶ್ರೀವ್ಯಾಸರಾಯರಲ್ಲಿ ಹರಿದಾಸದೀಕ್ಷೆಯನ್ನು ವಹಿಸಿದ ಬಳಿಕ ಪುರಂದರದಾಸರು, ಮಾಧ್ವವೈಷ್ಣತತ್ತ್ವವನ್ನು ಸಂಪೂರ್ಣ ಶ್ರದ್ಧೆಯಿಂದ ಪುರಸ್ಕರಿಸಿರುವರೆಂಬುದು, ಅವರ ಸಾಹಿತ್ಯದಲ್ಲಿ ನೋಡಿದಲ್ಲೆಲ್ಲ ಗೋಚರವಾಗುವುದು. ಮೊದಲಿನಿಂದಲೂ ತತ್ತ್ವಜ್ಞಾನದ ಅಭ್ಯಾಸಿಗಳೂ ಭಾಗವತರೂ ಆದ ಪುರಂದರದಾಸರಿಗೆ, ದ್ವೈತಪಂಥದ ಹರಿ ಸರ್ವೋತ್ತ-

ಮತ್ವವಾದವೂ, ಪಂಚಭೇದ-ತಾರತಮ್ಯಗಳೂ— ತುಂಬ ತರ್ಕಶುದ್ಧವಾಗಿ ತೋರಿದುವೇನೋ! ಎಂತಲೆ ಅವರು ತಮ್ಮದೊಂದು ಸುಳಾದಿಯಲ್ಲಿ ದ್ವೈತಭಕ್ತಿಪಂಥವನ್ನು ಮನಮೆಚ್ಚಿ ಕೊಂಡಾಡಿದ್ದಾರೆ :

'ಒಬ್ಬ ಆಚಾರ್ಯನು ದೈವವೇ ಇಲ್ಲವೆಂಬ।
ಒಬ್ಬ ಆಚಾರ್ಯನು ದೈವಕೆ ಎಂಟು ಗುಣವೆಂಬ।
ಒಬ್ಬ ಆಚಾರ್ಯನು ನಿರ್ಗುಣ ನಿರಾಕಾರ ನಿರೂಪನೆಂದು
ತಾನೇ ದೈವವೆಂಬ।

ಇವರೊಬ್ಬರೂ ವೇದಾರ್ಥವನರಿತೂ ಅರಿಯರು।
ಇವರೊಬ್ಬರೂ ಶಾಸ್ತ್ರಾರ್ಥವನರಿತೂ ಅರಿಯರು।
ಒಬ್ಬ ಮಧ್ವಾಚಾರ್ಯರೇ ಪುರಂದರವಿಠಲನೊಬ್ಬನೆ
ಎಂದು ತೋರಿಸಿಕೊಟ್ಟರಾಗಿ ॥ ೧ ॥

ಭಾಗವತ ಹೃದಯದ ಪುರಂದರದಾಸರಿಗೆ, ಶ್ರೀಮಧ್ವಾಚಾರ್ಯರು ನಿರ್ವಚನ ಮಾಡಿದ ಹರಿಸರ್ವೋತ್ತಮತ್ವವಾದವು ತುಂಬ ಮನವರಿಕೆಯಾ-ದಂತೆ ತೋರುತ್ತದೆ; ಎಂತಲೇ ಅವರು ಹೀಗೆ ಉಗ್ಗಡಿಸಿದ್ದಾರೆ:

'ಹರಿ ಪರದೇವತೆಯೆಂಬ ಜ್ಞಾನವೇ ಜ್ಞಾನ।
ಹರಿಯಡಿಗಳನೈದುವ ಮುಕುತಿಯೆ ಮುಕುತಿ।
ಹರಿವಿರಹಿತಜ್ಞಾನ ಮಿಥ್ಯಾಜ್ಞಾನ।
ಹರಿವಿರಹಿತ ಮುಕುತಿ ಮಾತಿನ ಯುಕುತಿ।
ಹರಿಪರ, ಸಿರಿಮಧ್ವಾಚಾರ್ಯರೆ ಗುರುಗಳು।
ತ್ರೈಲೋಕ್ಯಕೆ ಪುರಂದರವಿಠಲನೇ ದೈವವು ॥ ೨ ॥

ತಮ್ಮ ಮನಸ್ಸಾಕ್ಷಿಗೆ ಸರಿಯೆಂದು ಕಂಡ ತತ್ತ್ವವನ್ನು ದಾಸರು ಮನವಾರೆ ಹೊಗಳಿರುವರಲ್ಲದೆ, ಆ ತತ್ತ್ವಬೀಜವನ್ನು ಬಿತ್ತಿದ ಪರಮಗುರು ಮಧ್ವಾಚಾರ್ಯರ ಹಿರಿಮೆಯನ್ನೂ ಕರವೆತ್ತಿ ಸಾರಿದ್ದಾರೆ.

'ಸುರತರುವಿರುತಿರೆ ಎಲವದ ಫಲ ಗಿಳಿ ಬಯಸಿಪ್ಪಂತೆ
ಹಿರಿಯರಾದರು ನೋಡಾ ಹರಿ ಪರದೈವವೆಂದರಿಯದೆ।
ಗುರುಗಳಾದರು ನೋಡಾ ಹರಿ ಪರದೈವವೆಂದರಿಯದೆ।

ಸಿರಿ-ವಿರಂಚಿ-ಭವಾದಿಗಳೆಲ್ಲ ಹರಿಯ ಡಿಂಗರಿಗರೆಂದರಿಯದೆ
ಹಿರಿಯರಾದರು ನೋಡಾ, ಗುರುಗಳಾದರು ನೋಡಾ।
ಸಿರಿಪುರಂದರ ವಿಠಲನ ತೋರಿಸಿದ
ಸಿರಿಮಧ್ವಾಚಾರ್ಯರಿರುತಿರೆ, ಗುರುಗಳಾದರು ನೋಡಾ।

ದ್ವೈತಭಕ್ತಿಪಂಥವು ಮನಃಖಚಿತವಾಗಲು ದಾಸರು, ಆಗ ಹೆಚ್ಚಾಗಿ ರೂಢವಾಗಿರುವ ಕರ್ಮಪ್ರಧಾನವಾದ ಸ್ಮಾರ್ತಪಂಥ ಮತ್ತು ವೇದವನ್ನು ನಿರ್ಲಕ್ಷ್ಯಿಸಿ ನಡೆದ ಭಾಗವತಪಂಥ ಇವೆರಡರಲ್ಲಿಯ ಕೊರತೆಗಳನ್ನು ಕುರಿತು, ವಿಮರ್ಶಕರಾಗಿ ಹೀಗೆ ಮಾತನಾಡಿದ್ದಾರೆ.

'ವೈದಿಕಮತದಲ್ಲಿ ನಡೆದೆವೆಂದು ತಾವು
ವೈಷ್ಣವವಂ ಬಿಟ್ಟುಕೊಟ್ಟರು ಕೆಲವರು।
ವೈಷ್ಣವ ಮತದಲ್ಲಿ ನಡೆದೆವೆಂದು ತಾವು
ವೈದಿಕವಂ ಬಿಟ್ಟುಕೊಟ್ಟರು ಕೆಲವರು।
ವೈದಿಕ ವೈಷ್ಣವ ಒಂದೇ ಎಂದು
ಮಧ್ವಮುನಿ ಪ್ರತಿಪಾದಿಸಿದ ಪುರಂದರವಿಠಲ ಮೆಚ್ಚ'।

ಮಾಧ್ವಮತದ ವೈಶಿಷ್ಟ್ಯವು ಎಂತಹದೆಂಬುದನ್ನು ಪುರಂದರದಾಸರು ಇಲ್ಲಿ ಚೆನ್ನಾಗಿ ವಿಶ್ಲೇಷಣೆಮಾಡಿ ಹೇಳಿದ್ದಾರೆ. ಸಾಮಾನ್ಯವಾಗಿ ಭಾರತದಲ್ಲಿಯ ಎಲ್ಲ ತತ್ತ್ವವಾದಿಗಳೂ, ಸಾಧು-ಸತ್ಪುರುಷರೂ, ಪುರಸ್ಕೃತ ತತ್ತ್ವ-ಪಂಥಗಳನ್ನು ಪ್ರಶಂಸಿಸುವಾಗ, ಅನ್ಯಮತಗಳಲ್ಲಿ—ತಮಗೆ ಎನಿಸಿದ—ಅಶಕ್ತತೆ—ಅವಗುಣಗಳನ್ನು ಎತ್ತಿತೋರಿಸುವ ಕಾರ್ಯವನ್ನೂಮಾಡಿದ್ದಾರೆ. ಈ ಸಂಪ್ರದಾಯವನ್ನು ಪುರಂದರದಾಸರೂ ಅನುಸರಿಸಿದ್ದಾರೆ. ತಮ್ಮ ಮನಸ್ಸು—ಬುದ್ಧಿ— ಹೃದಯಗಳನ್ನು ಸೂರೆಗೊಂಡ ದ್ವೈತ-ಭಕ್ತಿಪಂಥವನ್ನು ಮಂಡನಮಾಡುತ್ತ ಇವರು, ಪರಮತಗಳನ್ನು ಖಂಡಿಸಿ ನುಡಿದುದೂ ಉಂಟು. ನಮ್ಮ ಮತಾಚಾರ್ಯರೆಲ್ಲರ ಮತಪ್ರಚಾರದ ಪರಂಪರೆಯನ್ನು ನೋಡಿದರೆ, ಈ ಬಗೆಯ ಖಂಡನ-ಮಂಡನಗಳು ಅಸ್ವಾಭಾವಿಕವೇನೂ ಎನಿಸವು. ಇಂದಿನ ಭಾವೈಕ್ಯದೃಷ್ಟಿಯವರಿಗೆ ಈ ಖಂಡನ-ಮಂಡನ ರೀತಿಗಳು ಅನಾವಶ್ಯಕವೆಂದು ತೋರಬಹುದು ನಿಜ; ಆದರೆ ನಮ್ಮ ನಾಡಿನ ಐತಿಹಾಸಿಕ ಕಾಲ ತತ್ತ್ವಸ್ವಾತಂತ್ರ್ಯದ ಕಾಲವಾಗಿದ್ದಿತೆಂಬುದನ್ನು ನಾವು ಮರೆಯಕೂಡದು.

ತತ್ತ್ವಪ್ರಚಾರವಿಷಯಕವಾದ ಮಾತುಗಳಲ್ಲಿ ವೈಷಮ್ಯ–ವೈಪರೀತ್ಯಗಳು ಕಂಡುಬಂದರೂ, ಲೌಕಿಕ ಜೀವನವಿಷಯುವನ್ನು ಹೇಳುವಾಗ ಅವರೆಲ್ಲರೂ 'ಬಹುಜನ ಹಿತಾಯ ಬಹುಜನ ಸುಖಾಯ' ಎಂಬ ಸಮಾಜ ಜೀವನತತ್ತ್ವವನ್ನೇ ಎತ್ತಿ ಹಿಡಿದಿರುವರು. ಶ್ರೀಪುರಂದರದಾಸರು ಹಿಡಿದ ದಾರಿಯೂ ಇದೇ ಬಗೆಯದು. ತತ್ತ್ವತರ್ಕದಲ್ಲಿ ಸ್ವತಂತ್ರ ರೀತಿಯಿಂದ ನಡೆದ ಇವರು, ಲೌಕಿಕಜೀವನವನ್ನು ಕುರಿತು ಹೇಳಿದ ಮಾತುಗಳು, ಸರ್ವದೇಶ–ಸರ್ವಕಾಲ – ಸರ್ವಜನಮಾನ್ಯವೆನಿಸುವಂತಹವಾಗಿವೆ. ನಮ್ಮ ಮತ – ಪಂಥಗಳ ಐತಿಹಾಸಿಕ ಪ್ರಜ್ಞೆಯುದ್ದವರಾರೂ, ಪುರಂದರದಾಸರ ಪರಮತಖಂಡನೆಯ ಮಾತುಗಳನ್ನು ತಪ್ಪಾಗಿ ಭಾವಿಸರು; ಅವರ ವ್ಯಕ್ತಿವೈಶಿಷ್ಟ್ಯದ ಮೇಲೆ ದೋಷದ ಹೊರೆಯನ್ನು ಹೊರಿಸರು. ಇಂದಿನ ಭಾವೈಕ್ಯಪ್ರಧಾನತೆಯ ಕಾಲದಲ್ಲಿಯೂ ವ್ಯಕ್ತಿಯ ವಿಚಾರಸ್ವಾತಂತ್ರ್ಯಕ್ಕೆ ಬೆಲೆಯನ್ನು ಕೊಡಲೇಬೇಕಾಗುವುದು. ಭಾವೈಕ್ಯದ ಭಾವಾವೇಶದಿಂದ, ಎಲ್ಲರನ್ನೂ ಒಂದೆ ಪಡಿಯಚ್ಚಿನ ಗೊಂಬೆಗಳನ್ನಾಗಿ ಮಾಡಿದರೆ, ಮಾನವಕುಲದ ಪ್ರಗತಿಯೇ ಕುಂಠಿತವಾದೀತು. ರೋಗಕಾಲದಲ್ಲಿ ಔಷಧಿಯೆಂದು ಸೇವಿಸಿದ ಪದಾರ್ಥಗಳು, ನಿರೋಗಿಗೆ ಎಂದೂ ಸ್ವಾಭಾವಿಕ ಆಹಾರವಾಗಲಾರವು. ನಿರೋಗಿಗಳಲ್ಲಿ ಹೊಸ ರೋಗಗಳನ್ನು ಹುಟ್ಟಿಸಲು ಅವು ಕಾರಣವಾಗಬಹುದಿಷ್ಟೆ! ಸಮತಾವಾದ, ಸಮಾಜವಾದ, ಭಾವೈಕ್ಯವಾದ ಇವೆಲ್ಲ ಒಂದು ಬಗೆಯ ಔಷಧಿಗಳು ಮಾತ್ರ. ಮಾನವತೆಯ ಅರಳಿಕೆಗೆಂದಿರುವ ಆಹಾರಸಾಮಗ್ರಿಗಳಲ್ಲ. ಪುರಂದರದಾಸರು ಮಾನವತೆಯ ವಿಕಾಸಕ್ಕಾಗಿ ತುಂಬ ಆಹಾರವನ್ನು ಒದಗಿಸಿಕೊಟ್ಟಿದ್ದಾರೆ. ಎಂತಲೇ ಅವರು ಅವತಾರಿಗಳೆನಿಸಿಕೊಂಡಿದ್ದಾರೆ; ಮಹಾತ್ಮರೆನಿಸಿಕೊಂಡಿದ್ದಾರೆ.

## VII ಪುರಂದರದಾಸರ ಸಮಕಾಲೀನರು

ಪುರಂದರದಾಸರು ಹರಿದಾಸದೀಕ್ಷೆಪಡೆದು ಭಕ್ತಶ್ರೇಷ್ಠರೆಂದು ಬೆಳಕಿಗೆ ಬಂದುದು, ವಿಜಯನಗರದ ತುಳುವವಂಶದ ಕೃಷ್ಣದೇವರಾಯನ ಕಾಲದಲ್ಲಿ. ಮುಂದೆ ಅದೇ ತುಳುವ ಮನೆತನದ ಅಚ್ಯುತರಾಯ—ಸದಾಶಿವರಾಯರ—ಸಾಮ್ರಾಜ್ಯದ ಇಳಿಗಾಲದ— ಆಳಿಕೆಯಲ್ಲಿಯೂ ಬದುಕಿ ಬಾಳಿದವರು. ತರುವಾಯ ಆರವೀಡು ಮನೆತನದ ಅಳಿಯರಾಮರಾಜನ ಆಡಳಿತವನ್ನೂ ಕಣ್ಣಾರೆ

ಕಂಡವರು. ವಿಜಯನಗರದ ಅಳಿಗಾಲದ ಪೂರ್ವಸೂಚನೆಯೇನೋ—ಎಂಬಂತೆ, ರಕ್ಕಸತಂಗಡಿಗೆಯ (ತಾಳೆಕೋಟೆಯ) ಯುದ್ಧಕ್ಕೆ ಮೊದಲು ಸ್ವಲ್ಪ ಸಮಯದ ಹಿಂದೆಯೆ ಇಹಲೋಕವನ್ನು ತ್ಯಜಿಸಿದವರು. ಕೃಷ್ಣದೇವರಾಯನ ಕಾಲದ ಸಾಮ್ರಾಜ್ಯೋನ್ನತಿಯನ್ನು ಕಣ್ಣಾರೆಕಂಡವರು; ಬಳಿಕಿನ ದೊರೆಗಳ ಕರ್ತೃತ್ವಶಕ್ತಿಯ ಅಭಾವದ ಮೂಲಕ ಸಾಮ್ರಾಜ್ಯ ಅವನತಿ ಪಥದಲ್ಲಿ ನಡೆದುದನ್ನೂ ಪ್ರತ್ಯಕ್ಷ ನೋಡಿದವರು. ೧೫೨೦ ರಿಂದ ೧೫೬೪ರ ವರೆಗಿನ ವಿಜಯನಗರದ ಸಾಮ್ರಾಜ್ಯಪ್ರದೇಶದಲ್ಲಿ ಹೊಳೆದುಹೋದ ರಾಜಕೀಯ ವ್ಯಕ್ತಿಗಳೆಲ್ಲ ಪುರಂದರದಾಸರ ಸಮಕಾಲೀನರು— ಎಂದು ಹೇಳಬಹುದು. ದಾಸರ ಕಾರ್ಯಕ್ಷೇತ್ರ ರಾಜಕಾರ್ಯಕ್ಕೆ ಸ್ವಲ್ಪವೂ ಸಂಬಂಧಿಸಿದುದಲ್ಲವಾದುದರಿಂದ, ಇವರ ಸಾಹಿತ್ಯದಲ್ಲಿ ಸಮಕಾಲೀನ ರಾಜಕೀಯ ವ್ಯಕ್ತಿಗಳ ನಾಮನಿರ್ದೇಶ ಎಲ್ಲಿಯೂ ಬಂದಂತೆ ಕಾಣುವುದಿಲ್ಲ.

ವ್ಯಾಸರಾಯಸ್ವಾಮಿಗಳ ಶಿಷ್ಯರಿವರಾದುದರಿಂದ, ಅವರ ಶಿಷ್ಯಕೋಟಿಗೆ ಸೇರಿದ ಮಹಾಪುರುಷರನ್ನೆಲ್ಲ ಪುರಂದರದಾಸರ ಸಮಕಾಲೀನರೆಂದು ಹೇಳಬಹುದಾಗಿದೆ. ಶ್ರೀರಾಘವೇಂದ್ರಸ್ವಾಮಿಗಳ ಪರಮಗುರುಗಳಾದ ವಿಜಯೀಂದ್ರರೂ, ಸೋದೆಮಠದಪೀಠಾಧಿಪತಿಗಳಾದ ಶ್ರೀವಾದಿರಾಜಯತಿಗಳೂ, ಉತ್ತರಾದಿಮಠದ ಪೀಠಸ್ಥಗುರುಗಳಾದ ರಘುವರ್ಯತೀರ್ಥರೂ ಪುರಂದರದಾಸರ ಸಾಹಿತ್ಯದಲ್ಲಿ ಸ್ಥಾನವನ್ನು ಪಡೆದಿದ್ದಾರೆ. ಕಾಗಿನೆಲೆಯ ಕನಕದಾಸರೂ ದಾಸರ ಮನ್ನಣೆಗೆ ಪಾತ್ರರಾಗಿದ್ದಾರೆ. ಬೇಲೂರಿನ ವೈಕುಂಠದಾಸರು ಪುರಂದರದಾಸರ ಸಮಕಾಲೀನರಾದರೂ, ಪರಂಪರೆಯ ಕಥೆಗಳಲ್ಲಿ ಮಾತ್ರ ಇವರಿಬ್ಬರ ಸಂಬಂಧದ ಸಂಗತಿಗಳು ಬರುವುವಲ್ಲದೆ, ಪುರಂದರದಾಸರು ತಮ್ಮ ಕೃತಿಗಳಲ್ಲಿ ಎಲ್ಲಿಯೂ ಹೆಸರುಗೊಂಡಂತಿಲ್ಲ.

ವ್ಯಾಸರಾಯರೊಂದಿಗೆ ತತ್ತ್ವಮೀಮಾಂಸೆಯ ಬಗೆಗೆ ವಾದಹೂಡಿ ಸೋತು ಜಯಪತ್ರವನ್ನು ಕೊಟ್ಟ ಬೇರೆ ಬೇರೆ ವಿದ್ವಾಂಸರನ್ನು ಪುರಂದರದಾಸರು ಕಂಡು ಅರಿತಿರಬಹುದು. ಅವರೆಲ್ಲರ ಹೆಸರನ್ನು, ಶ್ರೀವ್ಯಾಸರಾಯರನ್ನು ಕುರಿತ ಸುಳಾದಿಯಲ್ಲಿ ಹೀಗೆ ವಿವರಿಸಿದ್ದಾರೆ:

'ಕಾಶೀ ಗದಾಧರ ಮಿಶ್ರನ ಸೋಲಿಸಿ

ಕಾಶೀ ಮಿಶ್ರ ಪಕ್ಷಧರ ವಾಜಪೇಯ ನಾ—
ರಸಿಂಹ ಲಿಂಗಣ್ಣ ಮಿಶ್ರ ಮೊದಲಾದವಿ—
ದ್ವಾಂಸರು ನೂರೆಂಟು ಮಂದಿ ಬರಲು ।
ಜೈಸಿದೆ ಜಯಪತ್ರವ ಕೊಂಡು ಮೆರೆದೆ ।'

ಇವರಲ್ಲದೆ, ಉತ್ತರದಲ್ಲಿ ವಿಷ್ಣುಭಕ್ತಿತತ್ತ್ವದ ಆಚಾರ್ಯಪುರುಷರಾದ ಶ್ರೀಕೃಷ್ಣಚೈತನ್ಯಪ್ರಭುಗಳೂ ಶ್ರೀವಲ್ಲಭಾಚಾರ್ಯರೂ, ಅಂದಿನ ಕಾಲದ ಸಾಂಸ್ಕೃತಿಕ ಕ್ಷೇತ್ರವಾಗಿದ್ದ ವಿಜಯನಗರಕ್ಕೆ ಬಂದುಹೋದ ಸಂಗತಿಯು ಅವರವರ ಜೀವನಚರಿತ್ರೆಯಲ್ಲಿ ಉಲ್ಲಿಖಿತವಾಗಿವೆ. ಇಷ್ಟೇ ಅಲ್ಲ, ಶ್ರೀಕೃಷ್ಣಚೈತನ್ಯರು ಶ್ರೀವ್ಯಾಸರಾಯರ ಭಕ್ತಿದೀಕ್ಷಾಪರಂಪರೆಗೆ ಸೇರಿದವರೆಂದೂ ಹೇಳಲಾಗುತ್ತದೆ. ಆದುದರಿಂದಲೇ ಈ ಆಚಾರ್ಯರಿಬ್ಬರನ್ನೂ ಭಕ್ತಶ್ರೇಷ್ಠರಾದ ಪುರಂದರದಾಸರು ಸಂದರ್ಶಿಸಿರಬಹುದೆಂದು ಊಹಿಸಬಹುದು. ಈ ಊಹೆಗೆ ಲಿಖಿತಪ್ರಮಾಣಗಳಾವುವೂ ದೊರೆತಿಲ್ಲ.

ತೆಲುಗುದೇಶದ ಸಂಗೀತಜ್ಞ-ಸಂತಕವಿಗಳಾದ ತಾಳ್ಲಪಾಕ ಅನ್ನಮಾಚಾರ್ಯರೂ ಪುರಂದರದಾಸರ ಸಮಕಾಲೀನರೆಂದೂ, ಅವರಿಬ್ಬರೂ ಪರಸ್ಪರರನ್ನು ಸಂದರ್ಶಿಸಿದಾಗ, ಇಬ್ಬರೂ ಒಬ್ಬರೊಬ್ಬರ ಘನತೆಯನ್ನು ಅರಿತುಕೊಂಡರೆಂದೂ ಹೇಳುವ ಕಥೆಯೊಂದು, ತೆಲುಗುಕವಿ ಚಿನ್ನಯಸೂರಿ ಎಂಬವನು ಬರೆದ 'ಅನ್ನಮಾಚಾರ್ಯಚರಿತ' ಎಂಬ ಗ್ರಂಥದಲ್ಲಿ ಬಂದಿದೆ. ಆದರೆ ಇಬ್ಬರೂ ಬದುಕಿಬಾಳಿದ ಕಾಲದ ದೃಷ್ಟಿಯಿಂದ ವಿಚಾರಮಾಡಿದರೆ, ಈ ಕಥೆಯು ನಂಬುಗೆಗೆ ಅರ್ಹವಾದುದೆಂದು ಎನಿಸಲಾರದು. ಏಕೆಂದರೆ, ಅನ್ನಮಾಚಾರ್ಯರ ಕಾಲ ಕ್ರಿ. ಶ. ೧೪೦೮ ರಿಂದ ೧೫೦೩ ರ ವರೆಗೆ— ಎಂದು ತೆಲುಗು ಸಾಹಿತ್ಯಚರಿತ್ರೆಯು ನಿರ್ಣಯಿಸಿರುತ್ತದೆ. ಪುರಂದರದಾಸರು ಹರಿಭಕ್ತಶ್ರೇಷ್ಠರೆಂದು ಹೆಸರನ್ನು ಪಡೆದುದು, ಕ್ರಿ. ಶ. ೧೬ ನೆಯ ಶತಮಾನದ ಎರಡು ದಶಕಗಳ ನಂತರ. ಹೀಗಿರುವಾಗ ತಾಳ್ಲಪಾಕ ಅನ್ನಮಾರ್ಯರನ್ನು ಪುರಂದರದಾಸರು ಸಂದರ್ಶಿಸುವರೆಂತು? ಅನ್ನಮಾಚಾರ್ಯರ ಘನತೆಯನ್ನು ಹೆಚ್ಚಿಸಿ ತೋರಿಸಲಿಕ್ಕೆಂದು, ಅವರ ತರುವಾಯ ಅನೇಕ ವರ್ಷಗಳ ಮೇಲೆ ಮುಂದೆ ಬಂದ ಚಿನ್ನಯಸೂರಿ, ಈ ಸಂದರ್ಶನ ಘಟನೆಯನ್ನು ಸೃಷ್ಟಿಸಿ ಹೇಳಿರಬಹುದು. ಪುರಂದರದಾಸರ ಉಪಲಬ್ಧ ಸಾಹಿತ್ಯದಲ್ಲಿ ಅನ್ನಮಾಚಾರ್ಯರ ಹೆಸರೇ ಕಂಡುಬರುವುದಿಲ್ಲ. ಸಂಗೀತ

ವಿಚಾರದಲ್ಲಿ ಅವರಿಂದ ಪ್ರಭಾವಿತರಾಗಿದ್ದರೆ, ದಾಸರು ಖಂಡಿತವಾಗಿ ಅವರ ಹೆಸರನ್ನು ಹೊಗಳಿ ಹಾಡದೆ ಬಿಡುತ್ತಿರಲಿಲ್ಲ.

ಕರ್ನಾಟಕದಿಂದ ಉತ್ತರಭಾರತಕ್ಕೆ ಹೋಗಿ, ಅಲ್ಲಿ ಸಂಗೀತ ಪ್ರಚಾರ ಮಾಡಿದ ಪುಂಡರೀಕವಿಠಲನೆಂಬ ಸಂಗೀತ ವಿದ್ವಾಂಸನೂ ಪುರಂದರದಾಸರ ಸಮಕಾಲೀನನೇ. ಇವನು ಸಂಸ್ಕೃತಭಾಷೆಯಲ್ಲಿ ಬರೆದ ಸಂಗೀತಶಾಸ್ತ್ರ ವಿಷಯಕವಾದ ನಾಲ್ಕುಗ್ರಂಥಗಳು ಉಪಲಬ್ಧವಾಗಿವೆಯಲ್ಲದೆ, ಬೇರೆ ಕೆಲವು ಸಂಗೀತಕಲೆಗೆ ಸಂಬಂಧಿಸಿದ ಗ್ರಂಥಗಳನ್ನೂ ಈತ ಬರೆದಿರುವನೆಂದು ಹೇಳಲಾಗುತ್ತದೆ. ಈ ಪುಂಡರೀಕವಿಠಲನು ಹರಿದಾಸಪರಂಪರೆಗೆ ಸೇರಿಕೊಂಡವನೋ ಅಲ್ಲವೋ ಎಂಬುದು ಸಂಶೋಧನೆಯಿಂದ ಕಂಡುಕೊಳ್ಳಬೇಕಾದ ಮಾತಾದರೂ, ಶ್ರೇಷ್ಠ ಸಂಗೀತ ಶಾಸ್ತ್ರಜ್ಞನೆಂಬುದು ಕಂಡುಕೊಂಡ ವಿಷಯ. ದಕ್ಷಿಣಭಾರತದಲ್ಲಿ ಪುರಂದರದಾಸರ ಹೆಸರು ಸಂಗೀತಪ್ರಪಂಚದಲ್ಲಿ ಮೊಳಗುವ ಕಾಲದಲ್ಲಿಯೆ, ಉತ್ತರಭಾರತದಲ್ಲಿ ಪುಂಡರೀಕವಿಠಲ ತನ್ನ ಹೆಸರನ್ನು ಮೊಳಗಿಸಿದ್ದಾನೆ. ಇದನ್ನು ನೋಡಿದಾಗ, ಈ ಇಬ್ಬರೂ ಕರ್ನಾಟಕ ಸಂಗೀತ-ಗಾರರು, ಒಬ್ಬನೇ ಸಂಗೀತಗುರುವಿನ ಶಿಷ್ಯರಾಗಿರಬಹುದೇ ?— ಎಂದು ಭಾವಿಸುವಂತಿದೆ. ಪುಂಡರೀಕವಿಠಲ ತನ್ನ ಅಮೂಲ್ಯಗ್ರಂಥಗಳಿಂದ ಹೆಸರಾಗಿದ್ದಾನೆ; ಪುರಂದರದಾಸರು ತಮ್ಮ ಪ್ರತ್ಯಕ್ಷ ಪ್ರಚಾರಕಾರ್ಯದಿಂದ ಕೀರ್ತಿ-ಶಾಲಿಗಳಾಗಿದ್ದಾರೆ.

ಪುಂಡರೀಕವಿಠಲನ ಗೋತ್ರ ಜಾಮದಗ್ನ್ಯ. ತಂದೆಯ ಹೆಸರು ವಿಠ-ಲಾರ್ಯ ; ತಾಯಿಯ ಹೆಸರು ದೇವಕ್ಕ. ಇವನು ಹುಟ್ಟಿದುದು ಶಿವ-ಗಂಗೆಯ ಬಳಿಯಲ್ಲಿರುವ 'ಸಾತನೂರು' ಎಂಬ ಗ್ರಾಮದಲ್ಲಿ. ಈ ತಂದೆ-ಮಕ್ಕಳ ಹೆಸರುಗಳನ್ನು ನೋಡಿದರೆ, ಇವರೂ ಭಾಗವತಪಂಥಕ್ಕೆ ಸೇರಿದವರಾಗಿರಬಹುದೆಂದು ತೋರುವುದು. 'ರಾಗಚಂದ್ರೋದಯ' ಎಂಬ ಗ್ರಂಥದ ಕೊನೆಯ ಭಾಗದಲ್ಲಿ ' ಇತಿಶ್ರೀ ಕರ್ಣಾಟಜಾತೀಯ ಪುಂಡರೀಕವಿಠಲ ವಿರಾಚಿತೇ ಸದ್ರಾಗಚಂದ್ರೋದಯೇ...' ಇತ್ಯಾದಿಯಾಗಿ ಹೇಳಲಾಗಿದೆ. ಸಂಗೀತಶಾಸ್ತ್ರದಲ್ಲಿ ಪುರಂದರದಾಸರೂ ವ್ಯುತ್ಪನ್ನಮತಿಗಳು ; ಪುಂಡರೀಕ ವಿಠಲನೂ ವ್ಯುತ್ಪನ್ನಮತಿ. ಸುಳಾದಿಸಂಗೀತವನ್ನು ಕುರಿತು ಪುಂಡರೀಕ ವಿಠಲನೂ ತನ್ನ ಗ್ರಂಥದಲ್ಲಿ ವಿವರಿಸಿದ್ದಾನೆ.

'ಸ್ವರಮೇಳ ಕಲಾನಿಧಿ' ಎಂಬ ಸಂಸ್ಕೃತಭಾಷೆಯ ಸಂಗೀತಶಾಸ್ತ್ರ ಗ್ರಂಥವೊಂದನ್ನು 'ರಾಮಾಮಾತ್ಯ' ಎಂಬ ಪಂಡಿತನು ಕ್ರಿ. ಶ. ೧೫೫೦ ರಲ್ಲಿ ಬರೆದಿರುವನು. ವಿಜಯನಗರದ ದೊರೆ ಅಳಿಯರಾಮರಾಯನ ಹೇಳಿಕೆಯಂತೆ ತಾನಿದನ್ನು ಬರೆದಿರುವೆನಾಗಿ, ಆತನು ಹೇಳಿದ್ದಾನೆ. ಅವನು ಕೂಡ ಪುರಂದರದಾಸರ ಸಮಕಾಲೀನನೆಂದು ಬೇರೆ ಹೇಳಬೇಕಾಗಿಲ್ಲ. ಆದರೆ ಸಂಗೀತಶಾಸ್ತ್ರಜ್ಞನಾದರೂ ರಾಮಾಮಾತ್ಯನ ಹೆಸರು, ದಕ್ಷಿಣಭಾರತದಲ್ಲಿ ಪುರಂದರದಾಸರ ಹೆಸರಿನಷ್ಟು ಮೇಲಿನ ಸ್ಥಾನಕ್ಕೆ ಏರಿ ನಿಂತಿಲ್ಲ. ಒಂದೇ ಊರಲ್ಲಿ ಒಂದೇ ಕಾಲದಲ್ಲಿ ಬದುಕಿ ಬಾಳಿದ ಈ ಇಬ್ಬರು ಸಂಗೀತ ವಿದ್ವಾಂಸರು ಒಬ್ಬರನ್ನೊಬ್ಬರು ಚೆನ್ನಾಗಿ ಅರಿತಿರಬಹುದು; ಆದರೆ ಲಿಖಿತ ಪ್ರಮಾಣಗಳು ಎಲ್ಲಿಯೂ ದೊರೆತಿಲ್ಲ.

'ವ್ಯಾಸಯೋಗಿ ಚರಿತಂ' ಎಂಬ ಸಂಸ್ಕೃತಗ್ರಂಥವನ್ನು ಬರೆದ ಸೋಮನಾಥಕವಿಯೂ ಪುರಂದರದಾಸರ ಸಮಕಾಲೀನನೆ ! ಆದರೆ, ಅದೇಕೋ ಏನೋ— ಸೋಮನಾಥ ಕವಿಯು, ಶ್ರೀವ್ಯಾಸರಾಯರ ಚರಿತ್ರೆಯಲ್ಲಿ, ಅವರ ಲೋಕವಿಖ್ಯಾತ ಶಿಷ್ಯರಾದ ಪುರಂದರದಾಸರ ಹೆಸರನ್ನು ಎಲ್ಲಿಯೂ ಹೇಳದೆ ಇರುವುದು ಆಶ್ಚರ್ಯದ ಸಂಗತಿಯಾಗಿದೆ.

ಶ್ರೀಕೃಷ್ಣದೇವರಾಯನ ಅಪೇಕ್ಷೆಯಂತೆ, (ಕುಮಾರವ್ಯಾಸನು ಬರೆಯದೆ ಇದ್ದ) ಮಹಾಭಾರತದ ಕೊನೆಯ ಎಂಟು ಪರ್ವಗಳನ್ನು ಕನ್ನಡಿಸಿದ ತಿಮ್ಮಣ್ಣಕವಿಯೂ ಪುರಂದರದಾಸರ ಸಮಕಾಲೀನನು. ಆದರೆ ಇಬ್ಬರ ಕಾರ್ಯಕ್ಷೇತ್ರ ಭಿನ್ನವಾದುದರಿಂದಲೋ ಏನೋ—ಇಬ್ಬರೂ ಒಬ್ಬರೊಬ್ಬರ ಹೆಸರನ್ನು ತಮ್ಮ ಸಾಹಿತ್ಯದಲ್ಲಿ ಉಲ್ಲೇಖಿಸಿಲ್ಲ. ತಿಮ್ಮಣ್ಣಕವಿಯು ರಾಜಪೋಷಿತ ಸಾಮಾನ್ಯಕವಿ; ಪುರಂದರದಾಸರು ಪರಮಾತ್ಮ ಪ್ರಸಾದಿತ ಭಕ್ತಕವಿಗಳು. ಇಬ್ಬರೂ ಒಬ್ಬರನ್ನೊಬ್ಬರು ಹೇಗೆ ಗಣಿಸುತ್ತಿದ್ದರೋ ಏನೋ !

ಸಮಕಾಲೀನರಾದ ಕನಕದಾಸರ ಹೆಸರು, ಪುರಂದರದಾಸರ ಎರಡು ಕೃತಿಗಳಲ್ಲಿ ಬಂದಿದೆ. ಮೊದಲನೆಯ ಕೃತಿ 'ಕನಕದಾಸನ ಮೇಲೆ ದಯಮಾಡಲು, ವ್ಯಾಸಮುನಿಯ ಮಠದವರೆಲ್ಲ ದೂರಿಕೊಳ್ಳುವರು' ಎಂಬುದು. ಎರಡನೆಯದೆಂದರೆ : 'ದಾಸರ ನಿಂದಿಸಬೇಡ. ಮನುಜಾ — ಹರಿ—ದಾಸರ ನಿಂದಿ[illegible] ಸುರೇಂದ್ರ

ತೀರ್ಥರು ಮಾಡಿದ ದೇವಪೂಜೆಯನ್ನು ಕಣ್ಣಾರೆ ಕಂಡುದಾಗಿ ಹೇಳಿದ ಒಂದು ಹಾಡೂ ಪುರಂದರದಾಸರ ಅಂಕಿತದಲ್ಲಿ ಇದೆ. ಇವರು ದಕ್ಷಿಣ ಭಾರತದ ಕ್ಷೇತ್ರ-ತೀರ್ಥಗಳನ್ನು ಸಂಚರಿಸುತ್ತಿರುವಾಗ, ಅಲ್ಲಲ್ಲಿಯ ಅನೇಕ ಜನ ವಿದ್ವಾಂಸರ—ಸಾಧು-ಸತ್ಪುರುಷರ-ಪರಿಚಯ-ಸಾಹಚರ್ಯಗಳೂ ಉಂಟಾಗಿರಬಹುದು. ಅವಾವುವೂ ನಮಗೆ ಗೊತ್ತಾಗಿಲ್ಲ.

## VIII ಪುರಂದರದಾಸರ ತರುವಾಯ :

ಪುರಂದರದಾಸರ ಜೀವನೋತ್ತರ ಅವರಿಗೆ ಮನ್ನಣೆ-ಕೃತಜ್ಞತೆಗಳನ್ನು ಸಲ್ಲಿಸುತ್ತ ಬಂದವರೆಂದರೆ ಹರಿದಾಸಕೂಟಕ್ಕೆ ಸೇರಿದ ಭಕ್ತಕವಿಗಳು ಕೆಲವರು ; ಸಂಗೀತಶಾಸ್ತ್ರದ ಲೇಖಕರು ಕೆಲವರು. ವಿಜಯದಾಸರೂ ಅವರ ಶಿಷ್ಯಪರಂಪರೆಯವರೂ ಪುರಂದರದಾಸರನ್ನು ನೆನೆದು ಕೊಂಡಾಡಿರುವ ವಿಷಯವನ್ನು, ಈ ಮೊದಲು ಸಂದರ್ಭಬಂದಾಗಲೆಲ್ಲ ಬರೆದು ತಿಳುಹಲಾಗಿದೆ. ದಕ್ಷಿಣದೇಶದ ಪ್ರಸಿದ್ಧವಾಗ್ಗೇಯಕಾರರಾದ ಶ್ರೀತ್ಯಾಗರಾಜರೂ ತಾವು ಪುರಂದರದಾಸರ ಭಕ್ತಿಸಾಹಿತ್ಯದಿಂದ ಪ್ರಚೋದಿತರಾದವರೆಂದು ಹೇಳಿರುವರಲ್ಲದೆ, 'ಪ್ರಹ್ಲಾದಚರಿತಮು' ಎಂಬ ತಮ್ಮದೊಂದು ಕಾವ್ಯದಲ್ಲಿ ಪುರಂದರದಾಸರ ಮಹಿಮೆಯನ್ನು ಹೊಗಳಿದ್ದಾರೆ.

'ಸಂಗೀತಸಾರಾಮೃತ' ಎಂಬ ಹೆಸರಿನ ಲಕ್ಷಣಶಾಸ್ತ್ರ ಗ್ರಂಥವನ್ನು ಬರೆದ ತಂಜಾವರದ ತುಳಜಾಜೀ ಮಹಾರಾಜನೂ, ಪುರಂದರದಾಸರಿಗೆ ಸಂಗೀತ ಪ್ರಪಂಚದಲ್ಲಿದ್ದ ಮಹತ್ತ್ವದ ಸ್ಥಾನವನ್ನು ಒಪ್ಪಿ, ಹೀಗೆಂದು ಬರೆದಿದ್ದಾನೆ :

> "ಇತಿ ಸಾಲಗ-ಸೂಡಸ್ಥಗೀತಾನಾಂ ಲಕ್ಷ್ಯಕೀರ್ತನಂ
> ಶ್ರೀಪುರಂದರ ದಾಸಾದ್ಯೈರಭಿಯುಕ್ತೈಃ ಪುರಾತನೈಃ ॥
> ಪ್ರಯುಕ್ತೇಷು ಪ್ರಸಿದ್ಧೇಷು ಲಕ್ಷ್ಯೇಷು ವಿವಿಧೇಷ್ವಪಿ ।
> ಧ್ರುವಾದಿಷು ತ್ವದುಕ್ತಾನಿ ಲಕ್ಷಣಾನಿ ಮಹಾಮತೇ ॥
>
> —ಸಂ. ಸಾ. ಪ. ೧೫೦

ಕ್ರಿ. ಶ. ೧೮೨೯ ರಿಂದ ೧೮೪೭ರ ವರೆಗೆ ದಕ್ಷಿಣ ಭಾರತದ ಸಂಗೀತ ಪ್ರಪಂಚದಲ್ಲಿ ಮಿರುಗಿ ಮೆರೆದಾತ—ತಿರುವಾಂಕೂರಿನ ರಾಜಮನೆತನದವ

ರಾಪ—ಸ್ವಾತಿ ತಿರುನಾಳರು ಭಕ್ತಕವಿಗಳೂ ಅಹುದು; ವಾಗ್ಗೇಯಕಾರರೂ ಅಹುದು. ಅವರು ಕೂಡ ಪುರಂದರದಾಸರನ್ನು ಗುರುಸ್ಥಾನೀಯರನ್ನಾಗಿ ಮಾಡಿಕೊಂಡವರು. ಭಕ್ತಿ ಮತ್ತು ಸಂಗೀತಗಳೆರಡರಲ್ಲಿಯೂ ಪುರಂದರ-ದಾಸರ ರಚನೆಗಳಿಂದ ಅವರು ಪ್ರಚೋದನೆಯನ್ನು ಪಡೆದವರು.

ತಮಿಳುನಾಡಿನಲ್ಲಿ ಮಾತೃಭಾಷೆಯ ಬಗೆಗೆ ಉತ್ಕಟವಾದ ಅಭಿಮಾನವು ಜನರಲ್ಲಿ ಮೂಡಿ ಬೆಳೆಯುವ ವರೆಗೂ, ಅಲ್ಲಿಯ ಪ್ರತಿಯೊಬ್ಬ ಸಂಗೀತ ಗಾರನೂ, ಸಂಗೀತ ಕಚೇರಿಗಳಲ್ಲಿ, ಪುರಂದರದಾಸರಿಗೆ ಮನ್ನಣೆ ಸಲ್ಲಿಸಲು, ತಪ್ಪದೆ ಅವರ ಕೀರ್ತನೆಗಳನ್ನು ಹಾಡುವ ಪದ್ಧತಿಯಿದ್ದಿತೆಂದು ಹೇಳುತ್ತಾರೆ. ಈ ಪದ್ಧತಿಯೇ ಕೆಲವು ವರ್ಷಗಳ ಹಿಂದೆ, ಪುರಂದರದಾಸರ ಕೆಲವು ಪ್ರಸಿದ್ಧ ಕೀರ್ತನೆಗಳನ್ನು, ಸಮರಾಗ–ತಾಳಗಳಲ್ಲಿ–ತಮಿಳು ನುಡಿಯಲ್ಲಿ–ಅನುವಾದ ಮಾಡಿ ಪ್ರಕಟಿಸುವ ಕಾರ್ಯವನ್ನು ಮಾಡಿದೆ. ತೆಲುಗು–ತಮಿಳು ದೇಶಗಳಲ್ಲಿ ಈಗಲೂ ಚಿಕ್ಕಮಕ್ಕಳ ಸಂಗೀತದ ಪ್ರಾರಂಭಪಾಠಗಳು, ಪುರಂದರದಾಸರ ಕೃತಿಗಳಿಂದಲೇ ಪ್ರಾರಂಭವಾಗುತ್ತಿರುವುದನ್ನು ನೋಡಿದರೆ, ದಕ್ಷಿಣದೇಶದ ಸಂಗೀತಜ್ಞರಲ್ಲೆಲ್ಲ ಇವರ ವಿಷಯವಾಗಿ ಎಷ್ಟೊಂದು ಭಕ್ತ್ಯಾದರಗಳು ಇದ್ದುವೆಂಬುದು ಕಂಡುಬರುವಂತಿದೆ.

ಮಹಾರಾಷ್ಟ್ರದ ಭಕ್ತಕವಿಗಳು ತಮ್ಮ ರಚನೆಗೆ ಹೆಚ್ಚಾಗಿ 'ಅಭಂಗ' ಎಂಬ ಜಾನಪದಗೀತಛಂದಸ್ಸನ್ನು ಬಳಸಿದ್ದರೂ, ಪುರಂದರದಾಸರಿಂದ ಪ್ರಭಾವಿತರಾಗಿ ಅವರಂತೆ ಹಾಡುಗಳನ್ನು ರಚಿಸಿದ ಕೆಲವು ಜನ ಭಕ್ತಕವಿ ಗಳೂ ಇದ್ದಾರೆ. ಏಕನಾಥರ 'ಗೌಳಣ' 'ಲಳಿತ' 'ಭಾರುಡ (ಮುಂಡಿಗೆ)' ಇವುಗಳ ಮೇಲೆ ಪುರಂದರದಾಸರ ಪ್ರಭಾವ ತುಂಬ ಕಾಣುತ್ತದೆ. ಮಧ್ವ-ಮುನೀಶ್ವರ ಎಂಬ ಕವಿಯ ಹಾಡುಗಳಂತೂ ಪುರಂದರದಾಸರ ದಾರಿಯ ಲ್ಲಿಯೆ ನಡೆದುವುಗಳಾಗಿವೆ. ವಿಠೋಬಾ ಅಣ್ಣಾ ದಫ್ತರದಾರರಂತೂ ಸರಿಯೇ ಸರಿ! ಮಹಾರಾಷ್ಟ್ರದಲ್ಲಿ 'ಅಮರಭೂಪಾಳಿ' ಎಂದು ಪ್ರಸಿದ್ಧವಾದ 'ಘನ-ಶ್ಯಾಮ ಸುಂದರಾ ಶ್ರೀಧರಾ ಅರುಣೋದಯ ಝಾಲಾ' ಎಂಬ ಗೀತವನ್ನು ರಚಿಸಿದ ಹೊನ್ನಪ್ಪ (ಹೋನಾಜಿಬಾಳ) ಎಂಬ ಕವಿಯು, ಕನ್ನಡ ದೇಶದಿಂದ ಮಹಾರಾಷ್ಟ್ರಕ್ಕೆ ಹೋಗಿ ನೆಲಸಿದ ಒಬ್ಬ ಕನ್ನಡ ಗವಳಿಗ. ಈ ಅಮರ-ಭೂಪಾಳಿಯ ಮೇಲೂ ಪುರಂದರದಾಸರ ಉದಯರಾಗಗೀತಗಳ ಛಾಯೆ

ಬೀಳದೆ ಇಲ್ಲ. ಈಗ ೩೦-೩೫ ವರ್ಷಗಳ ಹಿಂದೆ, ದಿವಂಗತ ಗೋಪಾಳರಾವ ಸಂಗೋರಾಮ ಎಂಬ ಗೃಹಸ್ಥರೊಬ್ಬರು, 'ದಾಸಶತಪದಿ' ಎಂಬ ಹೆಸರಿನಿಂದ, ದಾಸರ ಒಂದು ನೂರು ಹಾಡುಗಳನ್ನು ಮರಾಠಿಭಾಷೆಗೆ ಭಾಷಾಂತರಿಸಿ ಪ್ರಕಟಿಸಿದ್ದಾರೆ. ಈ ಭಾಷಾಂತರಗೀತಗಳು ಕೆಲವು, 'ವಿವಿಧಜ್ಞಾನ ವಿಸ್ತಾರ' ಎಂಬ ಸುಪ್ರಸಿದ್ಧ ಮರಾಠೀ ಮಾಸಪತ್ರಿಕೆಯಲ್ಲಿಯೂ ಪ್ರಕಟವಾಗಿದ್ದುವು. ಇದೆಲ್ಲವನ್ನೂ ನೋಡಿದರೆ ಪುರಂದರದಾಸರು, ತಮ್ಮ ಜೀವನಕಾಲದಲ್ಲಿಯೂ ತರುವಾಯವೂ ದಕ್ಷಿಣದೇಶದ ಸುಸಂಸ್ಕೃತ ಜನರ ಹೃದಯ-ಮನಗಳಲ್ಲಿ ಎಂತಹ ಆದರದ ಸ್ಥಾನವನ್ನು ಹೊಂದಿದ್ದರೆಂಬುದು ಗೊತ್ತಾಗುತ್ತದೆ.

## IX ಪುರಂದರದಾಸರ ಅಸ್ತಿತ್ವದ ಸಾಕ್ಷ್ಯಗಳು :

ಪುರಂದರದಾಸರ ಅಸ್ತಿತ್ವದ ಬಗೆಗೆ ಪ್ರತ್ಯಕ್ಷ ನಿದರ್ಶನವಾಗಿ ಅವರ ಸಾಹಿತ್ಯರಚನೆಯಂತೂ ಇದ್ದೇ ಇದೆ. ಅಲ್ಲದೆ ಸಂಗೀತ ಶಾಸ್ತ್ರಪ್ರಪಂಚದಲ್ಲಿ ಇದುವರೆಗೂ ಉಳಿದು ಬಂದಿರುವ **'ಕರ್ನಾಟಕ ಸಂಗೀತಶಾಸ್ತ್ರ ಪಿತಾಮಹ'** ಎಂಬ ಬಿರುದೂ ಅವರ ಅಸ್ತಿತ್ವದ ಪ್ರತ್ಯಕ್ಷ ಸಾಕ್ಷಿಯೇ ಸರಿ! ಹಂಪೆಯಲ್ಲಿ ತುಂಗಭದ್ರಾ ತೀರದಲ್ಲಿ ಭದ್ರವಾದ ಬುನಾದಿಯ ಮೇಲೆ ನಿಂತುಕೊಂಡಿರುವ ಪುರಂದರದಾಸರ ಮಂಟಪವೂ, ಆ ಮಂಟಪದಲ್ಲಿಯ ಪುರಂದರದಾಸರ ಕಂಬವೂ ದಾಸರ ಅಸ್ತಿತ್ವವನ್ನು ಸಾರುವ ಭೌತಿಕ ಕುರುಹುಗಳಾಗಿವೆ. ವಿಜಯವಿಟ್ಠಲಸ್ವಾಮಿಯ ಹಾಳುಗುಡಿಯೂ ಯಂತ್ರೋದ್ಧಾರ ಪ್ರಾಣದೇವರೂ ಶ್ರೀವ್ಯಾಸರಾಯರ ಸ್ವಾಮಿಗಳ ಮಠವೂ, ಆನೆಗೊಂದೆಯ ಬಳಿ 'ನವವೃಂದಾವನ'ದಲ್ಲಿ ಇರುವ ಶ್ರೀವ್ಯಾಸರಾಯರ ವೃಂದಾವನವೂ ಪುರಂದರದಾಸರನ್ನು ನೆನಪಿಗೆ ತಂದುಕೊಡುವಂತಹ ಐತಿಹಾಸಿಕ ಸ್ಮಾರಕಗಳೇ ಆಗಿವೆ. ಪಂಢರಪುರದ ವಿಟ್ಠಲದೇವರ ಗುಡಿಯಲ್ಲಿರುವ 'ಪುರಂದರದಾಸರ ಕಂಬ'ವೂ ದಾಸರ ಅಸ್ತಿತ್ವವನ್ನು ಸಾರುವ ಜೀವಂತ ಸ್ಮಾರಕ. ಇವಲ್ಲದೆ, ಹಂಪೆ-ವಿಜಯನಗರಗಳ ಪ್ರದೇಶದಲ್ಲಿ, ಪುರಂದರದಾಸರು ತೋರಿಸಿದ ಪವಾಡದ ಸ್ಥಳಗಳೆಂದು, ಬೇರೆ ಮೂರು ನಾಲ್ಕು ಎಡೆಗಳನ್ನೂ ಭಾವುಕರು ತೋರಿಸುತ್ತಾರೆ. ಪುರಂದರದಾಸರು ಉತ್ತರ-ದಕ್ಷಿಣ ಭಾರತದಲ್ಲಿಯ ಅನೇಕ ತೀರ್ಥ-ಕ್ಷೇತ್ರಗಳಲ್ಲಿ ಸಂಚರಿಸಿ ಬಂದವರು. ಆ

ತೀರ್ಥ-ಕ್ಷೇತ್ರಗಳಲ್ಲಿ ಹಲವಾರು ಕಡೆ ಪುರಂದರದಾಸರ ಸ್ಮಾರಕಸ್ಥಳಗಳಿರ-ಬಹುದು; ಆದರೆ ಪರಂಪರೆಯ ಇತಿಹಾಸಪ್ರಜ್ಞೆಯ ಅಭಾವದ ಮೂಲಕ, ಅವೆಲ್ಲ ಸ್ಮಾರಕಸ್ಥಳಗಳು ಇದುವರೆಗೆ ಅಸಿತ್ತ್ವದಲ್ಲಿ ಇದ್ದರೂ ನಮಗೆ ಗೊತ್ತಾಗುವಂತಿಲ್ಲ.

ಪುರಂದರದಾಸರ ಜೀವನವನ್ನು ಕುರಿತು ನಿಮಗೆ ಹೇಳಲೇಬೇಕಾಗಿದ್ದಿತು. ದೊರೆತ ಸಂಗತಿಗಳನ್ನು ಸಾಧಕ-ಬಾಧಕರೀತಿಗಳಿಂದ ವಿಮರ್ಶಿಸಿ ನಮಗೆ ವಾಸ್ತವವಾಗಿ ಕಂಡ ಜೀವನಚರಿತ್ರೆಯ ವಿಷಯವನ್ನಿಲ್ಲಿ ವಿವರಿಸಲಾ-ಗಿದೆ. ಒಂದೆ ಮಾತಿನಲ್ಲಿ ಹೇಳಬೇಕೆಂದರೆ, ಪುರಂದರದಾಸರ ಅನುಯಾಯಿ ವರ್ಗವೇ ಅವರ ವಾಸ್ತವಜೀವನಚರಿತ್ರೆಯು ವಿಶದವಾಗಿ ನಮಗೆ ತಿಳಿಯು ದಂತೆ ಮಾಡಿಬಿಟ್ಟಿದೆ:—

### X ದಾಸರ ಸಾಹಿತ್ಯನಿರ್ಮಿತಿ

ತಾವು ಯಾವ ಯಾವ ವಿಷಯಗಳನ್ನೆತ್ತಿಕೊಂಡು, ಒಂದೊಂದು ವಿಷಯದ ಬಗೆಗೂ ಎಷ್ಟೆಷ್ಟು ಪದ್ಯಗಳನ್ನು ಬರೆದಿದ್ದೇವೆ—ಎಂಬುದನ್ನು ತಿಳುಹುವ ಪದ್ಯವನ್ನೂ ದಾಸರು ಒಂದು ಹಾಡಿನಲ್ಲಿ ಹೇಳಿದ್ದಾರೆ:—

" ವಾಸುದೇವನ ನಾಮಾವಳಿಯ ಕ್ಲಪ್ತಿಯನು ।
ವ್ಯಾಸರಾಯರ ಪರ್ಯಂತ ವರ್ಣಿಸಿದೆ ನಾನು ॥ ಪ. ॥

ಕೇದಾರ-ರಾಮೇಶ್ವರ-ಕೇರಳದ-ಭೂತಳದ
ಪಾದಾರವಿಂದ ತೀರ್ಥ ಪ್ರತಿಕ್ಷೇತ್ರವ ॥
ಆದರದಿ ಲಕ್ಷ ಇಪ್ಪತ್ತೈದು ಸಾಸಿರ ಕೃತಿಯು
ವೇದ-ಶಾಸ್ತ್ರ-ಪುರಾಣ ಸಮ್ಮತದಲಿ ॥ ೧ ॥

ಸುಳಾದಿ ಅರುವತ್ತುನಾಲ್ಕು ಸಾಸಿರವಾಗಿ
ಬಲು ನಾಮಾವಳಿಯು ಮೂವತ್ತೈದು ಸಾಸಿರವು ॥
ನಲಿದು ಶ್ವೇತದ್ವೀಪಾನಂತಾಸನ ವೈಕುಂಠ
ಸಲೆ ಶೇಷನ ಮಹಿಮೆಯ ಬಣ್ಣಿಸಿದೆನು ॥ ೨ ॥

ಬ್ರಹ್ಮಲೋಕ ಕೈಲಾಸ ಅಷ್ಟದಿಕುಪಾಲಕರ
ಪೆರ್ಮೆಯಿಂದ್ಯೆವತ್ತು ಸಾಸಿರ ಪೇಳಿದೆನು ॥
ಸಮ್ಮತ ಹಲವು ಕಥೆಸಾರ ತೊಂಭತ್ತು ಸಾಸಿರವು
ಒಮ್ಮನದಿ ಪೇಳಿದೆ ಒದಗಿ ಜನರೆಲ್ಲ ಕೇಳಿ ॥ ೩ ॥

ಆಹ್ನಿಕಗುಣ ಜನ್ಮಾಷ್ಟಮಿ ಏಕಾದಶಿ
ನಿರ್ಣಯವ ಶ್ರುತಿ ಸಹಿತ ವರ್ಣಿಸಿದೆನು ॥
ಅನ್ನಘ ಅಗಣಿತ ಮೂರ್ತಿ ಗಂಡಿಕೆ ಶಿಲೆ
ಯನ್ನು ಕಲ್ಯಾಣ ದೇಶ ಆರವತ್ತು ಸಾಸಿರದಿ ॥ ೪ ॥

ಮಧ್ವರಾಯರ ಮಹಾಗುರುಪರಂಪರೆ ಪ್ರ-
ಸಿದ್ಧ ವ್ಯಾಸರಾಯರ ಪರ್ಯಂತರವು ॥
ಶುದ್ಧ ತಂತ್ರಸಾರೋಕ್ತ ನೇಮ ತಾರತಮ್ಯ
ಉದ್ಧರಿಸಿ ನಾ ನಿಮಗೆ ಉರ್ವಿಯಲಿ ಪೇಳಿದೆನು ॥ ೫ ॥

ಅವರವರ ಮೂರ್ತಿಧ್ಯಾನ ಅವರವರ ಕೀರ್ತಿ–ಮಾನ
ವಿವರದಲಿ ನಾ ನಿಮಗೆ ವಿಸ್ತರಿಸಿದೆ ॥
ಹವಣದಿಂದಿಪ್ಪತ್ತೈದು ಸಾಸಿರ ಕೃತಿಯ
ಭುವನದಲಿ ಪೇಳಿದೆನು ಬುಧಜನರೆಲ್ಲ ಕೇಳಿ ॥ ೬ ॥

ಇಂತು ನಾಲ್ಕು ಲಕ್ಷ ಎಪ್ಪತ್ತೊಂಬತ್ತು ಸಾವಿರ ಕೃತಿಯ
ಕಂತು ಜನಕನ ನಾಮ ಘನಮಹಿಮೆಯ ॥
ಸಂತಸದಿ ಶ್ರುತಿ-ಸ್ಮೃತಿ ಪುರಾಣ ಸಮ್ಮತದಿ ಶ್ರೀ—
ಮಂತ ಪುರಂದರವಿಠಲ ವ್ಯಾಸಮುನಿಗೆ ಪೇಳಿಸಿದ ॥ ೭ ॥

ಈ ಹಾಡಿನ ಕೊನೆಯ ಚರಣವನ್ನು ನೋಡಿದರೆ, ಪುರಂದರದಾಸರು ತಾವು ರಚಿಸಿದ ಕೃತಿಗಳನ್ನೆಲ್ಲ ಶ್ರೀ ವ್ಯಾಸರಾಯರೆದುರು ಹಾಡಿತೋರಿಸುತ್ತಿದ್ದರೆಂಬುದು ಗೊತ್ತಾಗುವುದು. ಈ ಹಾಡಿನಲ್ಲಿ ಬಂದಿರುವ ಬೇರೆ ಬೇರೆ ಸಂಖ್ಯೆಗಳನ್ನು ಒಟ್ಟುಗೂಡಿಸಿದರೆ, ೪೪೯೦೦೦ ವಾಗುತ್ತದೆ. ಆದರೆ ಕೊನೆಯ ಪದ್ಯದಲ್ಲಿ ಪುರಂದರದಾಸರ ರಚನೆಗಳು ೪೭೯೦೦೦ ಎಂದು ಗೊತ್ತಾಗುತ್ತದೆ. ಎರಡೂ ಸಂಖ್ಯೆಗಳ ಅಂತರ ೩೦೦೦೦ ವಾಗುವುದು, ಕೊನೆಯಲ್ಲಿ ಹೇಳಿದ ಒಟ್ಟು ಸಂಖ್ಯೆಯನ್ನು ನೋಡಿದರೆ, ಮೇಲಿನ ಪದ್ಯಗಳಲ್ಲಿ ೩೦೦೦೦ ದ ಒಂದು ಸಂಖ್ಯೆ ಬಿಟ್ಟು ಹೋಗಿದೆಯೆಂದು ತೋರುವುದು. ಮೇಲಿನ ಸಂಖ್ಯೆಗಳೆಲ್ಲ ಸರಿಯಾಗಿವೆಯೆಂದರೆ, ಕೊನೆಯ ಒಟ್ಟು ಸಂಖ್ಯೆ ತಪ್ಪಾಗಿದೆಯೆಂದು ಹೇಳಬೇಕಾಗುವುದು, ಹಾಗಾದರೆ ಯಾವುದು ಸರಿ ?

ಪುರಂದರದಾಸರ ಕೃತಿರಚನೆಯ ಒಟ್ಟು: ಸಂಖ್ಯೆಯ ವಿಷಯದಲ್ಲಿ ಸಾಂಪ್ರದಾಯಿಕರಲ್ಲಿ ಒಮ್ಮತವಿದ್ದಂತೆ ಕಾಣುವುದಿಲ್ಲ. ಇಲ್ಲಿ ೪೭೫೦೦೦ ಎಂದಿ

ವ್ದರೆ, ಶ್ರೀಮಾನ್ ಗೋರಾಬಾಳ ಹನುಮಂತರಾಯರಿಂದ ಸಂಪಾದಿತ ಪ್ರತಿಯಲ್ಲಿ ಇದೇ ಹಾಡು ಬೇರೆ ಬೇರೆ ಪಾಠಾಂತರದಲ್ಲಿ ಅಚ್ಚಾಗಿದ್ದು, ಕೃತಿ ಸೂಚಕ ಸಂಖ್ಯೆಗಳು ಬೇರೆ ಬೇರೆಯಾಗಿವೆ. ಅವರು, ದಾಸರ ಕೃತಿಗಳ ಒಟ್ಟು ಸಂಖ್ಯೆಯನ್ನು ೪೭೫೦೦೦ ಎಂದು ಹೇಳಿರುವ ವಿಜಯದಾಸರ ಲೆಕ್ಕಾಚಾರವನ್ನು ಪುರಸ್ಕರಿಸಿ, ಅವರ ಮತದಂತೆಯೆ ಈ ಹಾಡಿನಲ್ಲಿಯ ಸಂಖ್ಯೆಗಳನ್ನು ಸರಿಗೊಳಿಸಿದಂತೆ ತೋರುತ್ತದೆ.

ವಿಜಯದಾಸರು ಒಂದು ಸುಳಾದಿಯಲ್ಲಿ ಪುರಂದರದಾಸರ ಬೇರೆ ಬೇರೆ ವಿಷಯಗಳನ್ನು ಕುರಿತ ರಚನಾಸಂಖ್ಯೆಗಳನ್ನು ಹೀಗೆ ಹೇಳಿದ್ದಾರೆ :

'ಲಕ್ಷದಿಪ್ಪತ್ತೈದು ಸಾವಿರ ಪದಗಳು ಪು-
ಣ್ಯಕ್ಷೇತ್ರ-ತೀರ್ಥಾದಿ ಮಹಿಮೆಯನೆ ಪೇಳಿ ಪ್ರ-
ತ್ಯಕ್ಷವಾದಾ ಗುರು ಮಧ್ವರಾಯರ ಮಹಿಮೆ
ಲಕ್ಷಣಯತಿಗಳ ಸಂತತಿ ತಂತ್ರಸಾರೋಕ್ತ
ಈಕ್ಷಿತಿಯೊಳಗೆ ತಾರತಮ್ಯ ಗುರುಧ್ಯಾನ-
ದಕ್ಷರರವರು ಮಾಡುವ ಮೂರುತಿಧ್ಯಾನ
ತೀಕ್ಷಣದಿಂದಲಿ ಅವರವರ ಚಾರಿತ್ರ್ಯ
ಅಕ್ಷಯದಿಂದ ಇಪ್ಪತ್ತೈದು ಸಾವಿರ
ಅಕ್ಷರಾಕ್ಷರ ಪುರುಷ ವಿಜಯವಿಟ್ಠಲನೆಂದು
ದ್ರಾಕ್ಷಾಪಾಕದಂತೆ ಪೇಳಿದರು ಮುಂದೆ ॥ ೪ ॥

ಸುಳಾದಿಗಳು ಅರುವತ್ನಾಲ್ಕು ಸಾವಿರ
ಬಲುವೃತ್ತನಾಮ ಮೂವತ್ತಾರು ಸಾವಿರ
ಸಲೆ ಶ್ವೇತದ್ವೀಪಾನಂತಾಸನ ವೈಕುಂಠ
ನಳಿನಜನಗರ ಕೈಲಾಸ ದಿಕ್ಪಾಲರ
ನಿಲವರ ಪೇಳುವೆನು ಅರುವತ್ತು ಸಾವಿರ
ಒಲಿದು ಕೇಳಿ ದಶಕಲ್ಯಾಣ ದಶಚರಿತೆ
ತಿಳಿವುದು ನಾಲ್ವತ್ತು ಸಾವಿರ ನಿಜವೆಂದು
ಇಳೆಯ ವಲ್ಲಭ ರಂಗ ವಿಜಯವಿಟ್ಠಲನ
ಕೆಲ ಕಾಲ ಮನದೊಳು ನಿಲಿಸಿ ಕೊಂಡಾಡುತ್ತ ॥ ೫ ॥

ನಿಷ್ಕಾಮ್ಯಾಹ್ನಿಕ ಏಕಾದಶಿ ಕೃಷ್ಣಜನ್ಮದ
ಅಷ್ಟಮಿ ನಿರ್ಣಯ [illegible]

ಸಿಷ್ಟ ಬೋಧಕ ಉಗಾಭೋಗಾದಿಯಾಗಿ
ಕಷ್ಟಹರ ಚಿಲ್ಲರೆ ಕಥೆಯು ಪೀಯೂಷ-
ವಷ್ಟು ಎಪ್ಪತ್ತೈದು ಸಾವಿರ ಮಿಳಿತವು
ಸೃಷ್ಟಿಯೊಳಗೆ ಎಲ್ಲ ಗಣಿತ ಮಾಡಲಾಗಿ
ಒಟ್ಟಿಗೆ ತ್ರಿಪಾದ ಕಡಮೆ ಐದು ಲಕ್ಷ
ಇಷ್ಟಾದುವು ದಾಸರು ಪೇಳಿದ ಪದ
ಇಷ್ಟದೈವನಾದ ವಿಜಯವಿಟ್ಠಲ ಹರಿಯು
ಗುಟ್ಟಿನಿಂದಲಿ ನಲಿಸಿ ಕುಣಿ-ಕುಣಿಸುತಲಿ ॥ ೬ ॥

ಮೇಲಿನ ಸುಳಾದಿ ಪದ್ಯಗಳಲ್ಲಿ ಹೇಳಲಾದ ಬೇರೆ ಬೇರೆ ಸಂಖ್ಯೆಗಳ ಒಟ್ಟು ವಿಜಯದಾಸರ ಮತದಂತೆ 'ತ್ರಿಪಾದ ಕಡಮೆ ಐದು ಲಕ್ಷ' ಎಂದರೆ ನಾಲ್ಕುಲಕ್ಷ ಇಪ್ಪತ್ತೈದು ಸಾವಿರವಾಗುವುದು. ಶ್ರೀ. ಗೊರಾಬಾಳ ಹನುಮಂತ ರಾಯರು ಸಂಗ್ರಹಿಸಿದ ಹಾಡಿನಲ್ಲಿ ವಿಜಯದಾಸರು ಹೇಳಿದ ಸಂಖ್ಯೆಗಳನ್ನೆ ಸರಿಹೊಂದಿಸಿದಂತಿದೆ.

ದಿವಂಗತ ಬೇಲೂರ ಕೇಶವದಾಸರು ತಮ್ಮ 'ಕರ್ನಾಟಕ ಭಕ್ತವಿಜಯ' ಎಂಬ ಗ್ರಂಥದಲ್ಲಿ, ಪುರಂದರದಾಸರ ಕೃತಿಗಳ ಸಂಖ್ಯೆಯನ್ನು ಹೇಳುವಾಗ 'ವಾಸುದೇವನ ನಾಮಾವಳಿಯ ಕ್ಲಪ್ತಿಯನು!' ಎಂಬ ಹಾಡನ್ನೇ ಉದ್ಧರಿಸಿದ್ದಾರೆ. ಅವರು ಪುರಂದರದಾಸರ ಕೃತಿಗಳ ಸಂಖ್ಯೆ ೪ ಲಕ್ಷ ೭೫ ಸಾವಿರ ಎಂಬುದನ್ನು ಪುರಸ್ಕರಿಸಿ, ಆ ಲೆಕ್ಕಕ್ಕೆ ಸರಿ ಹೋಗುವಂತೆ, ಬೇರೆ ಬೇರೆ ವಿಷಯಗಳ ಸಂಖ್ಯೆಗಳನ್ನು ವಿಜಯದಾಸರಿಗಿಂತ ಬೇರೆ ಬೇರೆಯಾದ ಸಂಖ್ಯೆಗಳನ್ನಾಗಿ ಹೊಂದಿಸಿ ಕೊಂಡಂತಿದೆ. ದಾಸರ ಸಾಹಿತ್ಯ ನಮ್ಮ ಜನರ ಕೈಯಲ್ಲಿ ಸಿಕ್ಕು ಎಷ್ಟೆಷ್ಟು ವಿಕೃತಿಗಳನ್ನು ಹೊಂದಿದೆ-ಎಷ್ಟೊಂದು ಕೃತ್ರಿಮತೆಗಳಿಂದ ಕೂಡಿದೆಯೆಂಬುದಕ್ಕೆ, ಪುರಂದರದಾಸರ ಅಂಕಿತದಿಂದ ಕೂಡಿರುವ ಈ ಹಾಡು ಪ್ರತ್ಯಕ್ಷ ನಿದರ್ಶನವಾಗಿದೆ. 'ಪಾದೋನ ಪಂಚಲಕ್ಷ' ಎಂದರೆ ೪೭೫೦೦೦ ಎಂಬ ಸಂಖ್ಯೆಯೆ ನಮ್ಮ ಪರಂಪರೆಯ ಮಾತುಗಳಲ್ಲಿ ಹೆಚ್ಚಾಗಿ ಪ್ರಚಾರದಲ್ಲಿದೆ. ಈ ಮಾತನ್ನು ಹೇಳುವವರು ವಿಜಯದಾಸರ ಸುಳಾದಿಯ ಮಾತುಗಳನ್ನು ಎಣಿಕೆಗೆ ತಂದಿಲ್ಲವೆಂದು ತೋರುವುದು.

ನಾವು ನಮ್ಮ ಪಂಢರಪುರದಲ್ಲಿ ಎತ್ತಿಕೊಂಡ ಹಾಡು, ಸುಮಾರು ೧೦೦

ವರ್ಷಗಳ ಹಿಂದೆ ಮದರಾಸಿನಲ್ಲಿ ಅಚ್ಚಾದ ಹಳೆಯ ಪ್ರತಿಯೊಂದರಿಂದ. ಅದರಲ್ಲಿಯೂ ೩೦೦೦೦ ದ ಒಂದು ಸಂಖ್ಯೆ ಬಿಟ್ಟು ಹೋದಂತೆ ಕಾಣುವುದು. ಅಲ್ಲದೆ ವಿಜಯದಾಸರು ಹೇಳಿರುವ ಕೆಲವು ವಿಷಯವಿಭಾಗಗಳೂ ಇದರಲ್ಲಿ ಇದ್ದಂತಿಲ್ಲ. ಇಷ್ಟೊಂದು ವಿಕಾರಗಳಿಗೆ ಒಳಗಾಗಿರುವ ಈ ಹಾಡು, ಪುರಂದರ ದಾಸರ ರಚನೆಯಾದರೂ ಅಹುದೋ ಅಲ್ಲವೋ ಎಂದು ಚಿಕಿತ್ಸಕ ಬುದ್ಧಿಯ ವರಲ್ಲಿ ಸಂದೇಹವುಂಟಾಗುವುದು ಸಹಜವೇ ಆಗಿದೆ. ಆದರೂ ಸಂಪಾದಕೀಯ ಕರ್ತವ್ಯಬುದ್ಧಿಯಿಂದ ಇದನ್ನು ಆಯ್ದುಕೊಳ್ಳಲಾಗಿದೆ. ಇದರ ಬಗೆಗೆ ಹೆಚ್ಚಿನ ಸಂಶೋಧನೆ ಅಗತ್ಯವಾಗಿದೆ.

ಇನ್ನೂ ಒಂದು ವಿಚಿತ್ರ ಸಂಗತಿಯೆಂದರೆ, ಶ್ರೀ. ಗೊರಾಬಾಳ ಹನುಮಂತರಾಯರು ವಿಜಯದಾಸರದೇ ಎಂದು ಪ್ರಕಟಿಸಿರುವ 'ಬೇಸರಾದೆ ಭಜಿಸಿರೋ ಪುರಂದರದಾಸರಾಯರು' ಎಂಬ ಹಾಡಿನಲ್ಲಿ:

> 'ಲಕ್ಷ್ಮೀಪತಿಯ ಪಾದದಲ್ಲಿ ಲಕ್ಷ್ಯವಿಟ್ಟು ವ್ಯಾಸರಾಯರ
> ಶಿಕ್ಷೆಯಿಂದಲಿ ಅಂಕಿತ ಕೊಳ್ಳುತ – ಪದ ಕೊರತೆ ಐದು
> ಲಕ್ಷ ಪದ ಸುಳಾದಿ ಪೇಳಾತ—'

ಎಂದಿದೆ. ಒಬ್ಬರೇ ಒಬ್ಬರು ವಿಜಯದಾಸರು, ಹಾಡಿನಲ್ಲಿ ಬೇರೆಯ ಸಂಖ್ಯೆ, ಸುಳಾದಿಯಲ್ಲಿ ಬೇರೆಯ ಸಂಖ್ಯೆ— ಹೀಗೆ ಹೇಳುವ ಸಂಭವವಿದೆಯೇ? ಇದರ ವಿಚಾರ ಬಂದುದರಿಂದಲೋ ಏನೋ–ಆ ನುಡಿಯ ನಿಯಮಿತ ಸ್ವರೂಪವು ಕೆಟ್ಟುಹೋಗುವಂತೆ, ಶ್ರೀ. ಗೋರಾಬಾಳ ಅವರ ಸಂಪಾದನೆಯ ಪ್ರತಿಯಲ್ಲಿ 'ತ್ರಿಪಾದ ಕೊರತೆ ಲಕ್ಷವೈದು ಪದಗಳ ಪೇಳುತ್ತ!' ಎಂಬ ಹೆಚ್ಚಿನ ಚರಣವೊಂದನ್ನು ಸೇರಿಸಲಾಗಿದೆ. ಈ ಅಧಿಕಪ್ರಸಂಗ, ಯಾವ ಪರಂಪರಾದಿಯೊಬ್ಬನ ಹಟದಿಂದ ನಡೆದಿದೆಯೋ— ಏನೋ! ಇಷ್ಟೇ: ಈ ಹಾಡು ವಿಜಯದಾಸರ ರಚನೆಯಲ್ಲ— ಎಂಬ ಅಭಿಪ್ರಾಯವನ್ನು, ಇಲ್ಲಿಯ ತಿದ್ದುಪಡಿಯ ಸಂಗತಿಯೂ ಪರಿಪೋಷಿಸುತ್ತದೆ. ಇಷ್ಟೆಲ್ಲ ನಮ್ಮ ವಿವೇಚನೆಯನ್ನು ನೋಡಿದವರಿಗೆ, ದಾಸರ ಸಾಹಿತ್ಯವನ್ನು ಪ್ರಮಾಣಶೀಲವೆನಿಸುವಂತೆ ಸಂಪಾದಿಸುವುದು ಎಷ್ಟೊಂದು ಕಠಿಣ ಕಾರ್ಯವೆಂಬುದು ಮನವರಿಕೆಯಾಗದಿರದು.

# ೧೧ ಅಭಿನಂದನೆ - ಧನ್ಯವಾದಗಳು

---

ಶ್ರೀಪುರಂದರದಾಸರ ಸಾಹಿತ್ಯ ಸಂಪಾದನೆಯ ಕಾರ್ಯವನ್ನು, ಅಖಿಲ ಕರ್ನಾಟಕ ಪುರಂದರದಾಸರ ೬೦೦ ನೆಯ ವರ್ಷದ ಉತ್ಸವಸಮಿತಿಯವರು, ನಂಬುಗೆಯಿಟ್ಟು ನಮ್ಮ ಕಡೆಗೆ ಒಪ್ಪಿಸಿದರು. ಅವರ ನಂಬುಗೆಗಾಗಿ ನಾವು ಎಷ್ಟೊಂದು ಧನ್ಯವಾದಗಳನ್ನು ಅರ್ಪಿಸಿದರೂ, ತೀರದಂತಹ ಉಪಕಾರ ಭಾರ ಅವರದು. ಅವರೇ ಈ ಕಾರ್ಯಕ್ಕೆ ಮೂಲ ಬಂಡವಾಳವಾದ ಹಳೆಯ ಕಾಲದ ಹಸ್ತಪ್ರತಿಗಳನ್ನೂ ಮುದ್ರಿತಗ್ರಂಥಗಳನ್ನೂ ಒದಗಿಸಿಕೊಟ್ಟರು. ಸಂಪಾದನೆಯ ಕಾರ್ಯಕ್ಕೆ ಆವಶ್ಯಕವಾದ ಬೇರೆ ಸಲಕರಣೆಗಳನ್ನೂ ಒದಗಿ ಸಿಕೊಟ್ಟರು. ಸಲಹೆ-ಸೂಚನೆಗಳಿಗಾಗಿ ವಿದ್ವಾಂಸರ ಮಂಡಲಿಯೊಂದನ್ನು ರಚಿಸಿಕೊಟ್ಟರು. ಇಷ್ಟೆಲ್ಲ ಅನುಕೂಲತೆಗಳನ್ನು ಕಲ್ಪಿಸಿಕೊಟ್ಟು ನಮ್ಮಿಂದ ಒಂದು ಮಹಾಕಾರ್ಯವನ್ನು ಮಾಡಿಸಿದ ಸಂಪೂರ್ಣ ಶ್ರೇಯಸ್ಸು ಉತ್ಸವ ಮಂಡಲಕ್ಕೆ ಸಲ್ಲಬೇಕು. ಅದಕಾಗಿ ಮಂಡಲಕ್ಕೆ ನಾವು ನಮ್ಮ ಹೃತ್ಪೂರ್ವಕ ಅಭಿವಂದನೆಗಳನ್ನು ಸಲ್ಲಿಸುತ್ತೇವೆ.

ಉತ್ಸವಮಂಡಲದ ಅಧ್ಯಕ್ಷರಾದ ಶ್ರೀಮಾನ್ ಅಸುಂಡಿ ಅನಂತ ರಾಯರು, ಸಮಾಜಹಿತದ ಪ್ರಜ್ಞೆಯುಳ್ಳವರು; ದಾಸಸಾಹಿತ್ಯದ ಅಭಿಮಾನಿ ಗಳು; ಅದರ ಪ್ರಚಾರ-ಪ್ರಸಾರಗಳ ಬಗೆಗೆ ಆಸಕ್ತಿ ವಹಿಸಿ, ಸಾಕಷ್ಟು ಆರ್ಥಿಕ ಸಹಾಯವನ್ನು ನೀಡಿದವರು. ವಯಸ್ಸು ಇವರ ದೇಹವನ್ನು ಹಣ್ಣುಗೊಳಿಸಿ ದ್ದರೂ, ಕಾರ್ಯೋತ್ಸಾಹ ತರುಣರನ್ನೂ ಮೀರಿಸುವಂತಹದಿದೆ. ಅಧ್ಯಕ್ಷ ತೆಯ ಮನ್ನಣೆಯ ಪೀಠವನ್ನಿವರು ಕೇವಲ ವೈಯಕ್ತಿಕ ಮರ್ಯಾದೆಯೆಂದು ಭಾವಿಸದೆ, ಈ ಸಂಕಲನಗಳ ಸಂಪಾದನೆ-ಪ್ರಕಟನೆಗಳಿಗಾಗಿ ಸಾಕಷ್ಟು ನೆರ ವನ್ನು ಕೊಟ್ಟಿದ್ದಾರೆ. ಶ್ರೀಪುರಂದರದಾಸರ ಮಾಹಾತ್ಮ್ಯ ಪ್ರಭಾವದಿಂದಲೇ ಇಂತಹ ಯೋಗ್ಯ ಅಧ್ಯಕ್ಷರು, ಉತ್ಸವಮಂಡಲಕ್ಕೆ ದೊರೆತರೆನ್ನಬಹುದು. ನಮ್ಮ ಸಂಪಾದಕೀಯ ಕಾರ್ಯವನ್ನು ತುಂಬ ಸ್ನೇಹ-ಸೌಹಾರ್ದದಿಂದ

ಕಂಡ ಮಾನ್ಯ ಅಸುಂಡಿ ಅನಂತರಾಯರಿಗೆ ನಮ್ಮ ವಿನಯದ ವಂದನೆಗಳನ್ನು ಸಲ್ಲಿಸುತ್ತೇವೆ.

ದಾಸರ ಉತ್ಸವದ ಮಹಾಮಂಡಲವೂ ಕಾರ್ಯಕಾರಿಮಂಡಲವೂ ನಮ್ಮನ್ನು ತುಂಬ ಆತ್ಮೀಯತೆಯಿಂದ ಕಂಡು, ನಮ್ಮ ಕಾರ್ಯವನ್ನು ಗೌರವಿಸಿತು. ಅದಕ್ಕಾಗಿ ಎರಡೂ ಮಂಡಲಗಳ ಸದಸ್ಯರಿಗೆ ಒಟ್ಟಾಗಿಯೂ ವೈಯಕ್ತಿಕವಾಗಿಯೂ ನಮ್ಮ ಕೃತಜ್ಞತೆಗಳನ್ನು ಸಮರ್ಪಿಸುತ್ತೇವೆ.

ಮೊದ-ಮೊದಲು ನಮಗೆ ಸಾಕಷ್ಟು ಮೂಲಪ್ರತಿಗಳು ದೊರೆತಿರಲಿಲ್ಲ. ಬರಬರುತ್ತ ಹೆಚ್ಚು ಪ್ರಮಾಣಶೀಲವಾದ ಹಸ್ತಪ್ರತಿಗಳು ನಮಗೆ ದೊರೆಯತೊಡಗಿದುವು. ಎಂತಲೇ ಮೊತ್ತಮೊದಲನೆಯ ಸಂಕಲನವಾದ 'ಪೂಜಾ-ತತ್ತ್ವ'ದ ಸಂಪಾದನೆಯ ಕಾರ್ಯದಲ್ಲಿ ಕೆಲವೊಂದು ಕೊರತೆಗಳು ಅನಿವಾ-ರ್ಯವಾಗಿ ಸೇರಿಕೊಂಡಿವೆ. ಕಣ್ಣುತಪ್ಪಿನ ಮೂಲಕ ಒಂದೆರಡು ಹಾಡು-ಉಗಾಭೋಗಗಳು ಎರಡೆರಡು ಸಲ ಅಚ್ಚಾದುದೂ ಉಂಟು. ಅದರಂತೆಯೆ ಸುಳಾದಿಭಾಗಗಳು ಕೆಲವು ಉಗಾಭೋಗಗಳೆಂದು ಪ್ರಕಟವಾದುದೂ ಉಂಟು. ಮುಂದಿನ ಭಾಗಗಳಲ್ಲಿ ಈ ಬಗೆಯ ಕೊರತೆಗಳು ಉಳಿಯದಂತೆ ಸಾಕಷ್ಟು ಲಕ್ಷ್ಯವನ್ನು ಕೊಡಲಾಗಿದೆ. ಆದರೂ ಮಾನವಮಾತ್ರರಿಗೆ ಅಜ್ಞಾನ ವಿಸ್ಮೃತಿ-ಭ್ರಾಂತಿಗಳು ಸ್ವಭಾವಸಿದ್ಧ. ಇವುಗಳ ಮೂಲಕ ಕೊರತೆಗಳೇನಾ-ದರೂ ಉಳಿದಿದ್ದರೆ, ದಾಸಸಾಹಿತ್ಯಾಭ್ಯಾಸಿಗಳು ನಮಗೆ ಬರೆದು ತಿಳುಹಬೇಕು. ಸಮಂಜಸ ಸೂಚನೆಗಳನ್ನು ಕೃತಜ್ಞತೆಗಳೊಂದಿಗೆ ಸ್ವೀಕರಿಸಿ, ಮುಂದಿನ ಆವೃತ್ತಿಯಲ್ಲಿ ಕೊರತೆಗಳನ್ನು ಕಡಮೆಮಾಡಲಾಗುವುದು. ಸಂಪಾದನೆಯ ಕಾಲದಲ್ಲಿ ಅನೇಕ ವಿದ್ವಾಂಸರು ನಮಗೆ ಸಲಹೆ-ಸೂಚನೆಗಳನ್ನಿತ್ತು ಸಹಕರಿಸಿದ್ದಾರೆ. ಅವರಿಗೆಲ್ಲ ನಾವು ಧನ್ಯವಾದದೊಂದಿಗೆ ನಮ್ಮ ವಂದನೆಗಳನ್ನು ಸಲ್ಲಿಸುತ್ತೇವೆ.

ಕರ್ನಾಟಕದ ಎಲ್ಲ ಭಾಗದಲ್ಲಿಯ ಶ್ರೀದಾಸಸಾಹಿತ್ಯಪ್ರಿಯರೂ, ನಮಗೆ ತಮ್ಮಲ್ಲಿದ್ದ ಲಿಖಿತಸಂಗ್ರಹವನ್ನೂ ಮುದ್ರಿತಗ್ರಂಥಗಳನ್ನೂ ಉದಾರಬುದ್ಧಿಯಿಂದ ನಮ್ಮ ಉತ್ಸವಮಂಡಲದ ಕಡೆಗೆ ಒಪ್ಪಿಸಿದರು. ಇವರೆಲ್ಲರ ಸಹಾನುಭೂತಿ-ಸಹಕಾರಗಳಿಲ್ಲದೆ ಹೋಗಿದ್ದರೆ, ನಮ್ಮಿಂದ ಯಾವ ಕೆಲಸವೂ ಆಗುತ್ತಿರಲಿಲ್ಲ. ಇದಿನ್ನೂ ಅಷ್ಟಕ್ಕೆ ಪೂರ್ಣಗೊಂಡಂತಿಲ್ಲ. ಮೂಲ

ಗ್ರಂಥಗಳನ್ನು ಒದಗಿಸಿಕೊಟ್ಟ ಎಲ್ಲ ಮಹನೀಯರಿಗೂ ನಮ್ಮ ಅನಂತ ಅಭಿವಂದನೆಗಳು.

ಈ ಸಾಹಿತ್ಯಸಂಕಲನಗಳ ಪ್ರಕಟನೆಗೆ ಅನೇಕ ಜನರಿಂದ ನಮಗೆ ಆರ್ಥಿಕಸಹಾಯವು ದೊರೆತಿದೆ. ಮಂಡಲಕ್ಕೆ ಸದಸ್ಯರಾದವರಂತೂ ಸರಿಯೇ ಸರಿ! ಕೆಲವೊಂದು ಜನರು, ಯಾವ ಪ್ರತಿಫಲವನ್ನೂ ಆಶಿಸದೆ ಶಕ್ತ್ಯಾನುಸಾರ ಕಾಣಿಕೆಗಳನ್ನು ಸಲ್ಲಿಸಿದ್ದಾರೆ. ಬೆಂಗಳೂರಿನ ಮಿತ್ರಮಂಡಲಿಯ ಸದಸ್ಯರೆಲ್ಲ ಸೇರಿ, ಒಂದು ಗ್ರಂಥ ಪ್ರಕಟನೆಯ ಭಾರವನ್ನು ವಹಿಸಿದರು. ಶ್ರೀ ಶ್ರೀ ಪೇಜಾವರ ಮಠಾಧೀಶರೂ, ಶ್ರೀ ಶ್ರೀ ಭಂಡಾರಕೆರೆಯ ಶ್ರೀಪಾದಂಗಳವರೂ, ಪ್ರಕಟನೆಯ ಕಾರ್ಯಕ್ಕೆ ತಮ್ಮ ಆಶೀರ್ವಾದದೊಂದಿಗೆ ಅರ್ಥವನ್ನೂ ದಯೆ ಪಾಲಿಸಿದ್ದಾರೆ. ಮಂಡಲವು ಆರ್ಥಿಕ ಅಭಾವದ ಮೂಲಕ ಕೈಸೋತು ನಿಂತಾಗ, ದಿಲ್ಲಿಯ ಕೇಂದ್ರ ಸರಕಾರವು ಧನಸಹಾಯವನ್ನು ಮಾಡಿ, ದಾಸರ ಸಾಹಿತ್ಯ ಪ್ರಕಟನೆಯ ಕಾರ್ಯವನ್ನು ಪೂರ್ಣಗೊಳಿಸಿತು. ಮಾನ್ಯ ಶ್ರೀ. ದಿವಾಕರ ರಂಗರಾಯರು ಈ ೬ನೆಯ ಸಂಕಲನದ ಮುದ್ರಣವೆಚ್ಚದ ಹೊಣೆಯನ್ನು ಅಭಿಮಾನದಿಂದ ವಹಿಸಿಕೊಂಡು, ತಮ್ಮ 'ಸಂಯುಕ್ತ ಕರ್ನಾಟಕ' ಮುದ್ರಣಾಲಯದಲ್ಲಿ ಮುದ್ರಿಸಿಕೊಡುವ ಏರ್ಪಾಡನ್ನು ಮಾಡಿದರು. ಈ ಎಲ್ಲ ಹಿರಿಯ, ಕಿರಿಯ ದಾನಿಗಳೆಲ್ಲರಿಗೂ ನಮ್ಮ ಕೃತಜ್ಞತೆಯ ಪೊಡಮಡಕೆಗಳನ್ನು ಒಪ್ಪಿಸುವೆವು.

ಉತ್ಸವಮಂಡಲದ ಅಪೇಕ್ಷಿತ ಕಾರ್ಯವು ಪೂರ್ತಿಯಾಗುವುದಕ್ಕೆ ಅನೇಕ ಮಹನೀಯರಿಂದ ನಮಗೆ ಅನೇಕ ಬಗೆಯ ನೆರವು ದೊರೆತಿದೆ. ಡಾ. ಸರೋಜಿನಿ ಮಹಿಷಿ, ಎಂ.ಪಿ. ಅವರಿಂದ ನಮಗೆ ದೊರೆತ ಸಹಾಯ ಮರೆಯಲಾರದಂತಹದು. ಪುರಂದರದಾಸರ ಮಹಿಮೆಯೇ, ಅವರ ಹೃದಯದಲ್ಲಿ ಸಹಾಯಭಾವವನ್ನು ಹುಟ್ಟಿಸಿತೆಂದು ಭಾವಿಸುವಂತಿದೆ. ಡಾ. ಸರೋಜಿನಿ ಮಹಿಷಿಯವರಿಗೂ ಮಿಕ್ಕ ಸಹಕಾರಿಗಳಿಗೂ ನಮ್ಮ ಆತ್ಮೀಯ ಭಾವದ ಧನ್ಯವಾದಗಳು.

ನಮ್ಮ ಸಂಪಾದಕೀಯ ಕಾರ್ಯದಲ್ಲಿ, ಸರ್ವವಿಧದಿಂದಲೂ ನಿರಪೇಕ್ಷ ಸಹಾಯವನ್ನು ಸಲ್ಲಿಸಿದ ಡಾ. ಕಮಲಾಪುರ ಕಾಂತರಾಯರ ಉಪಕಾರ ಅವಿಸ್ಮರಣೀಯವಾದುದು. ನಮ್ಮ ಸಂಪಾದಕೀಯ ಕಾರ್ಯಾಲಯ ಅವರ

ಮನೆಯ ಅಚ್ಚುಕಟ್ಟಾದ ಮಹಡಿಯ ಮೇಲೆ. ಕಾರ್ಯಾಲಯದ ಓರಣವನ್ನು ನೋಡಿಕೊಳ್ಳುವುದು ಅವರದೇ ಕಾರ್ಯ. ಕಾರ್ಯದ ಮಂಗಲಾಚರಣ, ಉಪಸಂಹಾರಗಳ ಹೊಣೆಯನ್ನು ಸ್ವಪ್ರೇರಣೆಯಿಂದಲೇ ವಹಿಸಿಕೊಂಡಿದ್ದರು. ಇಷ್ಟೇ ಅಲ್ಲ ; ನಮ್ಮ ಕಾರ್ಯಶ್ರಮ ಪರಿಹಾರ, ನಮ್ಮ ಯೋಗಕ್ಷೇಮ ಇವುಗಳ ಭಾರವನ್ನು ಡಾ. ಕಾಂತರಾಯರ ಸಹಧರ್ಮಿಣಿ ಸೌ. ರಾಧಾಬಾಯಿಯವರು, ಎರಡು ವರುಷಗಳ ಕಾಲ ಬೇಸರವಿಲ್ಲದೆ ಹೊತ್ತು, ಕರ್ತವ್ಯಬುದ್ಧಿಯಿಂದ ನಮಗೆ ನೆರವನ್ನು ಕೊಟ್ಟರು. ಈ ದಂಪತಿಗಳ ಉಪಕಾರವನ್ನು ಸಂಪಾದಕರಾದ ನಾವಿಬ್ಬರೂ ಎಂದೂ ಮರೆಯಲಾರೆವು. ನಾವು ಕೃತಜ್ಞತೆಗಳನ್ನು ಸಮರ್ಪಿಸಿದರೂ ಅದನ್ನು ಒಪ್ಪದ ನಿಸ್ಪೃಹಿಗಳು ಈ ದಂಪತಿಗಳು.

ಈ ಪ್ರಕಟನೆಯೊಂದಿಗೆ, ಉತ್ಸವಮಂಡಲವು ಸಾಂದರ್ಭಿಕವಾಗಿ ಮುಂದಿಟ್ಟುಕೊಂಡ ಕಾರ್ಯವನ್ನು ಮುಗಿಸಿ, ಕೃತಕೃತ್ಯತೆಯ ಸಮಾಧಾನದ ಉಸಿರನ್ನು ಬಿಡುವಂತಾಯಿತು. ಆದರೆ ಈ ಮಂಡಲವು ಮುಂದುವರೆದು, ತನ್ನ ಕಾರ್ಯದೃಷ್ಟಿಯನ್ನು ವಿಸ್ತಾರಗೊಳಿಸಿದರೆ, ಪ್ರಮುಖರಾದ ಬೇರೆ ಹರಿದಾಸರ ಸಾಹಿತ್ಯವನ್ನು ಸಂಪಾದಿಸಿ ಪ್ರಕಟಿಸುವ ಕಾರ್ಯವನ್ನೂ ಕೈಕೊಳ್ಳಬಹುದಾಗಿದೆ. ಹಾಗಾದರೆ, ಪುರಂದರದಾಸರ ಈ ಉತ್ಸವ ಮಂಡಲವು, ಕನ್ನಡನಾಡಿಗೆ ಅತ್ಯವಶ್ಯವಾಗಿರುವ ಮಹಾಕಾರ್ಯವೊಂದನ್ನು ಸಂಪೂರ್ಣವಾಗಿ ಸಾಧಿಸಿದಂತಾಗುವುದು. ಅಂತಹ ಕಾರ್ಯವು ಈ ಸಂಸ್ಥೆಯ ಮುಖಾಂತರವಾಗಿಯೇ ನಡೆಯಲೆಂದೂ ಹರಿದಾಸರ ಹೃದಯದೈವತ ಶ್ರೀಪಾಂಡುರಂಗವಿಠಲನ ಅನುಗ್ರಹದಿಂದ ಅದು ಪರಿಪೂರ್ಣವಾಗಲೆಂದೂ ಹಾರಯಿಸಿ, ನಮ್ಮ ಮಾತನ್ನು ನಾವು ಮುಗಿಸುತ್ತೇವೆ.

ಧಾರವಾಡ<br>೧೨-೧೧-೧೯೬೫ }

ಬೆಟಗೇರಿ ಕೃಷ್ಣಶರ್ಮ<br>ಬೆಂಗೇರಿ ಹುಚ್ಚರಾಯ

---

# ಅಂಕಿತ ಅಥವಾ ಮುದ್ರಿಕೆ

ಮುದ್ರಿಕೆಯಿಲ್ಲದ ಮೂವತ್ತು ಪದವೆಂಬುದು ಹೊಸಗನ್ನಡ ನಾಣ್ನುಡಿ ಯಾದರೂ ಅದರಲ್ಲಿ ಅಡಗಿದ ಪರಂಪರೆ ಸಾವಿರಾರು ವರ್ಷಗಳಿಂದ ನಡೆದು ಬಂದಿದೆಯೆಂಬುದು ಅದರಿಂದ ಧ್ವನಿತವಾಗುತ್ತಿದೆ. ಅಚ್ಚುಕೂಟಗಳು ೧೮೫೦ ರಿಂದ ಈಚೆಗೆ ಪ್ರಚಾರದಲ್ಲಿ ಬಂದವು. ಇದಕ್ಕೂ ಮೊದಲು ಗ್ರಂಥ ಕಾರರು, ಕವಿಗಳು ತಮ್ಮ ಅಂಕಿತ ಅಥವಾ ತಮ್ಮ ಹೆಸರುಗಳನ್ನು ತಮ್ಮ ಗ್ರಂಥ ಅಥವಾ ಕಾವ್ಯಗಳ ಪ್ರತಿಯೊಂದು ಆಶ್ವಾಸದ ಕೊನೆಯ ಪದ್ಯದಲ್ಲಿ ಅಥವ ಆಶ್ವಾಸಾಂತ್ಯಗದ್ಯದಲ್ಲಿ ಕಾಣಿಸುತ್ತಿದ್ದರು. ಗ್ರಂಥಕಾರನಾಗಲಿ ಕವಿಯಾ-ಗಲಿ ರಚಿಸಿದ ಗ್ರಂಥ ಅಥವಾ ಕಾವ್ಯಸಾಹಿತ್ಯರೂಪದಲ್ಲಿ ಸಮಾಜದ ಅಮೂಲ್ಯ ಸೊತ್ತಾದುದರಿಂದ ಸಾಮಾಜಿಕರು ಅದರ ಮಹತ್ವವನ್ನು ಒಪ್ಪಿ ತನ್ನ ಅಂಕಿತ ವನ್ನು ಗ್ರಂಥದಲ್ಲಿ ಕಾಣಿಸಲು ಗ್ರಂಥಕಾರನಿಗೆ ತಮ್ಮ ಸಮ್ಮತಿಯನ್ನು ತಿಳಿಸು ತ್ತಿದ್ದರೆಂಬುದು ಪಂಪಭಾರತದ ೧ ನೆಯ ಅಧ್ಯಾಯದ ಆರಂಭದ ಪದ್ಯ ಗಳಿಂದ ಸ್ಪಷ್ಟವಾಗುತ್ತದೆ. ಪಂಪನು ನುಡಿದ ಈ ಪರಂಪರೆ ಅನಾದಿಕಾಲ ದಿಂದ ನಡೆದುಬಂದಿರಬೇಕೆಂಬುದನ್ನು ಯಾರಾದರೂ ಊಹಿಸಬಹುದಾಗಿದೆ.

ವೇದಾಂತದ ತತ್ತ್ವಗಳನ್ನು ಸಾಧಾರಣವಾಗಿ ಅಳವಡಿಸಿಕೊಂಡ ಪ್ರತಿ ಯೊಬ್ಬ ಭಾರತೀಯನು ನಾನು ಎನ್ನುವದು ಅಹಂಕಾರದ ಲಕ್ಷಣವೆಂಬು ದನ್ನು ಚೆನ್ನಾಗಿ ಅರಿತುಕೊಂಡು ತಾನು ಮಾಡಿದ ಗ್ರಂಥ ರಚನೆಯಲ್ಲಿ ತನ್ನ ಹೆಸರು ಕಾಣಿಸದೆ ಬಿಡುವದನ್ನು ಸಂಸ್ಕೃತ ನಾಟಕ ಮುಂತಾದ ಗ್ರಂಥಗಳ ಮುನ್ನುಡಿಕಾರರು ಸೂಚಿಸಿದ್ದಾರೆ. ಪಾಶ್ಚಾತ್ಯರಿಗೆ ಇದು ಅಸಾಮಾಜಿಕ ವೆಂದೂ ಕಂಡಿದೆಯಾದರೂ ನಮ್ಮ ಗ್ರಂಥಕಾರರು ಈ ವಿಷಯಕ್ಕೆ ಹೊರತಾ ಗಿಲ್ಲ. ಆದ್ದರಿಂದ ಅವರು ತಮ್ಮ ಹೆಸರನ್ನು ಬಿಟ್ಟು ತಮ್ಮ ಕುಲದೇವರ ಹೆಸರನ್ನೊ ತಾವು ಭಕ್ತಿಪೂರ್ವಕವಾಗಿ ಆರಾಧಿಸುವ (ಆರಾಧ್ಯ) ದೇವರ

ಹೆಸರನ್ನೊ ತಮ್ಮ ಗ್ರಂಥಗಳ ಕೊನೆಯಲ್ಲಿ ಸೂಚಿಸುತ್ತಿದ್ದರು. ಮಧ್ಯಕಾಲದಲ್ಲಿ ಪರಕೀಯರ ದಾಳಿಯಿಂದ ಪರಂಪರೆ ಹರಿಗಡಿದುದರಿಂದ ಅಂಕಿತವಿದ್ದ ಕವಿಗಳ ಹೆಸರು ದುರ್ದೈವದಿಂದ ಕಣ್ಮರೆಯಾಗಿವೆ.

ಉದಾ-ಕವಿ ಕುಲತಿಲಕ ಮಂ.

ಐತಿಹಾಸಿಕ ದೃಷ್ಟಿಯಿಂದ ವಿಚಾರಮಾಡಿದರೆ ಈ ಪರಂಪರೆ ವೇದಕಾಲದಲ್ಲಿ ಆರಂಭವಾಯಿತೆಂಬುದಕ್ಕೆ ಆಧಾರಗಳಿವೆ. ಮೋಹನ್‌ಜ್ಯೋದಡೋ ಹರಪ್ಪಾ (ಪಾಕಿಸ್ತಾನ್)ಗಳಲ್ಲಿ ದೊರೆತ ಲಿಪಿಗಳ ಅಕ್ಷರಗಳ ಅರ್ಥವಿನ್ನೂ ಸ್ಪಷ್ಟವಾಗಿಲ್ಲ. ಆದುದರಿಂದ ಆ ಕಾಲವನ್ನು ಈಗ ಬಿಟ್ಟುಕೊಟ್ಟರೆ ವೇದಕಾಲದಲ್ಲಿ ಅಂಕಿತ ಬರೆಯುವ ಸಾಮಾಜಿಕ ಪರಂಪರೆ ಮಂತ್ರ ದ್ರಷ್ಟಾರರ ಹೆಸರನ್ನು ಉಚ್ಚರಿಸುವಾಗ ನೆನಪಿಗೆ ಬರುತ್ತಿದೆ. ಋಗ್ವೇದದ ೩ನೆಯ ಮಂಡಲವನ್ನು ವಿಶ್ವಾಮಿತ್ರರು ೭ ನೆಯ ಮಂಡಲವನ್ನು ವಸಿಷ್ಠರು ಮಂತ್ರ ದ್ರಷ್ಟಾರರಾಗಿ ಬರೆದ ಪರಂಪರೆಯನ್ನು ಈ ಮಂಡಲಗಳ ಮಂತ್ರಪಠನ ಮಾಡುವಾಗ ಎದ್ದು ಕಾಣುತ್ತಿದೆ. ಆಯಾ ಮಂಡಲಗಳಲ್ಲಿ ಅವರ ಹೆಸರುಗಳು ಕಾಣದಿದ್ದರೂ ಅವರ ತರುವಾಯದವರು ಆಯಾ ಮಂಡಲದ ಮಂತ್ರ ಪಠನ ಕಾಲದಲ್ಲಿ ಮಂತ್ರ ದ್ರಷ್ಟಾರರಾದ ಋಷಿ, ಅವರು ರಚಿಸಿದ ಮಂತ್ರ, ಮಂತ್ರದ ಅಧಿದೇವತೆ ಹಾಗು ಮಂತ್ರದ ಛಂದಸ್ಸನ್ನು ಉಚ್ಚರಿಸಿ ಮುಂದಿನ ಕಾರ್ಯ ಕೈಕೊಳ್ಳುವ ರೂಢಿ ಇಂದಿಗೂ ನಡೆದುಬಂದಿದೆ. ಉದಾ: ಗಾಯತ್ರಿ ಮಂತ್ರದ ಉದಾಹರಣೆ ತೆಗೆದುಕೊಳ್ಳಿರಿ. ಅದನ್ನು ಪಠಿಸುವಾಗ ಸವಿತೃ ದೇವತಾ ಗಾಯತ್ರೀ ಛಂದಃ ವಿಶ್ವಾಮಿತ್ರ ಋಷಿಃ ಈ ಮೂರು ಪದಗಳು ತಪ್ಪದೆ ಬರುತ್ತಿವೆ. ಇಲ್ಲಿ ಕಾಣುವ ವಿಶ್ವಾಮಿತ್ರ ಪದವು ಮೂಲ ಋಕ್ಕಿನಲ್ಲಿಲ್ಲ. ಆದರೆ ತರುವಾಯದವರು ಆ ಪರಂಪರೆಯನ್ನು ಹೀಗೆ ಕಾಯ್ದುಕೊಂಡು ಬಂದಿದ್ದಾರೆ. ಇದೇ ರೀತಿಯಲ್ಲಿ ವೇದದ ಯಜ್ಞ ಕಾಂಡವನ್ನು ವಿವರಿಸುವ ಬ್ರಾಹ್ಮಣವೆಂಬ ಗ್ರಂಥಗಳು ಭಾರತೀಯ ತತ್ತ್ವಶಾಸ್ತ್ರದ ಪ್ರಾಥಮಿಕ ವಿವರಣೆಗಳುಳ್ಳ ಆರಣ್ಯಕಗಳೆಂಬ ಗ್ರಂಥಗಳು ಮತ್ತು ವೇದಾಂತವೆಂಬ ಅನ್ವರ್ಥಕ ಹೆಸರಿರುವ ಉಪನಿಷತ್ತುಗಳು ಇವುಗಳ ದ್ರಷ್ಟಾರರ ಹೆಸರುಗಳನ್ನು ಅವರ ತರುವಾಯದವರು ಕಾಯ್ದಿರಿಸಿದ್ದಾರೆ. ಉದಾ: ಐತರೇಯ ಬ್ರಾಹ್ಮಣ (ಇತರಾ ಅಥವಾ ಇತರ ಋಷಿಕೃತ) ಐತರೇಯ ಉಪನಿಷತ್ತು. ಐತರೇಯ ಆರಣ್ಯಕ.

ಇದೇ ಪರಂಪರೆ ಸ್ಮೃತಿ ವ್ಯಾಕರಣ ಯೋಗ ಸೂತ್ರ ಮುಂತಾದ ಗ್ರಂಥಗಳಿಗೂ ಅನ್ವಯಿಸುತ್ತಿದೆ. ಮನುಸ್ಮೃತಿಯಲ್ಲಿ ಮನುವಿನ ಹೆಸರಿಲ್ಲದಿದ್ದರೂ ಪರಂಪರೆ ಅದನ್ನೇ ಸಮರ್ಥಿಸುತ್ತಿದೆ. ಹಾಗೆಯೆ ಶಾಕಟಾಯನ ಪಾಣಿನಿ, ಪತಂಜಲಿ, ವ್ಯಾಸ ಮುಂತಾದವರು ವ್ಯಾಕರಣ, ಯೋಗ, ಬ್ರಹ್ಮ-ಸೂತ್ರ ಮುಂತಾದ ಗ್ರಂಥಗಳ ಕರ್ತೃಗಳೆಂಬುದನ್ನು ನಮ್ಮ ಹಿರಿಯರು ತಿಳಿಸುತ್ತ ಬಂದಿದ್ದಾರೆ. ಮಹಾಭಾರತ, ರಾಮಾಯಣ ಮುಂತಾದ ಐತಿಹಾಸಿಕವೆಂದು ಪ್ರಸಿದ್ಧವಾದ ಗ್ರಂಥಗಳಲ್ಲಿ ಅವರ ಹೆಸರಿಲ್ಲವಾದರೂ ಪರಂಪರೆಯ ಆಧಾರವು ಸಾಧಾರವಾಗಿದೆ. ಸಂಸ್ಕೃತ ನಾಟಕಕಾರರ ಗತಿಯೂ ಇದೇ ಆಗಿದೆ. ಅವರು ತಮ್ಮ ಹೆಸರುಗಳನ್ನಾಗಲಿ ಅಂಕಿತಗಳನ್ನಾಗಲಿ ತಮ್ಮ ನಾಟಕಗಳಲ್ಲಿ ಎಲ್ಲಿಯೂ ಕಾಣಿಸಿಲ್ಲ. ಕಾಲಿದಾಸನ ಉದಾಹರಣೆ ಸಾಕು. ಆದರೆ ಇದೇ ಕಾಲಿದಾಸನ ಮಾಲವಿಕಾಗ್ನಿಮಿತ್ರದ ಮೊದಲಲ್ಲಿ ಭಾಸ ಸೌಮಿಲ್ಲಿ ಕವೀನಾಂ ಎಂದು ಹೆಸರಿಸಿದ ಭಾಸನ ನಾಟಕಗಳು ೧೯೧೪ ರಲ್ಲಿ ಪ್ರಕಟವಾದವು. ಅವುಗಳಲ್ಲಿ ಗ್ರಂಥಕಾರನ ಹೆಸರಿಲ್ಲ. ಸೌಮಿಲ್ಲಿಯ ಗ್ರಂಥಗಳು ಇನ್ನೂ ಸಿಕ್ಕಿಲ್ಲ. ಸಂಸ್ಕೃತ ಕಾವ್ಯಕಾರರಾದ ಕಾಲಿದಾಸ, ಮಾಘ, ಭಾರವಿ, ದಂಡಿ, ಬಾಣ ಮುಂತಾದವರು ತಮ್ಮ ಹೆಸರುಗಳನ್ನು ಎಲ್ಲಿಯೂ ಕಾಣಿಸಿಲ್ಲ. ಪರಂಪರಾಗತವಾದ ಶ್ಲೋಕಗಳಿಂದ ಅವರ ಗ್ರಂಥಗಳನ್ನು ಗುರುತಿಸಲಾಗಿದೆ. ಇದಲ್ಲದೆ ಬ್ರಹ್ಮಸೂತ್ರಕ್ಕೆ ಭಾಷ್ಯ ಬರೆದ ಆಚಾರ್ಯತ್ರಯರ ಹೆಸರುಗಳು ಅವರ ಭಾಷ್ಯದಲ್ಲಿ ಎಲ್ಲಿಯೂ ಕಂಡಿಲ್ಲ. ಈ ಪರಂಪರೆಗೆ ಅಪವಾದವೆಂದು ಶಿಲಾಶಾಸನಗಳನ್ನು ಉದಾಹರಿಸಬಹುದು. ಹಲಕೆಲವು ಪ್ರಶಸ್ತಿಗಳಲ್ಲಿ (ಅಲಹಾಬಾದ ಪ್ರಶಸ್ತಿ, ಸಮುದ್ರಗುಪ್ತನದು) ಆ ಪ್ರಶಸ್ತಿಕಾರರ ಹೆಸರುಗಳಿವೆ.

ಇದು ಆರ್ಯ ಭಾಷೆಯಾದ ಸಂಸ್ಕೃತ ಗ್ರಂಥಕಾರರ ಪರಂಪರೆಯ ವಿವರಣೆಯಾಯಿತು. ಇನ್ನು ಸಂಸ್ಕೃತಜನ್ಯ ಭಾಷೆಗಳ ಗ್ರಂಥಕಾರರ ಹಾಗು ದ್ರವಿಡ ಭಾಷೆಗಳ ಗ್ರಂಥಕಾರರ ಪರಂಪರೆಯನ್ನು ವಿಮರ್ಶಿಸೋಣ.

ಸಂಸ್ಕೃತಜನ್ಯ ಭಾಷೆಗಳಾದ ಬಂಗಾಲಿ, ಊರಿಯ, ಅಸಾಮಿ, ಹಿಂದಿ ರಜಪುತಾನೀ, ಗುಜರಾತಿ, ಮರಾಠಿ ಮುಂತಾದ ಭಾಷೆಗಳು ಮೊದಲು ೧೧ನೆಯ ಶತಮಾನದಲ್ಲಿ ಜನ್ಮ ತಾಳಿದವು. ಅವುಗಳಲ್ಲಿ ಗ್ರಂಥ ರಚನೆಯಾಗಲು

೨-೩ ಶತಮಾನಗಳು ಕಳೆದವು. ಈ ಭಾಷೆಗಳ ಭಕ್ತಿ ಪಂಥದವರ ಹಾಡು ಗಳ ಕೊನೆಯಲ್ಲಿಯ ಅಂಕಿತಗಳು ಪರಂಪರೆಯು ಪ್ರವಾಹವು ಹರಿಗಡಿದಿಲ್ಲ ವೆಂಬುದಕ್ಕೆ ಸಾಕ್ಷಿಯಾಗಿವೆ.

| | |
|---|---|
| ಚಂಡಿದಾಸ (ಬಂಗಾಲಿ) | (೧೫ನೆಯ ಶತಮಾನ ಚಂಡಿದಾಸಕಹೇ ) |
| ಮೀರಾಬಾಯಿ (ರಜಪುತಸ್ಥಾನ) | ( ,, ,, ಮೀರಾಕಹೇ ) |
| ಕಬೀರದಾಸ (ಉತ್ತರಪ್ರದೇಶ) | ( ,, ,, ಕಹತಕಬೀರಾ ) |
| ತುಲಸೀದಾಸ (ಉತ್ತರಪ್ರದೇಶ) | ( ,, ,, ತುಲಸೀದಾಸಕಹೇ ) |
| ಸೂರದಾಸ (ಪಂಜಾಬ) | ( ,, ,, ಸೂರದಾಸಕಹೇ ) |
| ನಾಮದೇವ (ಮಹಾರಾಷ್ಟ್ರ) | ( ,, ,, ನಾಮಾಮ್ಹಣೇ ) |
| ತುಕಾರಾಮ (ಮಹಾರಾಷ್ಟ್ರ) | ( ,, ,, ತುಕಾಮ್ಹಣೇ ) |
| ನರಸೀ ಮೇಹತಾ (ಗುಜರಾತ್) | ( ,, ,, ಭಣೇ ನರಸಯ್ಯೋ ) |

ಭಾರತೀಯ ಸಾಹಿತ್ಯದಲ್ಲಿ ಭಕ್ತಿಕಾಲವು ಜಯದೇವನಿಂದ ಆರಂಭ ವಾಯಿತೆಂದು ಪಂಡಿತರು ಹೇಳಿದ್ದಾರೆ. ಇವನ ಕಾಲ ೧೨ನೆಯ ಶತಮಾನ ಇವನ ಪ್ರಸಿದ್ಧ ಗ್ರಂಥವಾದ ಗೀತಗೋವಿಂದದಲ್ಲಿ ಈತನು ತನ್ನ ಹೆಸರನ್ನು ಸ್ಪಷ್ಟವಾಗಿ ಕಾಣಿಸಿದ್ದಾನೆ. (ಜಯದೇವ ಕೃತ)

ಇತ್ತ ತೆಲುಗುದೇಶದ ೧೯ನೆಯ ಶತಮಾನದ ಭಕ್ತಕವಿ, ಹಾಗು ಪ್ರಸಿದ್ಧ ವಾಗ್ಗೇಯಕಾರನೆನಿಸಿದ ತ್ಯಾಗರಾಜರು ತಮ್ಮ ಹೆಸರನ್ನೇ ತಮ್ಮ ಹಾಡುಗಳಲ್ಲಿ ಕಾಣಿಸಿದ್ದಾರೆ. ಇದೇ ಕಾಲದಲ್ಲಿದ್ದ ಸಂಗೀತ ತ್ರಿಮೂರ್ತಿಗಳಲ್ಲಿ ಇಬ್ಬರಾದ ಮುತ್ತುಸ್ವಾಮಿ ದೀಕ್ಷಿತರು ಹಾಗು ಶ್ಯಾಮಶಾಸ್ತ್ರಿಗಳು ತಮ್ಮ ಕುಲ ದೇವರ ಹೆಸರಿನ ಅಂಕಿತವನ್ನು ತಮ್ಮ ಹಾಡುಗಳ ಕೊನೆಯ ಮುದ್ರಿಕಾ ಚರಣದಲ್ಲಿ ಬರೆದಿದ್ದಾರೆ. (ಗುರುಗುಹ, ಇ.)

ಇನ್ನು ಕನ್ನಡ ಹಾಹಿತ್ಯ ಪರಂಪರೆಯಲ್ಲಿ ಪುಲಿಕೇಶಿಯ ಆಸ್ಥಾನ ಕವಿ ಯಾದ ರವಿಕೀರ್ತಿ ತಾನು ಬರೆದ ಬಾದಾಮಿಯ ಶಾಸನದಲ್ಲಿ ರವಿಕೀರ್ತಿಃ ಭಾರವಿ ಕೀರ್ತಿಃ ಎಂದು ತನ್ನ ಹೆಸರನ್ನು ನಿರ್ದೇಶಿಸಿದ್ದಾನೆ. ಶಾಸನಕಾರ ರಲ್ಲಿ ಹಲವರು ಈ ಪರಂಪರೆಯನ್ನು ಕಾಯ್ದುಕೊಂಡು ಬಂದಿದ್ದಾರೆ. ಗ್ರಂಥ ಕಾರರ [illegible] ಆರಂಭವಾಗಿ

ಇಂದಿನವರೆಗೂ ಸಾಗಿಬಂದಿದೆ. ನೃಪತುಂಗದೇವನು (ಕ್ರಿ. ಶ. ೮೭೭) ತನ್ನ ಹೆಸರನ್ನು ಹೇಳಿಲ್ಲ. ಆದರೆ ಶ್ರೀವಿಜಯವೆಂಬ ಹೆಸರೊಂದು ಅಲ್ಲಿ ಕಾಣಿಸುತ್ತಿದೆ. ಇವನ ತರುವಾಯದ ಪಂಪ, ಹೊನ್ನರನ್ನ ಮುಂತಾದವರು ತಮ್ಮ ಹೆಸರುಗಳನ್ನು ಆಶ್ವಾಸಾಂತ್ಯ ಗದ್ಯದಲ್ಲಿ ಹೇಳಿದ್ದಾರೆ. ಆದರೆ ಬಸವಣ್ಣನವರು, ಅಲ್ಲಮಪ್ರಭುಗಳು ಕವಿ ಹರಿಹರ, ರಾಘವಾಂಕರು ತಮ್ಮ ಹೆಸರುಗಳನ್ನು ಸೂಚಿಸದೆ ತಮ್ಮ ಆರಾಧ್ಯದೇವತೆಯ ಹೆಸರುಗಳನ್ನು ಕಾಣಿಸಿದ್ದಾರೆ. ಕೂಡಲ ಸಂಗಮದೇವ, ಗುಹೇಶ್ವರ, ಹಂಪೆಯ ವಿರೂಪಾಕ್ಷ, ಗದುಗಿನ ನಾರಣಪ್ಪನು ಗದುಗಿನ ವೀರನಾರಾಯಣನ ಮುದ್ರಿಕೆ ಹಾಕಿ ಕಾವ್ಯ ಬರೆದಿದ್ದಾನೆ. ಇದರಂತೆ ಕವಿ ಲಕ್ಷ್ಮೀಶ ಮುಂತಾದವರ ಅಂಕಿತಗಳಾದ ದೇವನಿಲಯ ಲಕ್ಷ್ಮೀರಮಣ (ದೇವನೂರಿನ ಲಕ್ಷ್ಮೀನಾರಾಯಣ) ಮುಂತಾದ ಅಂಕಿತಗಳು ಅವರ ಕಾವ್ಯಗಳಲ್ಲಿ ಕಾಣುತ್ತಿವೆ.

## ಇನ್ನು ದಾಸಕೂಟದ ವಿಚಾರ

ಇನ್ನು ದಾಸಕೂಟದ ಜನಕರಾದ ಶ್ರೀ ಶ್ರೀಪಾದರಾಜರು ರಚಿಸಿದ ಹಾಡುಗಳಲ್ಲಿ ರಂಗವಿಠಲ, ವ್ಯಾಸರಾಯರ ಹಾಡುಗಳಲ್ಲಿ ಕೃಷ್ಣ. ಎಂಬ ಮುದ್ರಿಕೆಗಳು ಇವೆ. ಇವರಿಬ್ಬರಿಗೆ ಯಾವ ಗುರುಗಳು ಅಂಕಿತ ಕೊಟ್ಟ ರೆಂಬುದು ಇನ್ನೂವರೆಗೆ ತಿಳಿದಿಲ್ಲ. ಮೇಲಾಗಿ ಇವರ ಹಾಡುಗಳನ್ನು ಸಾಹಿತ್ಯಶಾಸ್ತ್ರದ ನಿಯಮದಂತೆ ಸಂಪಾದಿಸಿದ ಹೊರತು ಏನೂ ಹೇಳಲಿಕ್ಕೆ ಬರುವಂತಿಲ್ಲ. ವ್ಯಾಸರಾಯರ ಶಿಷ್ಯರಾದ ಪುರಂದರದಾಸರು ತಮ್ಮ ಪದ-ಗಳಲ್ಲಿ ಪುರಂದರವಿಠಲನೆಂಬ ಮುದ್ರಿಕೆಯನ್ನು ಕಾಣಿಸಿದ್ದಾರೆ. ತಮ್ಮ ಗುರು ಗಳಾದ ವ್ಯಾಸರಾಯರು ತಮಗೆ ಈ ಮುದ್ರಿಕೆಯನ್ನು ದಯಪಾಲಿಸಿದರೆಂಬ ದನ್ನು ದಾಸರೇ ತಮ್ಮ ಸುಳಾದಿಯಲ್ಲಿ ಹೇಳಿದ್ದಾರೆ (ಪೂಜಾತತ್ತ್ವ ೬) ಇವರ ಮುದ್ರಿಕೆಯ ಕೊನೆಯ ವಿಠಲ ಪದವು ಇವರ ಆರಾಧ್ಯ ದೈವದ ಹೆಸರಾಗಿರ-ಬಹುದು. ತಮ್ಮ ಗುರುಗಳು ಈ ಮುದ್ರಿಕೆ ದಯಪಾಲಿಸಿದರೆಂದು ದಾಸರೇ ತಿಳಿಸಿದ್ದರೂ ವಿಟ್ಠಲಭಕ್ತಿ ಪಂಥವು ಇವರಿಂದ ಕರ್ನಾಟಕದಲ್ಲಿ ಮತ್ತೆ ಬೆಳಗಿ ತೆಂಬಂತೆ ಕಾಣುತ್ತಿದೆ. ಇವರ ತರುವಾಯದಲ್ಲಿ ಆಗಿಹೋದ ವಿಜಯದಾಸರು ಮುಂತಾದವರ ಮುದ್ರಿಕೆಗಳಲ್ಲಿ ವಿಠಲ ಪದವು ತಪ್ಪದೆ ಬರುತ್ತದೆ. ಶ್ರೀಪಾದ

ರಾಯರ ಮುದ್ರಿಕೆಯಲ್ಲಿ ವಿಠಲಪದವಿದೆಯಾದರೂ ಅವರು ಪೀಠಸ್ಥರಾದುದರಿಂದ ಹಾಗು ತಮ್ಮ ಗುರುಗಳ ಪರಂಪರೆಯನ್ನು ಕಾಯ್ದುಕೊಳ್ಳುವುದು ಅವರ ಧರ್ಮವಾದುದರಿಂದ ತಮ್ಮ ಆರಾಧ್ಯ ದೈವವನ್ನು ಬಿಟ್ಟು ವಿಠಲಭಕ್ತಿ ಪಂಥದ ಪುರಸ್ಕರ್ತರಾಗಿರಲಾರರು. ಈ ಚರ್ಚೆ ಇನ್ನೂ ಪೂರ್ಣಗೊಳ್ಳಬೇಕಾಗಿದೆ.

ಪುರಂದರದಾಸರಿಂದ ಕರ್ನಾಟಕ ದಾಸಕೂಟದ ಮೊದಲನೆಯ ಘಟ್ಟವು ಕೊನೆಗೊಂಡ ಬಳಿಕ (೧೫೬೪) ಮುಂದೆ ೧೪೦ ವರ್ಷಗಳಾದಮೇಲೆ ವಿಜಯದಾಸರಿಂದ ಎರಡನೆಯ ಘಟ್ಟವು ಪ್ರಾರಂಭಿಸುತ್ತದೆ. ಈ ಕಾಲದಲ್ಲಿ ವಿಜಯದಾಸರು, ಗೋಪಾಲದಾಸರು, ಮೋಹನದಾಸರು, ಕೊನೆಯಲ್ಲಿ ಜಗನ್ನಾಥದಾಸರು ಮುಂತಾದವರ ದಾಸಕೂಟವನ್ನು ಪುನರುಜ್ಜೀವನಗೊಳಿಸಿ ಬೆಳಸಿ-ದರು. ವಿಜಯದಾಸರ ಮುದ್ರಿಕೆ ವಿಜಯವಿಠಲ, ಗೋಪಾಲದಾಸರ ಮುದ್ರಿಕೆ ಗೋಪಾಲವಿಠಲ, ಮೋಹನದಾಸರದು ಮೋಹನವಿಠಲ ಹಾಗು ಜಗನ್ನಾಥದಾಸರದು ಜಗನ್ನಾಥವಿಠಲ, ಪುರಂದರದಾಸರು ತಮಗೆ ವಿಜಯವಿಠಲನೆಂಬ ಮುದ್ರಿಕೆಯನ್ನು ಕನಸಿನಲ್ಲಿ ಕೊಟ್ಟರೆಂದು ಅವರೇ ಹೇಳಿ-ದ್ದಾರೆ. ಹೀಗೆ ಗುರುಗಳಿಂದ ಶಿಷ್ಯರಿಗೆ ಮುದ್ರಿಕೆ ಕೊಡುವ ಪರಂಪರೆ ಇಲ್ಲಿ ಎದ್ದುಕಾಣುತ್ತಿದೆ. ಶಿಷ್ಯನ ಮನಃಪರಿಪಾಕವನ್ನು ನೋಡಿ ಗುರುಗಳು ಮುದ್ರಿಕೆಯನ್ನು ದಯಪಾಲಿಸುವ ಸಂಪ್ರದಾಯ ದಾಸಕೂಟದ ವೈಶಿಷ್ಟ್ಯ-ವಾಗಿದೆ.

ವಿಠಲಮುದ್ರಿಕೆಯೊಂದಲ್ಲದೆ ತಮ್ಮ ಆರಾಧ್ಯದೈವದ ಮುದ್ರಿಕೆಯುಳ್ಳ ಹಾಡುಗಳನ್ನು ಕಟ್ಟಿದವರು ದಾಸಕೂಟದಲ್ಲಿ ಹಲವಾರು ಜನರು ಆಗಿಹೋಗಿದ್ದಾರೆ. ಕನಕದಾಸ (ಕಾಗಿನೆಲೆ ಆದಿಕೇಶವ, ಬಾಡದಾದಿಕೇಶವ,) ವಾದಿ-ರಾಜ (ಹಯವದನ,) ಹರಪನಹಳ್ಳಿ ರಾಮಾಚಾರ್ಯರು (ಇಂದಿರೇಶ) ಮುಂ. ಆದರೆ ಇಲ್ಲಿ ತಾವು ತಮ್ಮ ಗುರುಗಳಿಂದ ಈ ಮುದ್ರಿಕೆ ಪಡೆದೆವೆಂದು ಇವರು ಎಲ್ಲಿಯೂ ಹೇಳಿಲ್ಲ. ಇದೊಂದು ಆಪವಾದವೆಂದು ತಿಳಿಯಬೇಕೆ?

ಕೊನೆಗೆ ಮುದ್ರಿಕೆಯಲ್ಲಿ ಎಷ್ಟು ಭೇದಗಳಿವೆಯೆಂಬುದನ್ನು ಡಾ. P. ಸಾಂಬಮೂರ್ತಿಯವರ South Indian Music III (P. P. 131-133) ಎಂಬ ಗ್ರಂಥದಿಂದ ಉದಾಹರಿಸಿದೆ. ಚಿಕ್ಕೆಯಿದ್ದ ಮುದ್ರಿಕೆಗಳು ನಮ್ಮಲ್ಲಿ ಪ್ರಚಲಿತವಾಗಿರುವುದನ್ನು ತೋರಿಸುತ್ತದೆ.

೧ ವಾಗ್ಗೇಯಕಾರ ಮುದ್ರಾ, (ಅ) * ಸ್ವನಾಮಮುದ್ರಾ, (ಆ) * ಇತರ ನಾಮಮುದ್ರಾ. ೨ ರಾಗಮುದ್ರಾ. ೩ ತಾಲಮುದ್ರಾ. ೪ * ಆಚಾರ್ಯ ಮುದ್ರಾ. ೫ * ರಾಜಮುದ್ರಾ. ೬ * ವಂಶ ಮುದ್ರಾ. ೭ ಪ್ರಬಂಧಮುದ್ರಾ. ೮ ನಾಯಕಮುದ್ರಾ. ೯ * ಸ್ಥಲಮುದ್ರಾ ಅಥವಾ ಕ್ಷೇತ್ರಮುದ್ರಾ. ೧೦ ಬಿರುದಮುದ್ರಾ. ೧೧ ಲಕ್ಷಣಗ್ರಂಥ ಮುದ್ರಾ. ೧೨ ಸಂಕೀರ್ಣಮುದ್ರಾ.

ಮುದ್ರಿಕೆಯ ಪರಂಪರೆ ಇಲ್ಲಿಗೆ ಕೊನೆಗೊಳ್ಳದೆ ಇನ್ನೂ ಸಾಗಿದೆ. ಇಂದಿನ ಮತ್ತು ಹಿಂದಿನ ಕವಿಗಳು ಮತ್ತು ವಾಗ್ಗೇಯಕಾರರು ತಮಗೆ ಸರಿ ಕಂಡ ಮುದ್ರಿಕೆಗಳನ್ನು ಸೇರಿಸಿ ಬರೆದ ಕಾವ್ಯ ಮತ್ತು ಹಾಡುಗಳು ಅಚ್ಚಾ- ಗಿವೆ. ಆಚ್ಚುಕೂಟಗಳು ಅಸ್ತಿತ್ತ್ವದಲ್ಲಿ ಬಂದಮೇಲೆ ಇವುಗಳ ಅಸ್ತಿತ್ವಕ್ಕೆ ಕಾರಣವಿಲ್ಲದಿದ್ದರೂ ಪರಂಪರಾಪ್ರೀತಿ ಮನುಷ್ಯನ ಜೀವನದ ಭದ್ರವಾದ ತಳ ಹದಿಯಾದುದರಿಂದ ಅದು ಜನರ ಮನಸ್ಸಿನಿಂದ ಕಣ್ಮರೆಯಾಗಲಾರದು. ಉದಾಹರಣೆ:— ಶಾಂತೇಶವಿಠಲ ( ದಿ || ಸಕ್ಕರಿ ಬಾಳಾಚಾರ್ಯರು ) ಹನುಮೇಶವಿಠಲ ( ದಿ || ಬುರಲಿ ಹನುಮಂತರಾಯರು.)



# ಪ್ರಕಾಶಕರ ಎರಡು ಮಾತುಗಳು

ಶ್ರೀಪುರಂದರದಾಸರ ಕೊನೆಯ ಸಂಪುಟವನ್ನು ಜನತೆಗೆ ಸಮರ್ಪಿಸುವ ಸುಯೋಗವನ್ನು ತಂದುಕೊಟ್ಟದ್ದಕ್ಕಾಗಿ ಆ ದಯಾಘನನಾದ ಪರಮಾತ್ಮನನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ! ಕಾರ್ಯದ ಘನತೆ, ನಮ್ಮ ಸಾಮರ್ಥ್ಯ ಹಾಗು ಸಾಧನಗಳನ್ನು ನೆನೆದಾಗ, ನಮ್ಮ ಎದೆ ನಡುಗುತ್ತಿದ್ದಿತು. 'ಶ್ರೇಯಾಂಸಿ ಬಹುವಿಘ್ನಾನಿ' ಎಂಬಂತೆ ಈ ಕಾರ್ಯದಲ್ಲಿ ಬಂದ ಅಡೆತಡೆಗಳನ್ನು ನೋಡಿ ದಿಕ್ಕುಗಾಣದಾದಾಗ, ಭಗವಂತನು ಅಚಾನಕವಾಗಿ ಯಾರದೋ ಮುಖಾಂತರ ನೆರವನ್ನು ನೀಡುತ್ತ ಕಾರ್ಯಕ್ಕೆ ಪ್ರಚೋದನೆ ಮಾಡುತ್ತಿದ್ದುದು, ಹೆಜ್ಜೆಹೆಜ್ಜೆಗೆ ಅನುಭವಕ್ಕೆ ಬಂದಿತು. ಶ್ರೀಪುರಂದರದಾಸರ ಅಂತರ್ಯಾಮಿಯಾದ ಪುರಂದರ ವಿಠಲನೇ ಕಮೀಟಿಯ ಮುಖಾಂತರ ಕಾರ್ಯ ಮಾಡಿ, ಮಾಡಿಸಿದ. ಅನಂತಹಸ್ತಗಳಿಂದ ನೆರವನ್ನು ನೀಡಿದ ಆತನನ್ನು ಎಷ್ಟು ಸ್ಮರಿಸಿದರೂ ಸಾಲದು.

ಕಮೀಟಿಯು ಜನತೆಗೆ ವಚನ ಕೊಟ್ಟಂತೆ, ಆರು ಸಂಪುಟಗಳನ್ನು ಒದಗಿಸಿದಂತಾಯಿತು. ಅನೇಕ ಜನ ಸಜ್ಜನರು ಅಂತಃಕರಣಪೂರ್ವಕವಾಗಿ ಶ್ರೀಪುರಂದರದಾಸರ ರಥವನ್ನು ಎಳೆಯಲು ಮುಂದಾದದ್ದೇ ಈ ಕಾರ್ಯದ ಯಶಸ್ಸಿಗೆ ಕಾರಣವು. ಆದುದರಿಂದಲೇ, ಈ ಕಾರ್ಯಕ್ಕೆ ಸೇವೆ ಸಲ್ಲಿಸಿದ ಮಹನೀಯರೆಲ್ಲರೂ ಪುಣ್ಯಭಾಗಿಗಳು. ಅವರೆಲ್ಲರಿಗೂ ಕಮೀಟಿಯು ತನ್ನ ಧನ್ಯವಾದಗಳನ್ನು ಸಮರ್ಪಿಸುತ್ತದೆ.

ಶ್ರೀಪುರಂದರದಾಸರ ಲಭ್ಯವಿದ್ದ ಪದಗಳನ್ನೆಲ್ಲ ಪರಿಶೋಧಿಸಿ ಪ್ರಕಟಿಸಬೇಕೆಂದು ಸಂಕಲ್ಪಮಾಡಿದಾಗ, ಹಾಡುಗಳು ದೊರೆಯುವುವೇ ಎಂಬ ಪ್ರಶ್ನೆಯು ನಮ್ಮೆದುರಿಗೆ ಇದ್ದಿತು. ಆದರೆ ಶ್ರೀಪುರಂದರದಾಸರಿಗೇ ಈ ಕಾರ್ಯವು ಪ್ರಿಯವಾದುದರಿಂದ, ನಾವು ಪ್ರಯತ್ನ ಮಾಡಿದಲ್ಲೆಲ್ಲ ಈ ಕಾರ್ಯಕ್ಕೆ ಯಶ ದೊರೆಯಹತ್ತಿತು. ಅನೇಕ ದಾಸಪರಂಪರೆಯವರು ತಮ್ಮಲ್ಲಿರುವ ಹಸ್ತಪ್ರತಿಗಳನ್ನೂ ಮುದ್ರಿತ ಪುಸ್ತಕಗಳನ್ನೂ ಕೊಟ್ಟು, ಕಾರ್ಯಕ್ಕೆ ಚಾಲನೆ

ಯನ್ನು ಕೊಟ್ಟರು. ಈ ನೆರವು ಬಾರದಿದ್ದರೆ ನಮ್ಮ ಸಂಕಲ್ಪವು ತಿರುಕನ ಕನಸಾಗುತ್ತಿದ್ದಿತು. ಆದುದರಿಂದ ಈ ಮಹನೀಯರೆಲ್ಲರೂ ವಂದನಾರ್ಹರು. ಸತ್ಕಾರ್ಯಗಳಿಗೆ ಕನ್ನಡ ಜನರು ಹಿಂದೇಟು ಕೊಡುವುದಿಲ್ಲೆಂಬ ಆತ್ಮವಿಶ್ವಾಸವು ಈ ಕಾರ್ಯದಿಂದ ನಮಗುಂಟಾಗಿದೆ.

ಸಾಹಿತ್ಯವಿದ್ದರೂ ಸರಿಯಾದ ಪಾಕವಿಳಿಸುವವರು ಬೇಕಲ್ಲವೆ? ಹೊತ್ತಗೆಗಳು ದೊರೆತರೂ ಅವುಗಳಲ್ಲಿರುವ ಹಾಡುಗಳಲ್ಲಿ ಯಾವುವು ಶ್ರೀಪುರಂದರ ದಾಸರವು ಎಂಬುದನ್ನು ಗುರುತಿಸುವುದೂ, ಅವುಗಳನ್ನು ಪರಿಶುದ್ಧಗೊಳಿಸುವುದೂ ಸಂಪಾದಕಮಂಡಲದ ಮುಖ್ಯಕಾರ್ಯವಾಗಿದ್ದಿತು. ಖ್ಯಾತಸಾಹಿತಿಗಳಾದ ಶ್ರೀ. ಕೃಷ್ಣಶರ್ಮಾ ಬೆಟಗೇರಿಯವರೂ ಸಂಶೋಧಕರಾದ ಶ್ರೀ. ಹುಚ್ಚರಾವ ಬೆಂಗೇರಿಯವರೂ ಮುಖ್ಯವಾಗಿ ಈ ಹೊಣೆಯನ್ನು ಹೊತ್ತು ಯಶಸ್ವಿಯಾಗಿ ನಿರ್ವಹಿಸಿದ್ದಕ್ಕಾಗಿ ಕಮೀಟಿಯು ಅವರಿಗೆ ಋಣಿಯಾಗಿದೆ. ವಿಶೇಷತಃ ಶ್ರೀ. ಹುಚ್ಚರಾವ ಬೆಂಗೇರಿಯವರ ನಿಃಸ್ವಾರ್ಥಸೇವೆಯನ್ನು ಕಮೀಟಿಯು ಎಂದೂ ಮರೆಯದು. ಅದರಂತೆಯೇ ಈ ಕಾರ್ಯಕ್ಕೆ ಬೇಕಾದ ಪುರಾಣ, ವೇದೋಪನಿಷತ್ ವಚನಗಳು, ಹಾಗು ಪ್ರಮೇಯ ಭಾಗಗಳನ್ನು ಒದಗಿಸಿಕೊಟ್ಟ ವಿದ್ವಾಂಸರಿಗೂ ಈ ಕಮೀಟಿಯು ಧನ್ಯವಾದಗಳನ್ನು ಅರ್ಪಿಸುತ್ತದೆ.

ಕಮೀಟಿಯು ತನ್ನ ಉದ್ದೇಶಗಳನ್ನು ಪ್ರಕಟಿಸಿ, ದಾಸರ ಕಾರ್ಯಕ್ಕೆ ಸಹಾಯ ಕೇಳಿಕೊಂಡಾಗ, ಜನತೆಯ ಪ್ರತಿಕ್ರಿಯೆಯೂ ಬಹು ಸಂತಸದ್ದಾಗಿದ್ದಿತು. ಜನತೆ ಸಹೃದಯತೆಯಿಂದಲೂ ಭಕ್ತಿಭಾವದಿಂದಲೂ ಸಹಾಯದ ಹಸ್ತವನ್ನು ಮುಂದೆಮಾಡಿತು. ಎಲ್ಲರ ಅಂತಃಕರಣದಲ್ಲಿಯೂ ಒಂದೇ ಒಂದು ಮಿಡಿತವು ಕಂಡುಬಂದಿತು. ಅದೇ ದಾಸರ ಸೇವೆ, ಅನೇಕ ಜನರಿಗೆ ಅನೇಕ ಬಗೆಯ ಪ್ರೇರಣೆಗಳಾದುದು ಅನುಭವಕ್ಕೆ ಬಂದಿತು. ಆ ಮಾತುಗಳನ್ನು ಇಲ್ಲಿ ಉಲ್ಲೇಖಿಸದಿದ್ದರೆ, ದ್ರೋಹ ಬಗೆದಂತಾದೀತು, ಬೆಂಗಳೂರು ತುಮಕೂರುಗಳ ತರುಣರು, ಕಲುಬುರ್ಗಿ, ಯಲಬುರ್ಗಿ, ಹುಬ್ಬಳ್ಳಿ, ಕಿತ್ತೂರು, ದಾಂಡೇಲಿಗಳ ಜನ ನಿಧಿಸಂಗ್ರಹಿಸಲು ಮುಂದಾದರು. ಬೆಂಗಳೂರಿನ ಮಿತ್ರವೃಂದ, ಲೋಕಶಿಕ್ಷಣ ಟ್ರಸ್ಟುಗಳು ಒಂದೊಂದು ಗ್ರಂಥವನ್ನು ಉಚಿತವಾಗಿ ಮುದ್ರಿಸಿಕೊಡಲು ಭಾರಹೊತ್ತುವು. ಶಿಲ್ಪಿಗರಾದ ಶ್ರೀ. ಸೆಟ್ಟರು,

ಪುರಂದರದಾಸರ ಪ್ರತಿಮೆಯನ್ನು ಉಚಿತವಾಗಿ ಕೆತ್ತಿಕೊಡುವೆವೆಂದು ವಚನ ವಿತ್ತರು. ಕೆಲವು ಜನರು ನಮಗೆ ಸ್ವಪ್ನವಾಗಿದೆ, ನಮ್ಮ ಈ ಕಾಣಿಕೆಯನ್ನು ಸ್ವೀಕರಿಸಬೇಕೆಂದರು. ಕೆಲವರು ಮನೆಗೆ ಕರೆದು ಪೂಜಿಸಿ ದಕ್ಷಿಣೆ ಕೊಟ್ಟದ್ದುಂಟು. ಈ ಎಲ್ಲವನ್ನೂ ನೆನೆದಾಗ ಮೈ ಜುಂ ಎನ್ನುತ್ತದೆ. ಎಂದೂ ಮರೆಯಲಾಗದ ಸಂಗತಿಗಳು ಇವು. ಈ ಕಾರ್ಯವು ನಮ್ಮಿಂದ ನೆರವೇರಿತು ಎಂದು ಯಾರಾದರೂ ತಿಳಿದರೆ, ಅವರಂತಹ ಬುದ್ಧಿವಂತರು ಅವರೇ! ಈ ಎಲ್ಲ ಸದ್ಭಕ್ತರಿಗೆ ನಮ್ಮ ಅನಂತ ವಂದನೆಗಳು.

ಇನ್ನೂ ಆಶ್ಚರ್ಯಕರವಾದ ಸಂಗತಿಯೆಂದರೆ, ಕಮೀಟಿಯು ಸಂಗ್ರಹಿಸಿದ ನಿಧಿಯು ಪೂರ್ಣ ವೆಚ್ಚವಾಗಿ, ಕೈಯಲ್ಲಿ ಕಾಸಿಲ್ಲದೆ, ಮುಂದೇನು ಮಾಡಬೇಕೆಂದು ಆಕಾಶದ ಕಡೆಗೆ ನೋಡುತ್ತಿರುವಾಗ, ರಾಜ್ಯಸರಕಾರ ಹಾಗು ಕೇಂದ್ರಸರಕಾರಗಳು ನೆರವಿಗೆ ಬಂದುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಪರಮಾತ್ಮನ ಈ ಮಹಾಮಹಿಮೆಯನ್ನು ಕಂಡು ಅಂತಃಕರಣವು ಉಕ್ಕೇರಿಬರುತ್ತದೆ. ರಾಜ್ಯಸರಕಾರದ ಶಿಕ್ಷಣಮಂತ್ರಿಗಳು ಈ ಕಾರ್ಯಕ್ಕೆ ಸಹಾಯ ಮಾಡಲೇಬೇಕೆಂದು ಶಿಫಾರಸು ಮಾಡುವುದೂ ಕೇಂದ್ರಸರಕಾರವು ಅದನ್ನು ಮನ್ನಿಸಿ ಸಹಾಯ ಮಾಡಿದುದೂ, ಈ ಎಲ್ಲ ಕಾರ್ಯಕ್ಕೆ ಶ್ರೀಮತಿ ಭಗಿನಿ ಮಹಿಷಿ ಸರೋಜಿನಿಯವರು ಸಾಧನರಾಗುವುದೂ ಆಶ್ಚರ್ಯದ ಘಟನೆ ಎನಿಸುವುದು. ಈ ಎಲ್ಲ ಮಹನೀಯರಿಗೂ ನಾವು ಧನ್ಯವಾದಗಳನ್ನರ್ಪಿ-ಸುತ್ತೇವೆ.

ನಾವು ಕೇಳಿಕೊಂಡ ಕೂಡಲೆ ಅಧಿಕಾರದ ಸ್ಥಾನಗಳನ್ನು ವಹಿಸಿಕೊಂಡು ಕಾರ್ಯೋನ್ಮುಖರಾದ ಅಧ್ಯಕ್ಷ, ಉಪಾಧ್ಯಕ್ಷ, ಕಾರ್ಯಾಧ್ಯಕ್ಷರೂ—ಕೋಶಾಧ್ಯಕ್ಷ ಕಾಯದರ್ಶಿಗಳೂ ಇವರೇ ಮೊದಲಾದವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತೇವೆ. ಅದರಂತೆ ಸಂಪಾದಕ ಮಂಡಲಕ್ಕೂ ಮುನ್ನುಡಿಗಳನ್ನು ಬರೆದುಕೊಟ್ಟ ಮಹನೀಯರಿಗೂ, ಕಮೀಟಿಯು ತನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಕಮೀಟಿಯ ಸಂಕಲ್ಪಿತ ಕಾರ್ಯವು ಇಲ್ಲಿಗೆ ಮುಗಿಯಿತೆಂದು ನಾವು ಭಾವಿಸುವೆವು. ಇನ್ನು ಶ್ರೀಪುರಂದರದಾಸರ ಪ್ರತಿಮೆಯ ಪ್ರತಿಷ್ಠಾಪನೆಯಾಗ-ಬೇಕಿದೆ. ದಾಸರ ಹಾಡುಗಳು ಮರಾಠಿ, ತೆಲುಗು, ತಮಿಳು, ಹಿಂದಿ, ಇಂಗ್ಲಿಷ್

ಮುಂತಾದ ಭಾಷೆಗಳಲ್ಲಿಯೂ ಭಾಷಾಂತರಗಳಾಗಿ ಪ್ರಕಟವಾಗಬೇಕಾಗಿದೆ. ಶ್ರೀಪುರಂದರದಾಸರ ಹಾಡುಗಳು ಈಗ ದೊರಕಿದ್ದು ಅಲ್ಪ, ಉಳಿದ ಹಾಡುಗಳನ್ನು ಹುಡುಕುವ ದೊಡ್ಡ ಕೆಲಸವಿದೆ. ಈ ದೃಷ್ಟಿಯಿಂದ ಕನ್ನಡಜನತೆಯು ವಿಚಾರ ಮಾಡಬೇಕೆಂದು ಪ್ರಾರ್ಥಿಸುತ್ತೇನೆ.

ಒಟ್ಟಿನಲ್ಲಿ ಈ ಮಹಾಕಾರ್ಯದಲ್ಲಿ ಪ್ರತ್ಯಕ್ಷ-ಅಪ್ರತ್ಯಕ್ಷ ರೀತಿಯಿಂದ ನೆರವಾದ ಎಲ್ಲ ಮಹನೀಯರಿಗೆ ವಂದಿಸಿ, ಈ ಬರೆವಣಿಗೆಯನ್ನು ಇಲ್ಲಿಗೆ ಮುಗಿಸುವೆ.

ಆವಾವ ಕರ್ಮವ, ದೇವರಿಗರ್ಪಿಸುವಂಥ।
ಜೀವರೆ ಧನ್ಯರೊ ಗೋಪಾಲವಿಠಲ॥

ಧಾರವಾಡ
ಭಾ. ಶು. ೫ ವಿಶ್ವಾವಸು
೧೮೮೭
೩೧-೮-೧೯೬೫

ದಾಸರದಾಸ
**ಬುರ್ಲಿ ಬಿಂದುಮಾಧವ**
ಕಾರ್ಯದರ್ಶಿ
ಅ. ಕ. ಪುರಂದರದಾಸರ
ಚತುಃಶತಮಾನೋತ್ಸವ ಸಮಿತಿ.

---

# ದಾಸಸಾಹಿತ್ಯದ ಆಕರಗಳು

## (ಅ) ಪಾಂಘ್ರಿ ಮನೆತನದ ಸಂಗ್ರಹ, [ಬೆಳಗಾಂವಿ]

| ಅ. ನಂ. | ಹಸ್ತಪ್ರತಿಯ ಸಂಕೇತ | | ಲಿಪಿ | ಹಾಡುಗಳ ಸಂಖ್ಯೆ | ಕಾಲ |
|---|---|---|---|---|---|
| ೧ | ಅ(೧) | ನೀಲಿಹೊತ್ತಿಗೆ | ಕನ್ನಡ | ೮೫ | ೧೮೭೫ |
| ೨ | ಆ(ಬಿಡಿ ೧) | ಬಿಡಿಕಾಗದಗಳು | ಕನ್ನಡ-ದೇವನಾಗರಿ | ೨೪ | ೧೮೯೦ |
| ೩ | ಅ(ಬಿಡಿ ೨) | ,, | ,, ,, | ೧೮ | ,, |
| ೪ | ಅ(ಬಿಡಿ ೩) | ,, | ,, ,, | ೨೮ | ,, |
| ೫ | ಅ(ಬಿಡಿ ೪) | ,, | ,, ,, | ೧೬ | ,, |
| ೬ | ಅ(ಬಿಡಿ ೫) | | | ೫೫ | ೧೮೭೫ |
| ೭ | ಅ(ಬಿಡಿ ೬) | ,, | ,, ,, | ೧೦ | ,, |
| ೮ | ಅ(೭) | ಕೋರಿಕಾಗದ | ದೇವನಾಗರಿ | ೩೫ | ೧೮೫೦ |
| ೯ | ಅ(೮) | ,, | ,, | ೮೫ | ,, |
| ೧೦ | ಅ(೧೧) | ,, | ,, | ೮೨ | ,, |

## (ಆ) ಬೆಂಗೇರಿ ಮನೆತನದ ಸಂಗ್ರಹ, [ಹುಬ್ಬಳ್ಳಿ]

| ಅ. ನಂ. | ಹಸ್ತಪ್ರತಿಯ ಸಂಕೇತ | | ಲಿಪಿ | ಹಾಡುಗಳ ಸಂಖ್ಯೆ | ಕಾಲ |
|---|---|---|---|---|---|
| ೧೧ | ಆ (i) | ಹಸ್ತಪ್ರತಿ ಬಿಳಿಹಾಳಿ | ಕನ್ನಡ | ೮ | ೧೮೯೦ |
| ೧೨ | ಆ (ii) | ,, ,, | ,, | ೩೦ | ,, |
| ೧೩ | ಆ (iib) | ,, ,, | ,, | ೧೫ | ೧೯೦೦ |
| ೧೪ | ಆ (iix) | ಕೋರಿಕಾಗದ | ದೇವನಾಗರಿ | | ೧೮೭೫ |
| ೧೫ | ಆ (vi) | ನೀಲಿಹೊತ್ತಿಗೆ | ,, | ೭೧ | ,, |
| ೧೬ | ಆ (೨) | ಕೋರಿಕಾಗದ | ,, | ೨೫ | ,, |
| ೧೭ | ಆ (a) | ಹಸ್ತಪ್ರತಿ | ,, | ೩೬ | ೧೮೮೫ |
| ೧೮ | [illegible] | ,, | ,, | ೧೫ | ೧೯೦೦ |

| ಅ. ನಂ. | ಹಸ್ತಪ್ರತಿಯ ಸಂಕೇತ | | ಲಿಪಿ | ಹಾಡುಗಳ ಸಂಖ್ಯೆ | ಕಾಲ |
|---|---|---|---|---|---|
| ೧೯ | ಆ (d) | ,, | ,, | ೫ | ,, |
| ೨೦ | ಆ (E) | ,, | ,, | ೧೫ | ,, |
| ೨೧ | ಆ (F) | ಬಿಡಿಹಾಳೆ | ,, | ೧ | ,, |
| ೨೨ | ಆ (G) | ಹಸ್ತಪ್ರತಿ | ,, | ೧೦ | ,, |
| ೨೩ | ಆ (H) | ,, | ಕನ್ನಡ | ೧೫ | ,, |
| ೨೪ | ಆ (I) | ,, | ದೇವನಾಗರಿ | ೫ | ,, |
| ೨೫ | ಆ (J) | ಬಿಡಿಹಾಳೆ | ,, | ೧ | ,, |
| ೨೬ | ಆ (K) | ,, | ,, | ೨ | ,, |
| ೨೭ | ಆ (M) | ಹಸ್ತಪ್ರತಿ | ,, | ೫ | ,, |
| ೨೮ | ಆ (O) | ಹಸ್ತಪ್ರತಿ | ಕನ್ನಡ | ೨೫ | ೧೯೦೦ |
| ೨೯ | ಆ (P) | ಹಸ್ತಪ್ರತಿ | ಕನ್ನಡ | ೮೨ | ೧೮೯೧ |
| ೩೦ | ಆ (ಶI) | ಮುದ್ರಿತ ಪುಸ್ತಕ | ಕನ್ನಡ | ೬೦ | ? |
| ೩೧ | ಆ (ಹ) | ,, ,, | ತೆಲಗು | ೪೭ | ೧೯೧೪ |

## (ಇ) ಗೊರಾಬಾಳ ಹಣಮಂತರಾಯರ ಸಂಗ್ರಹ, [ಲಿಂಗಸೂಗೂರು]

| | | | | | |
|---|---|---|---|---|---|
| ೩೨ | ಇ (೧೦) | ಕೋರಿಕಾಗದ ಪ್ರತಿ | ದೇವನಾಗರಿ | ೧೦೬ | ೧೮೫೦ |
| ೩೩ | ಇ (೧೨) | ದಪ್ಪಕಾಗದ ,, | ,, | ೪ | ೧೮೮೦ |
| ೩೪ | ಇ (೧೩) | ತಿಳಿ ,, ,, | ,, | ೨೮ | ,, |
| ೩೫ | ಇ (೧೪) | ,, ,, ,, | ,, | ೧೦ | ,, |
| ೩೬ | ಇ (೧೫) | ,, ,, ,, | ,, | ೨೫ | ,, |
| ೩೭ | ಇ (ಕ್ಷ) | ನೀಲಿಹಾಳಿ ,, | ಕನ್ನಡ | ೨೫ | ೧೮೯೦ |
| ೩೮ | ಇ (೧೬) | ಮುದ್ರಿತಪ್ರತಿ | ,, | ೫ | ? |

## (ಈ) ಚೀಕಲಪರಿವೆ ಮೇಲಪ್ಪನವರ ಸಂಗ್ರಹ, [ಮಾನವಿ]

| | | | | | |
|---|---|---|---|---|---|
| ೩೯ | ಈ | ದಪ್ಪಕಾಗದದ ಪ್ರತಿ | ಕನ್ನಡ-ದೇವನಾಗರಿ | ೫ | ೧೯೧೦ |

## (ಉ) ಮುಗಳಿ ಭುಜಂಗರಾಯರ ಸಂಗ್ರಹ, [ಗದಗ]

| ಅ. ನಂ. | ಹಸ್ತಪ್ರತಿಯ ಸಂಕೇತ | ಲಿಪಿ | ಹಾಡುಗಳ ಸಂಖ್ಯೆ | ಕಾಲ |
|---|---|---|---|---|
| ೪೦ | ಉ ಬಿಳಿಕಾಗದ ಹಸ್ತಪ್ರತಿ | ಕನ್ನಡ | ೮೬ | ೧೯೧೦ |

## (ಊ) ಮುದ್ರಿತ ಆಬಾಜಿ ರಾ. ಸಾವಂತ [ಬೆಳಗಾಂವಿ]

| | | | | |
|---|---|---|---|---|
| ೪೧ | ಊ (ಖ) ದಾಸರಪದಗಳ ಸಂಗ್ರಹ(ಸಂ ೧) | ದೇವನಾಗರಿ | ೫೦ | ೧೮೮೦ |
| ೪೨ | ಊ (ಘ) ,, ,, ( ,, ೨) | ,, | ೪೦ | ,, |
| ೪೩ | ಊ (ಚ) ,, ,, ( ,, ೩) | ,, | ೩೫ | ,, |
| ೪೪ | ಊ (ಕ) ,, ,, ( ೫೦ ) | ,, | ೫೦ | ೧೮೯೪ |

## (ಎ) ಸುಬೋಧ ರಾಮರಾವ [ಬೆಂಗಳೂರು]

| | | | | |
|---|---|---|---|---|
| ೪೫ | ಎ ಪ್ರಕಟಿತ ಪುರಂದರದಾಸರ ಕೃತಿಗಳು | ೧ | ೩೬೬ | ೧೯೨೬ |
| | ,, ,, | ೨ | ೨೯೭ | ,, |

## (ಏ) ಬೆಟಗೇರಿ ಕೃಷ್ಣಶರ್ಮರ ಸಂಗ್ರಹ [ಧಾರವಾಡ]

| | | | | |
|---|---|---|---|---|
| ೪೬ | ಏ (೧) ಹಸ್ತಪ್ರತಿ ಕೋರೀಕಾಗದ | ದೇವನಾಗರಿ | ೩೨ | ೧೮೮೦ |
| ೪೭ | ಏ (೨) ಬಿಳಿಹಾಳೆ | ಕನ್ನಡ | ೨೯ | ೧೮೯೦ |
| | ಮು. ಮುದ್ರಿತ | ಕನ್ನಡ | ೧೧೧ | ೧೮೭೩ |

## (ಐ) ಮದ್ರಾಸಿನ ಪ್ರಕಟನೆ [ಮದ್ರಾಸು]

| | | | | |
|---|---|---|---|---|
| ೪೮ | ಐ ಹರಿಭಜನೆ ಕೀರ್ತನೆಪ್ರಬಂಧ ಮುದ್ರಿತ, | ಕನ್ನಡ | ೫೦ | ೧೮೭೮ |

## (ಒ) ಸುಳಾದಿ ಪದಗಳು [ಆ. ರಾ. ಸಾವಂತ ಬೆಳಗಾಂವಿ]

| | | | | |
|---|---|---|---|---|
| ೪೯ | ಒ ಮುದ್ರಿತ | ದೇವನಾಗರಿ ಲಿಪಿ | ೨೫ | ೧೯೦೮ |

## (ಓ) ಪಾವಂಜೆ ಗುರುರಾಯರ ಸಂಗ್ರಹ [ಉಡುಪಿ]

| | | | | |
|---|---|---|---|---|
| ೫೦ | ಓ ಮುದ್ರಿತ ೧-೫ | ಕನ್ನಡ | ೨೫ | ೧೯೦೬ |

## (ಕ) ಪಾವಂಜೆ ಗುರುರಾಯರ ಉದಯರಾಗ [ಉಡುಪಿ]

| | | | | |
|---|---|---|---|---|
| ೫೧ | ಕ ಮುದ್ರಿತಪ್ರತಿ | ಕನ್ನಡ | ೨೫ | ೧೯೨೬ |

## (ಖ ೧) ಹೆಬ್ಬಳ್ಳಿ ಅಣ್ಣಾರಾಯರ ಸಂಗ್ರಹ [ಧಾರವಾಡ]

| ಅ. ನಂ. | ಹಸ್ತಪ್ರತಿಯ ಸಂಕೇತ | | | ಲಿಪಿ | ಹಾಡುಗಳ ಸಂಖ್ಯೆ | ಕಾಲ |
|---|---|---|---|---|---|---|
| ೫೨ | ಖ ೧ (೧) | ಹಸ್ತಪ್ರತಿ | ಬಿಳಿಕಾಗದ | ಕನ್ನಡ | ೧೬ | ೧೯೦೦ |
| ೫೩ | ಖ ೧ (೨) | ,, | ,, | ,, | ೩ | ,, |
| ೫೪ | ಖ ೧ (೩) | ,, | ,, | | ೧ | ,, |
| ೫೫ | ಖ ೧ (೪) | ,, | ,, | | ೫೫ | ,, |
| ೫೬ | ಖ ೧ (೫) | ,, | ,, | | ೧೨ | ,, |
| ೫೭ | ಖ ೧ (೬) | ,, | ,, | | ೧೮ | ,, |
| ೫೮ | ಖ ೧ (೭) | ,, | ದೇವನಾಗರಿ ಲಿಪಿ | ,, | ೬೦ | ,, |
| ೫೯ | ಖ ೧ (೮) | ,, | ಕನ್ನಡ ,, | ,, | ೪ | ,, |
| ೬೦ | ಖ ೧ (೯) | ,, | ,, | ,, | ೨ | ,, |
| ೬೧ | ಖ ೧ (ಬಿಡಿ ೧.೧೮) | ,, | ದೇವನಾಗರಿ ಲಿಪಿ | ,, | ೬೨ | ೧೮೮೦ |

## (ಗ) ಪಾಮುಡಿ ಮನೆತನದ ಸಂಗ್ರಹ [ಧಾರವಾಡ]

| ಅ. ನಂ. | ಹಸ್ತಪ್ರತಿಯ ಸಂಕೇತ | | | ಲಿಪಿ | ಹಾಡುಗಳ ಸಂಖ್ಯೆ | ಕಾಲ |
|---|---|---|---|---|---|---|
| ೬೨ | ಗ (A) | ಹಸ್ತಪ್ರತಿ | ದಪ್ಪ ಕೋರಿಕಾಗದ | ಕನ್ನಡ | ೨೪ | ೧೮೮೦ |
| ೬೩ | ಗ (B) | ,, | ,, | ದೇವನಾಗರಿ | ೪೯ | ,, |
| ೬೪ | ಗ (C) | ,, | ಬಿಡಿಹಾಳೆ | ಕನ್ನಡ | ೧೦ | ೧೯೧೦ |
| ೬೫ | ಗ (D) | ,, | ,, | ,, | ೧ | ,, |
| ೬೬ | ಗ (E) | ,, | ,, | ತೆಲುಗು | ೩೦ | ,, |
| ೬೭ | ಗ (X) | ,, | ,, | ,, | ೭೯ | ,, |

## (ಘ) ಕಮಲಾಪುರ ನರಸಿಂಗರಾಯರ ಸಂಗ್ರಹ [ಧಾರವಾಡ]

| ಅ. ನಂ. | ಹಸ್ತಪ್ರತಿಯ ಸಂಕೇತ | | | ಲಿಪಿ | ಹಾಡುಗಳ ಸಂಖ್ಯೆ | ಕಾಲ |
|---|---|---|---|---|---|---|
| ೬೮ | ಘ (೧) | ಹಸ್ತಪ್ರತಿ | ಬಿಡಿಹಾಳೆ | ಕನ್ನಡ | ೧ | ೧೯೦೦ |
| ೬೯ | ಘ (೨) | ,, | ,, | ,, | ೨ | ,, |
| ೭೦ | ಘ (೩) | ,, | ,, | ತೆಲುಗು | ೧೦ | ,, |

## (ಚ) ಕರ್ನಾಟಕ ವಿಶ್ವವಿದ್ಯಾಲಯದ ಸಂಗ್ರಹ [ಧಾರವಾಡ]

| ಅ. ನಂ. | ಹಸ್ತಪ್ರತಿಯ ಸಂಕೇತ | | | ಲಿಪಿ | ಹಾಡುಗಳ ಸಂಖ್ಯೆ | ಕಾಲ |
|---|---|---|---|---|---|---|
| ೭೧ | ಚ (೧) | ತಾಳೆಗರಿಯ | ಪ್ರತಿ | ಕನ್ನಡ (೨೨೯೨) | ೩ | ೧೬೭೦ |

| ಅ. ನಂ. | ಹಸ್ತಪ್ರತಿಯ ಸಂಕೇತ | | | ಲಿಪಿ | ಹಾಡುಗಳ ಸಂಖ್ಯೆ | | ಕಾಲ |
|---|---|---|---|---|---|---|---|
| ೭೨ | ಚ (೨) | ,, | ,, | ,, | (೧೮೫೮) | ೯೫ | ೧೭೫೦ |
| ೭೩ | ಚ (೩) | ,, | ,, | ,, | (೪೯೭) | ೧೭ | ೧೭೦೦ |
| ೭೪ | ಚ (೪) | ,, | ,, | ,, | (೨೨೯೩) | ೨೦ | ೧೭೦೦ |
| ೭೫ | ಚ (ಜ್ಞ) | ಕಲ್ಲಚ್ಚಿನ | ಪ್ರತಿ | ,, | ( — ) | ೫೮ | ೧೮೬೮ |
| ೭೬ | ಚ (೫) | ಹಸ್ತಪ್ರತಿ | ,, | | (೧೧೧೪) | ೫ | ೧೮೭೩ |

## (ಛ) ಸತ್ಯಬೋಧರಾವ ನ. ಬಂಕಾಪುರ [ಸವಣೂರು]

| | | | | |
|---|---|---|---|---|
| ೭೭ | ಛ ಹಸ್ತಪ್ರತಿ ತಿಳಿವುಹಾಳೆ | ಕನ್ನಡ | ೮೬ | ೧೯೦೦ |

## (ಓ ೧. ಓ ೨) B. K ಕೃಷ್ಣಮೂರ್ತಿರಾವ್ [ಬೆಂಗಳೂರು]

| | | | | |
|---|---|---|---|---|
| ೭೮ | ಓ ೧ ಓ ೨ ಹಸ್ತಪ್ರತಿ | ಕನ್ನಡ | ೧೫ | ೧೯೧೦ |

## (ಝುಂ) ಪರ್ವತೀಕರ ತಮ್ಮಣ್ಣರಾಯರ ಸಂಗ್ರಹ [ಧಾರವಾಡ]

| | | | | | |
|---|---|---|---|---|---|
| ೭೯ | ಝುಂ (೧) | ಹಾಳೆಪುಸ್ತಕ | ದೇವನಾಗರಿ | | ೧೮೯೦ |
| ೮೦ | ಝುಂ (೨) | ,, | ,, | | ,, |
| ೮೧ | ಝುಂ (೩) | ,, | ಕನ್ನಡ | | ,, |
| ೮೨ | ಝುಂ (೪) | ,, | ,, | | ೧೯೦೦ |
| ೮೩ | ಝುಂ (೫) | ,, | ,, | | ,, |
| ೮೪ | ಝುಂ (೬) | ,, | ,, | | ,, |
| ೮೫ | ಝುಂ (೭) | ,, | ,, | | ,, |
| ೮೬ | ಝುಂ (೮) | ,, | ,, | ೧೫೦ | ,, |
| ೮೭ | ಝುಂ (೯) | ,, | ,, | | ,, |
| ೮೮ | ಝುಂ (೧೦) | ,, | ,, | | ,, |
| ೮೯ | ಝುಂ (೧೧) | ,, | ದೇವನಾಗರಿ | | ,, |
| ೯೦ | ಝುಂ (೧೨) | ,, | ಕನ್ನಡ–ಮೋಡಿ | | ,, |
| ೯೧ | ಝುಂ (೧೩) | ,, | ಕನ್ನಡ | | ,, |
| ೯೨ | ಝುಂ (೧೪) | ,, | ,, | | ,, |

| ಅ. ನಂ. | ಹಸ್ತಪ್ರತಿಯ ಸಂಕೇತ | ಲಿಪಿ | ಹಾಡುಗಳ ಸಂಖ್ಯೆ | ಕಾಲ |
|---|---|---|---|---|
| ೯೩ | ಝ (೧೫) ನೀಲಿಹಾಳಿ | ,, | | ,, |
| ೯೪ | ಝ (೧೬) ಬಿಳಿಹಾಳಿ | ದೇವನಾಗರಿ | | ,, |
| ೯೫ | ಝ ೧/೧೦ ,, | ಕನ್ನಡ | ೯೦ | ,, |
| ೯೬ | ಝ ೩/೧೦ ಕೋರಿಕಾಗದ | ದೇವನಾಗರಿ | | ,, |
| ೯೭ | ಝ ೫/೧೦ ,, | ,, | | ,, |
| ೯೮ | ಝ ೬/೧೦ ಬಿಳೀಕಾಗದ | ಕನ್ನಡಲಿಪಿ | ೧೪೯ | ,, |
| ೯೯ | ಝ ೮/೧೦ ಕೋರೀಕಾಗದದ | ದೇವನಾಗರಿ | ,, | ,, |
| ೧೦೦ | ಝ ೯/೧೦ ಬಿಳೀಕಾಗದದ | ಕನ್ನಡ | ,, | ,, |
| ೧೦೧ | ಝ ೧೦/೧೦ ,, | | ೩೫ | ,, |

## (ಟ) A. R ಸಂಜೀವರಾಯರು—ಅರೆಕೆರೆ [ತುಮಕೂರು]

| | | | | |
|---|---|---|---|---|
| ೧೦೨ | ಟ | ಹಸ್ತಪ್ರತಿ | ಕನ್ನಡ | ೭೫ ೧೯೩೭ |

## (ಠ೧ ಠ೨) T. V. ಗೋಪಿನಾಥರಾವ್ [ಬೆಂಗಳೂರು]

| | | | | |
|---|---|---|---|---|
| ೧೦೩ | ಠ (೧) | ಹಸ್ತಲಿಪಿ | ಕನ್ನಡ | ೫೦ ೧೯೦೦ |
| ೧೦೪ | ಠ (೨) | ಕಲ್ಮುದ್ರಿತ | ಕನ್ನಡ | ೬೦ ೧೮೫೦ |

## (ತ) M. ಗುರುರಾಜ ಶರ್ಮ [ಮೈಸೂರು]

| | | | | |
|---|---|---|---|---|
| ೧೦೫ | ತ ೧-೨ | ಹಸ್ತಪ್ರತಿ ಬಿಳಿಕಾಗದ | ಕನ್ನಡ | ೫೦ ೧೯೩೫ |

## (N) L. R. M. ಪಾಟೀಲರ ಸಂಗ್ರಹ [ನವಿಲ್ಗುಂದ]

| | | | | |
|---|---|---|---|---|
| ೧೦೬ | N. | ಕೋರಿಕಾಗದ ಹಸ್ತಪ್ರತಿ | ದೇವನಾಗರಿ | ೧೦೦ ೧೮೬೦ |

## (ಶ್ರೀ) ಲಕ್ಷ್ಮಣರಾವ ಇನಾಮದಾರ [ಧಾರವಾಡ]

| | | | | |
|---|---|---|---|---|
| ೧೦೭ | ಶ್ರೀ | ಹಸ್ತಪ್ರತಿ | ಕೋರಿಕಾಗದ | ೨೦೨ ೧೮೭೦ |

# ಆಧಾರ ಗ್ರಂಥಗಳು

೧ ಭಾರತೀಯ ಪ್ರಾಚೀನ ಚರಿತ್ರಕೋಶ (ಮರಾಠಿ)
ಸಿದ್ಧೇಶ್ವರಶಾಸ್ತ್ರಿ ಚಿತ್ರಾವ್

೨ ಪುರಾಣನಾಮ ಚೂಡಾಮಣಿ (ಕನ್ನಡ) [ಪಾನ್ಯಂ ಸುಂದರಶಾಸ್ತ್ರಿ
ಬೆನಗಲ್ ರಾಮರಾಯರು]

೩ ಭಾಗವತ (ಕಲ್ಯಾಣಸಂಪುಟ)

೪ ಭಾರತ (ಕುಂಭಕೋಣಂ ಸಂಪುಟ)

೫ ಭಾರತ ತಾತ್ಪರ್ಯನಿರ್ಣಯ (ಉಡುಪಿ)

೬ ರಾಮಾಯಣ (ಕಲ್ಯಾಣ ಸಂಪುಟ)

೭ ತೀರ್ಥಾಂಕ (ಕಲ್ಯಾಣ)

೮ ಪುರಾಣ (ಇದರಲ್ಲಿಯ ಪ್ರಮಾಣಗಳನ್ನೆಲ್ಲ ಭಾರತೀಯ-
ಪ್ರಾಚೀನ ಚರಿತ್ರಕೋಶದಿಂದ ತೆಗೆದುಕೊಂಡಿದೆ)

೯ ವಾಯುಸ್ತುತಿ (ಶ್ರೀತ್ರಿವಿಕ್ರಮ ಪಂಡಿತಾಚಾರ್ಯಕೃತ)

೧೦ ಮಧ್ವವಿಜಯ (ಶ್ರೀನಾರಾಯಣ ಪಂಡಿತಾಚಾರ್ಯಕೃತ)

೧೧ ದ್ವಾದಶಸ್ತೋತ್ರ (ಶ್ರೀ ಮಧ್ವಾಚಾರ್ಯಕೃತ)

೧೨ ತಂತ್ರಸಾರ ( ,, ,, ,, )

೧೩ ಭಗವದ್ಗೀತೆ

೧೪ ನಾರದಭಕ್ತಿಸೂತ್ರಗಳು

೧೫ ಸಂಗೀತ (South Indian Music I—V. P. Sambamurti)

೧೬ ಕುಮಾರವ್ಯಾಸನ ಭಾರತ

೧೭ Epigraphia-Indica Vol XXXI July 1955.

೧೮ ಹರಿಕಥಾಮೃತಸಾರ (ವರದೇಂದ್ರ, ಹರಿದಾಸ ಸಾಹಿತ್ಯ ಮಂಡಳ
ಲಿಂಗಸೂಗೂರು)

೧೯ ವಿಜಯದಾಸರ ಸುಳಾದಿ ,, ,, ,,

೨೦ ದಶೋಪನಿಷತ್ತುಗಳು. ,, ,, ,,

ಶ್ರೀಪತಿಯು ನಮಗೆ ಸಂಪದವೀಯಲಿ !

# ೧. ಶ್ರೀಹರಿಯ ಸರ್ವೋತ್ತಮತ್ವ

೧

ಸುಳಾದಿ : ಧ್ರುವತಾಳ

[೧]ನಿನ್ನ ಬೊಮ್ಮಮೂರುತಿಗೆ ನಮೋ ನಮೋ |
ನಿನ್ನ ರುದ್ರಮೂರುತಿಗೆ ನಮೋ ನಮೋ |
ನಿನ್ನ ಇಂದ್ರಮೂರುತಿಗೆ ನಮೋ ನಮೋ |
ನಿನ್ನ ಚಂದ್ರಮೂರುತಿಗೆ ನಮೋ ನಮೋ |
ನಿನ್ನ ಸ್ಥಾವರ ಮೂರುತಿಗೆ ನಮೋ ನಮೋ |
ನಿನ್ನ ಜಂಗಮ ಮೂರುತಿಗೆ ನಮೋ ನಮೋ |
ನಿನ್ನ ಶ್ರೀಮೂರ್ತಿಗೆ ನಮೋ ಪುರಂದರವಿಠಲ ॥ ೧ ॥

ಮಟ್ಟೆತಾಳ

ಬ್ರಹ್ಮಾಂಡವೇ ಮಂಟಪ ಜ್ಯೋತಿಶ್ಚಕ್ರವೇ ದೀಪ |
ಮಹಾ ಮೇರು ಸಿಂಹಾಸನ ಮಂದಾಕಿನಿ ಮಜ್ಜನ |
ಮಹಾಲಕುಮಿ ಅಂಬರಾಭರಣ ಮಂದಾರ-ಪಾರಿಜಾತಮಾಲೆ |
ಮಹಾ ಮೇರು ಸಿಂಹಾಸನ ಶ್ರೀಪುರಂದರವಿಠಲಗೆ ॥ ೨ ॥

ತ್ರಿವಿಡತಾಳ

ಆಲಯವೆಂಬೊ ರಾಶಿಯಲ್ಲಿ ಆಲದೆಲೆ ಪೊಂದೊಟ್ಟಿಲು |
ಅಲಾ ಜೋಯೆಂದು ಪಾಡುವ ವೇದಾಂತದೇವಿಯರು |
ಆಲದೆಲೆಯ ಬಾಲಕ ಪುರಂದರವಿಠಲ ॥ ೩ ॥

---

೧ ಜ (೨) ಇ (ಮುದ್ರಿತ) ಪ್ರತಿಗಳಿಂದ ಆರಿಸಿದೆ

ಅಟ್ಟತಾಳ

ಜಗದುದರನಾಗಿದ್ದು ಜಗದೊಳಗಿಪ್ಪೆ ।
ಜಗದ್ವ್ಯಾಪಿಯಾಗಿ ನೀ ಜಗವ ಪಾಲಿಸುವೆ ।
ಜಗವ ನಲಿದಾಡಿಸುತಲಿಪ್ಪೆ ದೇವಾ ।
ಜಗದನ್ಯ ಜಗನ್ನಾಥ ಪುರಂದರವಿಟ್ಠಲ ಮೋಹನ ಜಗದ್ವಂದ್ಯ ॥ ೪ ॥

ಏಕತಾಳ

ಬ್ರಹ್ಮಾಂಡ ಕಟಾಹವೇ ಪುಟಚಂಡು ।
ಬ್ರಹ್ಮನ ಪ್ರಳಯವೇ ಎವೆನೋಟ ।
ನಮ್ಮ ಪುರಂದರವಿಠ್ಠಲರಾಯನಾಡುವ ಪುಟಚಂಡು ॥ ೫ ॥

ಜತೆ

ಜಯ ಜಯ ಜನಾರ್ದನ ಜಯನಾಥ ।
ಪುರಂದರವಿಠಲ ಮೋಹನ ಜಯ ಜಯ ॥

೨

ಸುಳಾದಿ

ಧ್ರುವತಾಳ

[೧]ಹರಿ ನಡೆಯದಿರಲು ನಡೆಯಲಿಲ್ಲೀ ಜಗವು ।
ಹರಿ ನುಡಿಯದಿರಲು ನುಡಿಯಲಿಲ್ಲೀ ಜಗವು ।
ಹರಿ ನೋಡದಿರಲು ನೋಡಲಿಲ್ಲೀ ಜಗವು ।
ಹರಿ ಮಾಡದಿರಲು ಮಾಡಲಿಲ್ಲೀ ಜಗವು ।
ಹರಿ ಎವೆಯಿಕ್ಕದಿರಲು ಎವೆಯಿಕ್ಕದೀ ಜಗವು ।
ಹರಿ ಉಸಿರಿಕ್ಕದಿರೆ ಉಸಿರಿಕ್ಕದೀ ಜಗವು ।
ಹರಿ ಸರ್ವಚೇಷ್ಟಕ ಹರಿ ಪುರಂದರವಿಠಲ ।
ಹರಿ ಆಡಿಸಿದಂತೆ ಆಡಿಸುತಿಪ್ಪುದೀ ಜಗವು । ॥ ೧ ॥

---

೧ ಜ (೨) ಇ (ಮುದ್ರಿತ) ಪ್ರತಿಗಳಿಂದ ಆರಿಸಿದೆ

### ಮಟ್ಟತಾಳ

ಸಿರಿವತ್ಸ ಸಿರಿಧರ ಸುರಗಣಮುಕುಟಮಂಡಿತ ।
ಚರಣಾರವಿಂದ ಪುರುಷೋತ್ತಮ ವಾಮನ ವಾಸುದೇವ ।
ಹರಿದೇವೋತ್ತಮ ದೇವಕೀನಂದನ ಭೂವಲ್ಲಭ ಗೋವರ್ಧನೋದ್ಧಾರ ।
ಪುರುಷೋತ್ತಮ ವಾಮನ ವಾಸುದೇವ ಪರಮೇಶ್ವರ ।
ಪರಂತಪ ಪುರಂದರವಿಠಲರಾಯ ಪುಂಡಲೀಕ- ।
ವರದ ಪುರುಷೋತ್ತಮ ವಾಮನ ವಾಸುದೇವ ॥ ೧ ॥

### ತ್ರಿವಿಡೆತಾಳ

ಮುಂದೆ ನೃಕಂಠೀರವ ಕಂಬಿಕಾರನಾಗಿ ।
ನಂದಗೋಪನಂದನನಹನು ಹಿಂದಿನ ಕಾಲಾಳು ।
ಅಂಜದಿರೆಲೆ ಜೀವ ರಾಮ-ಲಕ್ಷ್ಮಣರು ಧನುರ್ಧರರಾಗಿ ಎಡಬಲದಲ್ಲಿ ।
ತಂದೆ ತಾಯಿ ಶಿಶುವ ನೋಡುವ ಅಂದದಲಯ್ದಾರು ।
ಅಂಜದಿರೆಲೊ ಜೀವ ಅನಿಮಿತ್ತ ಬಂಧು ಕಾಣೋ ತನುಸಂ-
ಬಂಧಿಯಂತಲ್ಲ ಅನವರತ ಪುರಂದರವಿಠಲನ ಕಾಪು ಘನವೊ ॥ ೨ ॥

### ಝಂಪೆ ತಾಳ

ನೀನನಂತಮಹಿಮನೆಂದರಿತರಿತು ಮ ।
ತ್ತೇನ ಶಂಕೆ ಆತಂಕವಿಲ್ಲದೆಯೆ ನಡೆಗೊಮ್ಮೆ ಕರೆವೆ ।
ನಿನ್ನನಯ್ಯ ನಾನಿನ್ನನಯ್ಯ ಅನು ನುಡಿಗೊಮ್ಮೆ ಕರೆವೆ ।
ಅಡಿಗಡಿಗೆ ಕರೆವೆ ನಿನ್ನನಯ್ಯ ನುಡಿಗೊಮ್ಮೆ ಕರೆವೆ ।
ಈ ಅಪರಾಧಕ್ಕೆ ನನ್ನ ತೊತ್ತುತೊಂಡರವನಾಗಿ ।
ತೋರುತಿಹೆನ್ನೈ ಪುರಂದರವಿಠಲ ॥ ೩ ॥

### ರೂಪಕತಾಳ

ನಿನ್ನಂಥವನು ನಾನಾಗಬೇಕು ಎಂದು ಎಂದೂ ಕಾಮಿಸೆ ।
ನಿನ್ನಂಥವರಿಲ್ಲವಾಗಿ [illegible] ।

ಮುನ್ನಿನ ಮುನಿಗಳಿಗೆ ಮನುಗಳಿಗೆ ಮತ್ತವರುಗಳಿಗೆ |
ನಿನ್ನಂಥವರಿಲ್ಲವಾಗಿ ನೀನೇ ಸರಿ ಪುರಂದರವಿಠಲ || ೫ ||

ಅಟತಾಳ

ಆಂಜನೇಯುನ ಕೂಡಿಕೊಂಡು |
ಭುಂಜಿಸಬೇಕೆಂದು ರಾಮು ಕರೆಯಲು |
ಎಂಜಲ ಹರಿವಾಣವನ್ನೆತ್ತಿಕೊಂಡು ಬಂದು |
ಎಂಜಲವುಂಡುಣ್ಣ ಕಲಿಸಿದ ಹನುಮಂತ |
ಕಂಜಾಕ್ಷ ಪುರಂದರವಿಠಲನ |
ಎಂಜಲನುಂಡರು ಸಕಲ ದೇವತೆಗಳು ! || ೬ ||

ಏಕತಾಳ

ಅಂದು ಇಂದು ಹರಿ ಹರಿ |
ಎಂದೆಂದು ನೀನೇ ಗತಿ ಮತಿ ಇ- |
ನ್ನಿಂದಿರೇಶ ಹರಿ ನಂದನಂದನನೇ ರಾಗದಿ |
ಇಂದಿರೇಶ ಒಂದೇ ಮಾತು ಪುರಂದರವಿಠಲ ತಪ್ಪದು || ೭ ||

ಜತೆ

ನಿತ್ಯಾನಿತ್ಯ ವಸ್ತುಗಳೊಳಗೆ |
ನಿತ್ಯತೃಪ್ತ ಪುರಂದರ ವಿಠಲ ||

೩

ಉಗಾಭೋಗ

[೧] ಶ್ರೀದೇವಿಯ ಮೂರುತಿಯಲ್ಲಿ ಭೂದೇವ ಪರಿಪೂರ್ಣ ನೀನೆಯೋ |
ಅವ್ಯಕ್ತಾಕಾಶದಲಿ ಸ್ವಾಮಿ ಅವ್ಯಕ್ತ ಪರಿಪೂರ್ಣ ನೀನೆಯೋ |
ಅನಂತಾನಂತದಲಿ ಸ್ವಾಮಿ ಅನಂತಪರಿಪೂರ್ಣ ನೀನೆಯೋ |
ಜಗನ್ನಾಯಕ ಪುರಂದರವಿಠಲ ಸರ್ವಜಗಕೆ ಪರಿಪೂರ್ಣ ನೀನೆಯೋ || ೧ ||

---

೧ ಅ (೧೧) ಪ್ರತಿಯೊಂದರಲ್ಲಿ ಸಿಕ್ಕುತ್ತದೆ.

೪

ಉಗಾಭೋಗ

[೧]ನಿನಗೆ ನೀನೇ ಮೋಹ ನಿನಗೆ ನೀನೇ ಪ್ರೀತಿ ।
ನಿನಗೆ ನೀನೇ ಭಕ್ತ ನಿನಗೆ ನೀನೇ ದ್ವೇಷಿ ।
ನಿನಗೆ ನೀನೇ ಜ್ಞಾನಿ ನಿನಗೆ ನೀನೇ ಮಾಳ್ಪೆ ।
ಪುರಂದರವಿಠಲ ॥ ೧ ॥

೫

ಉಗಾಭೋಗ

[೨]ಆರು ಅಕ್ಷರವುಳ್ಳವ್ಯಾಹೃತಿಯಿಂದ ಓಂಕಾರವಾಗುವುದು ಕೇಳಿ
ಈ ರೀತಿ ಇಪ್ಪತ್ತು ನಾಲ್ಕು ಅಕ್ಷರಗಳಿಂದ ।
ತೋರುತಲಿ ಗಾಯತ್ರಿಯು ರಚಿಸಿದ ಹರಿಯು ।
ಮೆರೆವುವೈ ಪುರುಷಸೂಕ್ತಾದಿ ಅನಂತವೇದರಾಶಿ ।
ದೊರೆ ಎಂದು ಪೊಗಳುವ ಓಂಕಾರ ಶ್ರೀಕಾರ ।
ಮೆರೆವುವೈ ಆಯ್ವತ್ತೊಂದು ಅಕ್ಷರಗಳು ।
ಈ ರೀತಿ ಅಶೇಷಗುಣಾಧಾರಯೆಂದು ।
ನಾರಾಯಣೋಥ ಪೂರ್ಣಗುಣಯುತ ।
ಭರದಿ ಜ್ಞಾನರೂಪಶಬ್ದನೊ ।
ಮೆರೆವ ದೇವೇಶ ಶತರ್ದನ ಧರಿಸಿದೆ ।
ಪುರಂದರವಿಠಲ ॥ ೧ ॥

೬

ಉಗಾಭೋಗ

[೩]ಅಲ್ಲಿ ವನಗಳುಂಟು ಅಪ್ರಾಕೃತವಾದ ।
ಫಲಪುಷ್ಪಗಳಿಂದೊಪ್ಪುತ್ತಲಿಹುದು ।

---

೧ ಧ ಪ್ರತಿಯಿಂದ ತೆಗೆದುಕೊಂಡಿದೆ.
೨ ಧ ಪ್ರತಿಯಿಂದ ಆರಿಸಿದೆ.
೩ ಎ. ಓ. ಪ್ರ[illegible].

ಪಕ್ಷಿಜಾತಿಗಳುಂಟು ಅತಿವಿಲಕ್ಷಣವಾದ ।
ಕಿಲಕಿಲಶಬ್ದವು ರಂಜಿಸುವ ನುಡಿಗಳು ।
ಮುಕುತರು ಬಂದು ಜಲಕ್ರೀಡೆಗಳ ಮಾಡಿ ಸುಖಿಪರು ।
ಇಂಥ ಸುಖ ಬೇಕಾದರೆ ನೀಚವೃತ್ತಿಯ ಬಿಟ್ಟು ।
ಪರಲೋಕ ಸುಖವೀವ ಪುರಂದರವಿಠಲನ ।
ಭಜಿಸು ಜೀವ ॥ ೧ ॥

೭

ಉಗಾಭೋಗ

[1]ಶ್ವೇತದ್ವೀಪದಿ ಆಮುಕ್ತಸ್ಥಳದಲ್ಲಿ
ಚತುರ್ಮುಖ-ಭವೇಂದ್ರಾದಿ ಸುರರು ।
ಭೂಭಾರವನಿಳುಹಬೇಕೆಂದು ।
ನಿನ್ನ ಸ್ತುತಿಸೆ ಸ್ತುತಿಸೆ ಬಹುಕಾಲ ।
ಮತ್ಸ್ಯ-ಕೂರ್ಮ-ವರಾಹನಾಗಿ ।
ಕಾಲಕಾಲದಲಿ ಶಿಷ್ಟರ ಪಾಲಿಪನೆಂದು ।
ಬಿರುದು ಸಲ್ಲವುದು ಶರಣಾಗತವಜ್ರಪಂಜರ ।
ಸಿರಿಪುರಂದರವಿಠಲ ॥ ೧ ॥

೮

ಸುಳಾದಿ :

ಧ್ರುವತಾಳ

[2]ಶ್ರೀನಾರಾಯಣದೇವ ನೀನು
ಶ್ರೀಲಕುಮಿಯ ಕೂಡ ಸುಖಿಸುತಿದ್ದು ।
ಶ್ರೀವಾಸುದೇವ ನೀ
ಮಾಯಾದೇವಿಯಲ್ಲಿ ಆ ಬೊಮ್ಮಕುವರನ ಪಡೆದೆಯಲ್ಲ ।
ಶ್ರೀಪ್ರದ್ಯುಮ್ನ ನೀ
ಕೃತಿಯಲ್ಲಿ ವಾಣಿ-ಭಾರತಿಯರ ಪಡೆದೆಯಲ್ಲ ।

---

೧ ಅ (೧೧) ಪ್ರತಿಯೊಂದರಲ್ಲಿಯೇ ಸಿಕ್ಕಿದೆ.

೨ ಡ (೨) ಇ (ಮುದ್ರಿತ) ಪ್ರತಿಗಳಿಂದ ತೆಗೆದುಕೊಂಡಿದೆ.

 

ಶ್ರೀಸಂಕರ್ಷಣ ದೇವ ನೀ
ಜಯಾದೇವಿಯಲ್ಲಿ ವಾಯುಕುಮಾರನ ಪಡೆದೆಯಲ್ಲ ।
ಆ ಕುವರರಿಗೆ ಆ ಕುವರಿಯರನು
ಮದುವೆಮಾಡಿದೆಯಲ್ಲ ಪುರಂದರವಿಠಲ ॥ ೧ ॥

ಮಟ್ಟಿತಾಳ

ವಾಸುದೇವ ಮಾಯಾದೇವಿ
ಪ್ರದ್ಯುಮ್ನದೇವ ಕೃತಿದೇವಿ ।
ಸಂಕರ್ಷಣದೇವ ಜಯಾದೇವಿ
ನಿಮ್ಮೊಳು ನೀವೇ ಕೊಡು-ಕೊಳೆಯುಳ್ಳವರು ।
ನಿಮ್ಮೊಳು ನೀವೇ ದಿಬ್ಬಣಿಗರು
ನಿಮ್ಮೊಳು ನೀವೇ ಬೀಗರಾದಿರಿ ।
ಬಿದ್ದಿನವರಾದಿರಿ
ಪುರಂದರವಿಠಲ ॥ ೨ ॥

ರೂಪಕತಾಳ

ಬೊಮ್ಮ-ಸರಸ್ವತಿ ಪಡೆದರಯ್ಯ ಶೇಷದೇವನ ।
ಉಮ್ಮೇಶ ದೇವನ; ವಾಯುಭಾರತಿಯರು ಪಡೆದರಯ್ಯ ।
ಶೇಷ-ಸುಪರ್ಣ-ಗಿರೀಶ-ಮಹೇಂದ್ರರ ।
ಪುತ್ರ ಪೌತ್ರ ಪರಂಪರೆಯಾಗಿ ಇಪ್ಪರು ಪುರಂದರವಿಠಲಾ ॥ ೩ ॥

ಝಂಪೆತಾಳ

ಆದಿಸೃಷ್ಟಿಯೊಳು ಆರಾರು ಮೊದಲುದಿಸಿದರು ।
ಅವರ ನೆರೆ ಅಧಿಕ ಅವರ ನೋಡಯ್ಯ ।
ಅವರನಂತರದಲ್ಲಿ ಕಾಲ-ಜಯಾದಿಗಳು ಉದಿಸಿದರು ।
ಏನು ಆ ಮಹಂತರಾದವರ ಅಳವ ನೋಡಯ್ಯ ।
ಅವರನಂತರ ತಾರತಮ್ಯ ಅನಾದಿಸಿದ್ಧವಾಗೆ ।
ಪುರಂದರವಿಠಲನ ಸಂತತಿಯ ನೋಡಯ್ಯ! ॥ ೪ ॥

ತ್ರಿವಿಡೆತಾಳ

ಸಿರಿ ಚತುರ್ಮುಖ ಪಂಚಮುಖಾದಿ ।
ಸುರರು ಮನು ಮುನಿ ಮನುಜೋತ್ತ-
ಮರು ತಾರತಮ್ಯತಾಯುಕ್ತರು ।
ಹರಿಭಕ್ತಿ ಹರಿಜ್ಞಾನದಿಂದ ತಾರತಮ್ಯದಿ ।
ಸಿರಿ ಪುರಂದರ ವಿಠಲರಾಯನ ।
ಚರಣಶರಣದೆ ಸದ್ದೈವಂಗಳು ॥ ೫ ॥

ಅಟತಾಳ

ನಿತ್ಯ ಪತ್ನೀಭಾವದೊಳಿಹ ಲಕುಮಿಗೆ ।
ನಿತ್ಯ ಪುತ್ರಭಾವ ಬೊಮ್ಮಪ್ರಾಣರಿಗೆ ।
ನಿತ್ಯ ಪೌತ್ರಭಾವ ವೈನತೇಯ ಶೇಷ ಗಿರೀಶದೇವರಿಗೆ ।
ನಿತ್ಯ ನಪ್ತೃಭಾವ ಇಂದ್ರ ಕಾಮರಿಗೆ ।
ನಿತ್ಯ ಭೃತ್ಯಭಾವ ಸುರಾದಿಗಳಿಗೆ ।
ನಿತ್ಯ ಜಾರಭಾವ ಅಪ್ಸರಸರಿಗೆ ।
ನಿತ್ಯ ಪುರಂದರವಿಠಲರಾಯ ॥ ೬ ॥

ಏಕತಾಳ

ಸತ್ಯಸ್ವರೂಪನೆ ಸತ್ಯಕರ್ಮಸಂಕಲ್ಪನೆ ।
ಸತ್ಯಕಾಮನೆ ಸತ್ಯವರದನೆ ।
ಸತ್ಯಜಗಜ್ಜನ್ಮಾದಿಕಾರಣನೆ ।
ಸತ್ಯಭಾಷಣನೆ ಸತ್ಯಭೂಷಣನೆ ।
ಸತ್ಯಜನೇಡ್ಯನೆ ಸತ್ಯಮಹಿಮನೆ ।
ಸತ್ಯ ಪುರಂದರವಿಠಲರಾಯ ॥ ೭ ॥

ಜತೆ

. ಮನ-ವಚನಗಳಲ್ಲಿ ಕಾಯ-ಕರಣಗಳಲ್ಲಿ ।
ನೀನೆ ನೀನೇ ನೀನೇ ಪುರಂದರವಿಠಲಾ ॥ ೮ ॥

೯

## ಸುಳಾದಿ

### ಧ್ರುವತಾಳ

[೧]ನೀನೇ ಕಾರಣ ಅಕಾರಣರು ಬೊಮ್ಮಾದಿಗಳು ।
ನೀನೇ ಕರ್ತೃ ಅಕರ್ತೃಗಳವರು ।
ಸರ್ವತಂತ್ರ ಸ್ವತಂತ್ರ ನೀನು ಅಸ್ವತಂತ್ರರವರು ।
ಮೂಲ ನೀನು ಮಧ್ಯಮರವರು ।
ನಿತ್ಯ ಎಂದೆನಿಪೆ ಲಯಕ್ಕಾಗುವರವರು ।
ಭೋಕ್ತೃ ಎಂದೆನಿಪೆ ಸರ್ವಾಂತರಾತ್ಮಕನಾಗಿ ।
ಸ್ವೀಕರಿಸುವ ಶಕ್ತಿ ನಿನ್ನಧೀನವಯ್ಯ ।
ಅನಾದಿಕಾಲ-ಕರ್ಮ-ಗುಣಗಳನನುಸರಿಸಿ ।
ಫಲಗಳನುಣಿಸುವೆ ಪುರಂದರವಿಠಲ ॥ ೧ ॥

### ಮಟ್ಟತಾಳ

ತನ್ನಿಂದೊಂದೆರಡು ಜ್ಞಾನಗುಣಾಧಿಕರ ಮೊದಲುಮಾಡಿಕೊಂಡು ।
ಬೊಮ್ಮನ ಪರಿಯಂತ ತಾರತಮ್ಯ ಪಂಚಭೇದಮಾರ್ಗವರಿತು ।
ನವವಿಧಸದ್ಭಕ್ತಿಯುಕ್ತನಾಗಿ ।
ನಿತ್ಯ ಜನನ-ಮರಣದೂರ ಪುರಂದರವಿಠಲನ್ನ
ಗುಣರೂಪಕ್ರಿಯೆಯನ್ನು ತಿಳಿಯಬೇಕು ॥ ೨ ॥

### ತ್ರಿವಿಡತಾಳ

ಪುರುಷಸೂಕ್ತವೇ ಮೊದಲಾದ ವೇದಗಳಿಂದ ।
ಮತ್ತೆ ಕೆಲವು ಉಪನಿಷದ್ವೇದ್ಯನು ನೀನು ।
ಮಹಾಭಾರತ ಪುರಾಣಗಳಲಿದ್ದ ರೂಪಗುಣಕ್ರಿಯೆಗಳನು ।
ಸಾರ್ವಭೌಮ ಬೊಮ್ಮ ಬಲ್ಲ ।
ಆತನಿಂದಲಿ ವಾಣಿ-ಭಾರತಿಯರು ಬಲ್ಲರು ।

---

೧. ೬ (ಬಿಡಿ ೩) ಮತ್ತು ೮ (ಮುದ್ರಿತ) ಪ್ರತಿಗಳಿಂದ ತೆಗೆದುಕೊಂಡಿದೆ.

ವಾಣಿಯಿಂದಲಿ ಮಹಾದೇವ ತಾ ಬಲ್ಲನು ।
ರುದ್ರನಿಂದಲಿ ಉಮಾದೇವಿಯು ಬಲ್ಲಳು ।
ಉಮೆಯಿಂದ ಇಂದ್ರ-ಕಾಮರು ಬಲ್ಲರು ।
ಸಕಲದೇವತೆಗಳು ಪುರಂದರವಿಠಲನ ।
ಬಲ್ಲರು ಅರಿಯರು ಸಾಕಲ್ಯದಿಂದ ॥ ೩ ॥

ಅಟ್ಟತಾಳ

ಓಂಕಾರ ಪ್ರತಿಪಾದ್ಯ ವ್ಯಾಹೃತಿಯೊಳಗಿದ್ದು ।
ಗಾಯತ್ರಿಯೆನಿಸುವೆ ಪುರುಷಸೂಕ್ತಮೇಯ ।
ಏಕೋತ್ತರ ಪಂಚಾಶದ್ವರ್ಣಗಳಲ್ಲಿ ।
ವರ್ಣಾಭಿಮಾನಿಗಳಿಂದ ವರಣೀಯನಾಗಿಪ್ಪೆ ।
ವರಕಲ್ಪಕಲ್ಪಕಸ್ಕೂ ವರದೇಶ ವರದ ಪುರಂದರವಿಠಲ ।
ವ್ಯಾಹೃತಿಯೊಳಗಿದ್ದು ಗಾಯತ್ರಿಯೆನಿಸುವೆ ॥ ೪ ॥

ಆದಿತಾಳ

ಓಂ ಅಶೇಷ ಗುಣಾಧಾರ ಇತಿ ನಾರಾಯಣೋಪ್ಯಸೌ ।
ಪೂರ್ಣೋಭೂತಿವರೋಽನಂತ ಗುಣೋ ।
ಸುಖೋ ಯದ್ ವ್ಯಾಹೃತೀರಿತಃ ।
ಗುಣೈಸ್ತತಃ ಪ್ರಸವಿತಾವರಣೀಯಾನ್ ಗುಣೋನ್ನತೇ ।
ಭಾರತೀಜ್ಞಾನರೂಪತ್ವಾತ್ ಭರ್ಗೋಧೇಯೋಽಖಿಲೈರ್ಜನೈಃ ।
ಪ್ರೇರಕಃ ಶೇಷ ಬುದ್ಧೀನಾಂ ಸ ಗಾಯತ್ರ್ಯರ್ಥ ಈರಿತಃ ।
ಪುರಂದರವಿಠಲ ಸರ್ವೋತ್ತಮ ಕಾಣಿರೊ ! ॥ ೫ ॥

ಜತೆ

ನಿನ್ನ ಮಹಿಮೆಗಳ ನೀ ಬಲ್ಲೆಯಲ್ಲದೆ ।
ಅನ್ಯರು ಬಲ್ಲರೆ ಪುರಂದರವಿಠಲ ॥

## ೧೦

ರಾಗ—ಧನ್ಯಾಸಿ ತಾಳ—ಆದಿ

[1]ನಾರಾಯಣ ಗೋವಿಂದ—ಹರಿಹರಿ—
ನಾರಾಯಣ ಗೋವಿಂದ ॥ ಪ ॥

ನಾರಾಯಣ ಗೋವಿಂದ ಮುಕುಂದ ।
ಪರತರ ಪರಮಾನಂದ ॥ ಅ. ಪಲ್ಲ ॥

ಮೊದಲುಮತ್ಸ್ಯನಾಗಿ ಉದಿಸಿ ಸೋಮನನು ।
ಸದೆದು ವೇದಗಳ ತಂದ ॥ ೧ ॥

ಮಂದರಗಿರಿಯಲಿ ಸಿಂಧುಮಥಿಸಿ ಸುಧೆ
ತಂದು ಭಕ್ತರಿಗುಣಲೆಂದ ॥ ೨ ॥

ಭೂಮಿಯ ಕದಿದಾ ಖಳನನು ಮರ್ದಿಸಿ ।
ಆ ಮಹಾಸತಿಯಳ ತಂದ ॥ ೩ ॥

ದುರುಳಹಿರಣ್ಯನ ಕರುಳುಬಗೆದು ತನ್ನ ।
ಕೊರಳೊಳಗಿಟ್ಟಾನಂದದಿಂದ ॥ ೪ ॥

ಪುಟ್ಟನಾಗಿ ದಾನಕೊಟ್ಟ ಬಲಿಯ ತಲೆ ।
ಮೆಟ್ಟಿತುಳಿದ ಬಗೆಯಿಂದ ॥ ೫ ॥

ಧಾತ್ರಿಯೊಳಗೆ ಮುನಿಪುತ್ರನಾಗಿ ಬಂದು ।
ಕ್ಷತ್ರಿಯರೆಲ್ಲರ ಕೊಂದ ॥ ೬ ॥

ಮಡದಿಗಾಗಿ ತಾ ಕಡಲನೆ ಕಟ್ಟಿ ।
ಹಿಡಿದು ರಾವಣನ ಕೊಂದ ॥ ೭ ॥

---

೧. ಓ. ಪ್ರತಿಯಿಂದ ತೆಗೆದುಕೊಂಡಿದೆ

ಗೋಕುಲದೊಳು ಹುಟ್ಟಿ ಆಕಳ ಕಾಯ್ದ ।
ಶ್ರೀಕೃಷ್ಣನು ತಾ ಬಂದ ॥ ೮ ॥

ಛಲದಲಿ ತ್ರಿಪುರರ ಸತಿಯರ ವ್ರತದ ।
ಫಲವನಳಿದ ಬಗೆಯಿಂದ ॥ ೯ ॥

ಧರೆಯೊಳು ಪರಮನೀಚರ ಸವರಲು ಕು-
ದುರೆಯನೇರಿದ ಕಲಿ ಚೆಂದ ॥ ೧೦ ॥

ದೋಷದೂರ ಶ್ರೀಪುರಂದರವಿಠಲ ।
ಪೋಷಿಪ ಭಕ್ತರ ವೃಂದ ॥ ೧೧ ॥

೧೧

ರಾಗ—ಕಾಂಬೋದಿ ತಾಳ—ಝಂಪೆ

[೧]ರಾಮ ಎನ್ನುವ ಎರಡು ಅಕ್ಷರದ ಮಹಿಮೆಯನು ।
ಪಾಮರರು ತಾವೇನ ಬಲ್ಲರಯ್ಯ ॥ ಪ ॥

ರಾಯೆಂದ ಮಾತ್ರದೊಳು ರಕ್ತಮಾಂಸದೊಳಿದ್ದ ।
ಆಯಸ್ಥಿಗತವಾದ ಅತಿಪಾಪವನ್ನು ॥
ಮಾಯವನು ಮಾಡಿ ಮಹಾರಾಯ ಮುಕ್ತಿಯ ಕೊಡುವ ।
ದಾಯವನು ವಾಲ್ಮೀಕಿ ಮುನಿರಾಯಬಲ್ಲ ॥ ೧ ॥

ಮತ್ತೆ ಮ ಎಂದೆನಲು ಹೊರಬಿದ್ದ ಪಾಪಗಳು ।
ಒತ್ತಿ ಒಳ ಪೊಗದಂತೆಯೆ ಕವಾಟವಾಗಿ ।
ಚಿತ್ತಕಾಯಗಳ ಸುಪವಿತ್ರಮಾಡುವ ಪರಿಯ ।
ಭಕ್ತವರ ಹನುಮಂತ ತಾನೊಬ್ಬ ಬಲ್ಲ ॥ ೨ ॥

ಧರೆಯೊಳೀನಾಮಕ್ಕೆ ಸರಿಮಿಗಿಲು ಇಲ್ಲೆಂದು ।
ಪರಮವೇದಗಳೆಲ್ಲ ಪೊಗಳುತಿಹವು ॥
ಸಿರಿಯರಸ ಶ್ರೀಪುರಂದರವಿಠಲರಾಮನನು ।
ವರ ಕಾಶಿಯೊಳಗಿಪ್ಪ ಶಿವನು ತಾ ಬಲ್ಲ ॥ ೩ ॥

---

೧ ಝ (೧೦) ಪ್ರತಿಯೊಂದರಲ್ಲಿಯೇ ಸಿಕ್ಕುತ್ತಿದೆ.

## ೧೨

### ಸುಳಾದಿ

#### ಧ್ರುವತಾಳ

[೧]ಈ ಮರ್ತ್ಯದೊಳಗಿಲ್ಲ ಆರಸಿ ನೋಡಲು ದೇವ ।
ಅರಸು ಮೆಚ್ಚಲು ಪ್ರಜೆ ದ್ವೇಷಿಸುವರು ।
ಆಳುಗಳು ಒಲಿದಲ್ಲಿ ಅರಸು ಮೆಚ್ಚನು ಒಮ್ಮೆ ।
ಈ ಮರ್ತ್ಯಜನರ ಚರಿತವು ಎಲೊ ರಂಗ ।
ಮೂಲೋಕದರಸು ನೀ ನಿನ್ನಯ ಭಕ್ತ ಜನರುಗಳು ।
ನೀ ಕರುಣಿಸಲು ತಾವು ಕರುಣಿಸುವರು ।
ನೀನೊಲಿಯದಿರೆ ಒಮ್ಮೆಯೂ ತಿರುಗಿ ನೋಡರು ಹರಿಯೆ ।
ಈ ಪರಿಯ ನಿನ್ನ ಆಜ್ಞೆಯಲಿ ಈ ಮಹಾವಿಭವದೊಳು ।
ಆರು ಮೊರೆಯಾಗುವರು ಆರು ರಕ್ಷಿಪರೆನ್ನ ।
ಆರಂಜದಿರೆಂದು ಅಭಯವನೀವರ ಕಾಣೆ ।
ಶ್ರೀನಾಥ ಅನಿಮಿತ್ತದಯಾಸಿಂಧೊ ।
ನಿನ್ನ ದಾಸರ ಒಲುಮೆಯ ಪಾಲಿಸೊ ಗುಣನಿಧೆ ।
ನಿನ್ನ ಚರಿತಾಮೃತವ ತೋರಿ ಸಲಹಯ್ಯ ।
ಪ್ರಸನ್ನಮೂರುತಿ ಅಹೋಬಲನಿಲಯ ಪುರಂದರವಿಟ್ಠಲರಾಯ ॥ ೧ ॥

#### ಮಟ್ಟತಾಳ

ಜಯ ಜಯ ಬದರಿಕಾಶ್ರಮನಾರಾಯಣ ।
ಜಯ ಜಯ ಬಾದರಾಯಣ ಪ್ರವೀಣ ।
ಜಯ ಜಯ ಪ್ರಯಾಗದಲಿಪ್ಪನಾರಾಯಣ ।
ಜಯ ಜಯ ಕಾಶೀ ಬಿಂದುಮಾಧವನೇ ।
ಜಯ ಜಯ ಜಗನ್ನಾಥ ಸಿಂಹಾದ್ರಿ ।
ಜಯ ಜಯ ಅಹೋಬಲ ನಾರಸಿಂಹ ।

೧ ಅ (೧೧) ಪ್ರತಿಯೊಂದರಲ್ಲಿ ಮಾತ್ರ ಸಿಕ್ಕುತ್ತದೆ.

 

ಜಯ ಜಯ ತಿರುಮಲರಾಯ ಜಯ ಕಂಚೀವರದ ।
ಜಯ ಜಯ ರಂಗನಾಥ ಶ್ರುತಿಗೀತ ।
ಜಯ ಸೇತುರಾಮ ಜಯ ಪದ್ಮನಾಭ ।
ಜಯ ಜಯ ಜಯಾ ಮುದ್ದು ಉಡುಪಿಯ ಕೃಷ್ಣ ।
ಜಯ ಜಯ ಪುಂಡರೀಕಮುನಿವರದ ಪುರಂದರವಿಠಲ ॥ ೨ ॥

ತ್ರಿವಿಡತಾಳ

ಜಯ ಗದಾಧರ ಜಯ ಜಯ ಜಗದೀಶ ।
ಜಯ ಸೇತುವಿನಲಿ ರಾಮ ।
ಜಯ ಸೋದೆಯಲಿ ನೆಲಸಿ ಮೆರೆವ ತ್ರಿವಿಕ್ರಮರಾಯ ।
ದ್ವಾರಾವತಿಯ ಗೋವಿಂದ ಜಯ ವಾದಿರಾಜಪ್ರಿಯಹಯವದನ
ಜಗದ್ದೇವನೇ ಜಯಮಧ್ವಗುರುವರದನೇ ।
ಜಯ ಜಯ ಕರುಣಾಕರ ಜಯ ಜಯ ಕಮಲನಾಭ ।
ಜಯ ಜಯ ಕಂಬುಕಂಠಕೌಸ್ತುಭಧರನೆ ।
ಜಯ ಜಯ ಮರಕತಮಕರಕುಂಡಲಧರನೆ ।
ಅನಂತಾನಂತಗುಣನಿಲಯ ಅನಂತಾನಂತ ರವಿಶತತೇಜ ।
ಅನಂತಾನಂತ ಪುರಂದರವಿಠಲ ನಮೋ ನಮೋ ॥ ೩ ॥

ಅಟತಾಳ

ಕ್ಷೀರಸಾಗರಕೆ ಶ್ರೀಹರಿಯು ಬಂದಂತೆ ।
ಪ್ರಹ್ಲಾದನಲ್ಲಿಗೆ ನರಸಿಂಹ ಬಂದಂತೆ ।
ಬಲಿಯ ಮನೆಗೆ ವಾಮನ ಬಂದಂತೆ ।
ಅಕ್ರೂರನ ಮನೆಗೆ ಅಚ್ಯುತ ಬಂದಂತೆ ।
ವಿದುರನ ಮನೆಗೆ ಶ್ರೀಕೃಷ್ಣ ಬಂದಂತೆ ।
ಗೋಪಿಯರ ಮನೆಗೆ ಗೋಪಾಲ ಬಂದಂತೆ ।
ಲಕ್ಷ್ಮೀಪತಿ ಪುರಂದರವಿಠಲನ ದಿವ್ಯನಾಮವು ।
ಎನ್ನ ನಾಲಗೆಗೆ ಬಂದು ನೆರೆದಿತು ॥ ೪ ॥

ಏಕತಾಳ

ಕೃಷ್ಣಾ ಕೃಷ್ಣಾ ಎಂಬುದಕೆ ।
ಅಂತ್ಯಕಾಲದಿ ಮೊದಲಾ ಶಬ್ದಕೆ ।
ನಾಮವು ಮುದದಿ ಮುಕ್ತಿಯ ತೋರಿತು ।
ಇದು ಎನ್ನ ಮನಸಿನ ಮಾಯೆಯೇನೂ ಇಲ್ಲದೆ ।
ನಾಚಿಕೆ ಎನ್ನ ಪ್ರತೀಕ್ಷಿಸದಯ್ಯಾ ಪುರಂದರವಿಠಲ ।
ನಿಮ್ಮ ಪ್ರಾಣಿಯಾದವನ ॥ ೫ ॥

ಜತೆ

ಹೊಕ್ಕುಳಲಿ ಗಂಡು ಪೆತ್ತವರುಂಟೆ ।
ಉಂಗುಷ್ಟದಲಿ ಪೆಣ್ಣ ಪೆತ್ತವರುಂಟೆ ।
ಮಿಕ್ಕಲಾದ ದೇವರಿಗೆ ಈ ಸೌಭಾಗ್ಯವುಂಟೆ ।
ಮೊರೆಹೊಕ್ಕೆ ಮೊರೆಹೊಕ್ಕೆ ಪುರಂದರವಿಠಲ ॥

೧೩

ರಾಗ – ಸಾವೇರಿ ತಾಳ - ಆದಿ

[೧]ಇಲ್ಲಿ ನೋಡಲು ರಾಮ ಅಲ್ಲಿ ನೋಡಲು ರಾಮ ।
ಎಲ್ಲೆಲ್ಲಿ ನೋಡಲು ರಾಮಚಂದ್ರನು ॥ ಪ ॥

ಮೂಲೋಕದಲ್ಲಿ ತ್ರೈಮೂರ್ತಿರೂಪಗಳಲ್ಲಿ ।
ಎಲ್ಲೆಲ್ಲಿ ನೋಡಲು ಅಲ್ಲಲ್ಲಿ ರಾಮರೂಪ ॥ ಅ. ಪ. ॥

ರಾವಣನ ಮೂಲಬಲವ ಕಂಡು ಕಪಿಗಳು ।
ಆವಾಗಲೆ ಹೊರಟೋಡುತಿರೆ ॥
ಈವಾಗ ನರನಾಗಿ ಇರಬಾರದೆಂದೆನುತ ।
ದೇವ ರಾಮಚಂದ್ರ ಬಹುರೂಪ ತಾನಾದ ॥ ೧ ॥

ಅವನಿಗೆ ಇವ ರಾಮ ಇವನಿಗೆ ಅವ ರಾಮ ।
ಬುವಿಯೊಳಗೆ ಬೇರೆ ರೂಪವುಂಟೆ ।

[೧] ೮ (II) ಪ್ರತಿಯಿಂದ ತೆಗೆದುಕೊಂಡಿದೆ.

ಅವನಿಯೊಳಿರುತಿಪ್ಪ ದುರುಳ ಜನರೆಲ್ಲ ।
ಅವರವರೆ ಹೊಡೆದಾಡಿ ಹತವಾಗಿ ಹೋದರು ॥ ೨ ॥

ಹನುಮಂತಾದಿ ಸಾಧುಜನರು ಅಪ್ಪಿಕೊಂಡು ।
ಕುಣಿದಾಡಿದರು ಅತಿ ಹರುಷದಲಿ ॥
ಕ್ಷಣದಲಿ ಪುರಂದರವಿಟ್ಠಲರಾಯನು
ಕೊನೆಗೆ ರಾಮಚಂದ್ರನೊಬ್ಬನಾಗಿ ನಿಂತ ॥ ೩ ॥

೧೪

ರಾಗ - ಸಾರಂಗ ತಾಳ - ಆದಿ

[1] ಅಕೊ ಹಾಗಿಹಾನೆ ಇಕೊ ಹೀಗಿಹಾನೆ ॥ ಪ ॥

ಕಾಲಿಲ್ಲದೆ ನಡಸುವ ಕೈಯಿಲ್ಲವೆ ಹಿಡಿಸುವ ।
ಹಲ್ಲಿಲ್ಲದೆ ತಿನ್ನಿಸುವ ಹೊಟ್ಟೆಯಿಲ್ಲದೆ ಉಣಿಸುವ ॥ ೧ ॥

ಕಣ್ಣಿಲ್ಲದೆ ಕಾಣಿಸುವ ಕಿವಿಯಿಲ್ಲದೆ ಕೇಳಿಸುವ ।
ಕಾಣಿಸಿಕೊಳ್ಳನೀತ ಒಳಗೆ ಹೊರಗೆ ತಿರುಗುವ ॥ ೨ ॥

ಶ್ವೇತದ್ವೀಪದಲ್ಲಿ ನಿಂತು ಅನಂತಾಸನದಲಿ ಮಲಗಿ ।
ನಿತ್ಯ ವೈಕುಂಠವಾಸ ಪುರಂದರವಿಠಲ ॥ ೩ ॥

೧೫

ಸುಳಾದಿ

ರೂಪಕತಾಳ

[2] ಆಳುಗಳ ಪರಿಯು ಆಳಿದನೆ ಬಲ್ಲ ।
ಆಳಿದನ ಪರಿಯು ಆಳುಗಳೆ ಬಲ್ಲರು ।
ಆಳುಗಳ ಪರಿಯು ಆಳಿದನ ಪರಿಯು ।

---

೧ ಊ (ಚ) ಪ್ರತಿಯಿಂದ ತೆಗೆದುಕೊಂಡಿದೆ.

೨ ಇ (ಮುದ್ರಿತ) ಎ (ಮುದ್ರಿತ) ಎರಡೇ ಪುಸ್ತಕಗಳಲ್ಲಿ ಸಿಕ್ಕುತ್ತಿದೆ ಇದರಿಂ: ಸುಳಾದಿ ಅಪೂರ್ಣವಿದ್ದಂತೆ ತೋರುತ್ತಿದೆ

ಆರೇನನೆಂದರೂ ಆರೇನ ಮಾಡುವರಯ್ಯ ।
ಆರ ಕೊಂಡೆಮಗೆ ಏನ ಮಾಡುವುದಯ್ಯ ।
ಆರು ಮುನಿದೆಮ್ಮನು ಏನು ಮಾಡುವರಯ್ಯ ।
ಸಿರಿಪುರಂದರವಿಠಲಗೆ ನಮಗೆ ।
ಇಂದೆ ಬಂದಿತೆ ಸ್ವಾಮಿ-ಭೃತ್ಯಸಂಬಂಧ ? ॥ ೧ ॥

ಮಟ್ಟತಾಳ

ಮಧುರೆಯೊಳಗೆ ನಿನ್ನ ತುಂಟಾಟಿಕೆಗಳ ನೋಡ ।
ಉದ್ಧವನೆತ್ತ ಕುಬುಜೆಯು ಮನೆಯೆತ್ತ ।
ನೀ ಮಾಡಿದ ಮರ್ಯಾದೆ ಪುರಂದರವಿಠಲ ।
ಉದ್ಧವನೆತ್ತ ॥

ಧ್ರುವತಾಳ

ಉಳ್ಳವರುಂಡಾರು ಮರೆಯು ಮರೆಯು ।
ಬಲ್ಲಿದರ್ನಾಳುಗಳು ತಲೆಯಲಿ ನುಡಿದರೇನೆಂಬೆ ।
ಬಲ್ಲಿದರ್ನಾಳುಗಳು ದಟ್ಟಿಯಲಿ ನಡೆದರೇನೆಂಬೆ ।
ಬಲ್ಲಿದರ್ ಪುರಂದರವಿಠಲನಾಳುಗಳು ॥ ೩ ॥

ಅಟತಾಳ

ಜೆಟ್ಟಿತಂದಾ ದೈವವು ಹೊಂದಿದ್ದ ।
ಕಟ್ಟಾಸಮುದ್ರದ ನಂಟನಾಗಿ ಉಪ್ಪಿನ ಬರ ಕಂಡ ।
ಅರಸಿನ ಮಗ ತಿರುತಿನುತಿಹದ ಕಂಡ ।
ನಿನ್ನ ತೊಂಡನು ನಿನ್ನ ತೊಂಡನು ನಿನ್ನ ತೊಂಡನಾಳುವ ।
ನೀನಾಳುವೆ ನಿನ್ನ ತೊಂಡ ನಾನು ಬರಿಯು ಮಾತಲ್ಲ ।
ವಿಠಲ ನಿನ್ನಾಣೆ ನಿನ್ನ ತೊಂಡ ನಾನು ಪುರಂದರವಿಠಲ ॥ ೪ ॥

ಜತೆ

ನಿತ್ಯಾನಿತ್ಯ ಸುವಸ್ತುಗಳೊಳಗೆ ।
ನಿತ್ಯ ಸುನಿತ್ಯ ಪುರಂದರವಿಠಲ ॥

೧೬

ಉಗಾಭೋಗ

[೧]ಅಣು-ರೇಣು-ತೃಣದಲ್ಲಿ ಪರಿಪೂರ್ಣನಾಗಿರುವ |
ಗುಣವಂತನೇ ನಿನ್ನ ಮಹಿಮೆ ಗಣನೆ ಮಾಡುವರಾರು? |
ಎಣಿಸಿನೋಡುವಳಿನ್ನು ಏಣಾಕ್ಷಿ ಸಿರಿದೇವಿ |
ಜ್ಞಾನಸುಗುಣತತ್ತ್ವ ವೇಣುಗೋಪಾಲ ಹರೆ |
ಕಾಣಿಸೊ ನಿನ್ನ ಮಹಿಮೆ ಪುರಂದರವಿಠಲ || ೧ ||

೧೭

ಉಗಾಭೋಗ

[೨]ಅಣುವಿಗೆ ಅಣುವಾಗಿ ಘನಕೆ ಘನವಾಗಿ |
ಗುಣತ್ರಯ ತತ್ತ್ವಕ್ಕೆ ಮೀರಿದ ದೊರೆಯಾಗಿ |
ತೃಣಮೊದಲಾಗಿ ಮೇರುಪರಿಯಂತ ಇರುವವ ನೀನಾಗಿ |
ಗುಣನಿಧಿ ಪುರಂದರವಿಠಲ ನಿನ್ನ ಮಹಿಮೆ |
ಎಣಿಕೆಮಾಡುವರಾರೊ ಎನ್ನಪ್ಪನೆ || ೧ ||

೧೮

ಉಗಾಭೋಗ

[೩]ನಿನ್ನಡಿ ಇಳೆಯುನೀರಡಿಮಾಡಿತು |
ನಿನ್ನ ಉಂಗುಟವು ಬ್ರಹ್ಮಾಂಡ ನುಂಗಿತು |
ನಿನ್ನ ನಖ ಸುರನದಿಯ ತಂದಿತು |
ನಿನ್ನ ಕರ ಮಧುಕೈಟಭರನೊರಸಿತು |
ನಿನ್ನೆರಡು ತೋಳು ಸಿರಿ ಲಕುಮಿಯನಪ್ಪಿತು |
ನಿನ್ನ ಪಾದದ ನೆನಹೇ ಸಕಲಸಂಪದ ಪುರಂದರವಿಠಲ || ೧ ||

---

೧ ಎ. ಓ ಪ್ರತಿಗಳಿಂದ ಆರಿಸಿಕೊಂಡಿದೆ.
೨ ಎ. ಓ. ಧ. ಪ್ರತಿಗಳಿಂದ ಆರಿಸಿಕೊಂಡಿದೆ.
೩ ಧ. ಪ್ರತಿಯಿಂದ ತೆಗೆದುಕೊಂಡಿದೆ.

## ೧೯

### ಉಗಾಭೋಗ

[೧] ಬ್ರಹ್ಮಾಂಡವದೆಲ್ಲ ರೋಮಕೂಪದೊಳಿರಲು ।
ಅಮ್ಮಾ ಅಮ್ಮಾ ಎನುತ ಅಮ್ಮೆಯು ಬೇಡುತ್ತಿಹೆ ।
ಹೆಮ್ಮಕ್ಕಳು ನಗರೆ ಬ್ರಹ್ಮಾದಿಗಳು ।
ಮೊಮ್ಮಕ್ಕಳು ನೆಗರೆ ರುದ್ರಾದಿಗಳು ।
ಮರಿಮಕ್ಕಳು ನಗರೆ ಮಿಕ್ಕ ಸುರರೆಲ್ಲ ।
ರಮ್ಮೆಯರಸ ಸಿರಿ ಪುರಂದರವಿಠಲ ॥ ೧ ॥

## ೨೦

### ಉಗಾಭೋಗ

[೨] ಸಕಲ ಶ್ರುತಿಪುರಾಣಗಳೆಲ್ಲ ಅದಾವನ ಮಹಿಮೆ ।
ಸುಖಪೂರ್ಣ ಸುರವರಾರ್ಚಿತಪಾದ ।
ಶಕಟಮರ್ದನ ಶಾರದೇಂದುವಕ್ತ್ರ ।
ರುಚಿಕರವರ ಕಲ್ಯಾಣರಂಗ ।
ರುಕ್ಮಿಣೀರಮಣ ಪರಿಪೂರ್ಣ ನಮ್ಮ ಪುರಂದರವಿಠಲ ॥ ೧ ॥

## ೨೧

### ಉಗಾಭೋಗ

[೩] ಸಿರಿವಿರಿಂಚ್ಯಾದಿಗಳು ಅರಿಯದಂತಹ ಮಹಿಮೆ ।
ಅರಿತು ಪಾಡಲು ಜಗದಿ ಅರುಹರಾರಯ್ಯ ।
ಅರವಿಂದದಳನಯನ ಶರಣೆಂದವರ ಕಾವ ।
ಕರುಣಾಸಾಗರ ನಮ್ಮ ಪುರಂದರವಿಠಲ ॥ ೧ ॥

---

೧ ಓ. (೧) ಪ್ರತಿಯಿಂದ ತೆಗೆದುಕೊಂಡಿದೆ.
೨ ೧ ಎ ಓ. ಪ್ರತಿಗಳಿಂದ ಆರಿಸಿದೆ.
೩ ಎ ಓ. ಪ್ರತಿಗಳಿಂದ ತೆಗೆದುಕೊಂಡಿದೆ.

೨೨

ಉಗಾಭೋಗ

[1]ಹರಿಯೆಂಬುದೇ ಲಗ್ನಬಲವು ।
ಹರಿಯೆಂಬುದೇ ತಾರಾಬಲವು ।
ಹರಿಯೆಂಬುದೇ ದೈವಬಲವು ।
ಹರಿ ಶ್ರೀಲಕುಮಿಪತಿ ಪುರಂದರವಿಠಲನ ।
ಬಲವಯ್ಯಾ ನರರಿಗೆ ॥ ೧ ॥

೨೩

ಉಗಾಭೋಗ

[2]ಹರಿಸರ್ವೋತ್ತಮನೆಂಬ ಹಿರಿಯ ಪುತ್ರನಿರಲಿಕ್ಕೆ ।
ನರಪುತ್ರನಿಂದಾಗುವ ಗತಿ ಯಾವುದಯ್ಯ ।
ಸೃಷ್ಟಿಕರ್ತನೆಂಬ ಶ್ರೇಷ್ಠ ಪುತ್ರನಿರಲಿಕ್ಕೆ ।
ದುಷ್ಟಪುತ್ರನಿಂದ ಆಗುವ ಗತಿ ಯಾವುದಯ್ಯ ।
ನಾರಾಯಣನೆಂಬ ನಾಮಪುತ್ರನಿರಲಿಕ್ಕೆ ।
ಕಾಮಪುತ್ರನಿಂದ ಆಗುವ ಗತಿ ಯಾವುದಯ್ಯ ।
ಪುರಂದರವಿಠಲನೆಂಬ ಪುಣ್ಯಪುತ್ರನಿರಲಿಕ್ಕೆ ।
ಅನ್ಯಪುತ್ರರಿಂದ ಆಗುವ ಗತಿ ಯಾವುದಯ್ಯ ! ॥ ೧ ॥

೨೪

ಉಗಾಭೋಗ

[3]ಗುರಿಯನೆಚ್ಚವನೆ ಬಿಲ್ಲಾಳು ।
ಹರಿಯ ಭಜಿಸಲು ಅರಿಯದವ ಮಾಸಾಳು ।
ಹರಿಯೆಂದು ಓದದ ಓದೆಲ್ಲ ಹಾಳು ।
ಪುರಂದರವಿಠಲ ಪಾರ್ಥನ ಮನೆಯಾಳು ॥ ೧ ॥

---

೧ ಜ (೨) ಪ್ರತಿಯಿಂದ ಆರಿಸಿದೆ
೨ ಖ ೧ (೪) ಧ ಪ್ರತಿಗಳಿಂದ ತೆಗೆದುಕೊಂಡಿದೆ
೩ ಝ (೪) ಪ್ರತಿಯೊಂದರಲ್ಲಿಯೇ ಸಿಕ್ಕಿದೆ

೨೫

ಉಗಾಭೋಗ

[೧]ಹರಿಹರಿಯೆಂದು ಕರೆಯುವುದೇ ತಡ ।
ಕರೆದಲ್ಲಿಗೆ ಬರುವ ನರಹರಿಯೆಂದು ।
ಕರೆಯುವುದೆ ತಡ ಕರೆದಲ್ಲಿಗೆ ಬರುವ ।
ಸುರನರಲೋಕದಲ್ಲೆಲ್ಲಿದ್ದರೂ ಕರೆದಲ್ಲಿಗೆ ಬರುವ ।
ಪುರಂದರವಿಠಲನೆಂದು ಕರೆಯುವುದೆ ತಡ ।
ಕರೆದಲ್ಲಿಗೆ ಬರುವ ॥ ೧ ॥

೨೬

ಉಗಾಭೋಗ

[೨]ಹಾ ಕೃಷ್ಣ ! ಹಾ ದ್ವಾರಕಾವಾಸಿ! ಎಂದೆನಲು ।
ಶ್ರೀಪತಿ ಅಕ್ಷಯವಸ್ತ್ರವನಿತ್ತು ।
ದ್ರೌಪತಿಯ ಅಭಿಮಾನವ ಕಾಯ್ದ ನಮ್ಮ ।
ಆಪತ್ತಿಗೆ ಆಹೆನೆಂಬ ಶ್ರೀಪತಿ ಪುರಂದರವಿಠಲ ।
ಆ ಪಾರ್ಥನ ರಮಣಿಗೆ ಅಕ್ಷಯವಸ್ತ್ರವನಿತ್ತು ಕಾಯ್ದ ॥ ೧ ॥

೨೭

ಉಗಾಭೋಗ

[೩]ಸಕಲಸಾಧನಕೆಲ್ಲ ಸಿದ್ಧಿಗೊಳಿಸುವುದು ।
ಭಕುತಿ ಸಾಧನವಲ್ಲದೆ ಬೇರೆ ಸಾಧನವುಂಟೆ ? ।
ಭಕುತಿಗೆ ಅಭಿಮಾನಿ ಭಾರತೀದೇವಿಯರ ಕರುಣ ।
ಮುಕುತಿಸಾಧನವೆಂದು ಮನದಲ್ಲಿ ಸ್ತುತಿಸಿರೊ ।
ಮುಕುತೀಶ ನಮ್ಮ ಪುರಂದರವಿಠಲನ ।
ಕರುಣಕ್ಕೆ ಭಕುತಿ ಕಾರಣವಲ್ಲದೆ ಬೇರೆ ಸಾಧನವುಂಟೆ ? ॥ ೧ ॥

---

೧ ಧ ಪ್ರತಿಯಿಂದ ತೆಗೆದುಕೊಂಡಿದೆ
೨ ಎ ಓ ತ ೧ ಪ್ರತಿಗಳಿಂದ ಆರಿಸಿಕೊಂಡಿದೆ
೩ ಜ (೨) ಪ್ರತಿಯಿಂದ [illegible]

೨೮

ಉಗಾಭೋಗ

[1]ಅರ್ಭಕನ ತೊದಲ್ನುಡಿ ತಾಯ್ತಂದೆ ಕೇಳಿ ಮನ ।
ಉಬ್ಬಿ ನಲಿವಂದದಲಿ ಉರಗಶಯನ ।
ಕೊಬ್ಬಿ ನಾನಾಡಿದರೆ ತಾಳಿ ರಕ್ಷಿಸುವ ಎನ್ನ ।
ಕಬ್ಬುಬಿಲ್ಲನಯ್ಯ ಪುರಂದರವಿಠಲ ॥ ೧ ॥

೨೯

ಉಗಾಭೋಗ

[2]ಮಲಗಿ ಪಾಡಿದರೆ ಕುಳಿತು ಕೇಳುವನು ।
ಕುಳಿತು ಪಾಡಿದರೆ ನಿಂತು ಕೇಳುವನು ।
ನಿಂತು ಪಾಡಿದರೆ ನಲಿದು ಕೇಳುವನು ।
ನಲಿದು ಪಾಡಿದರೆ ಸ್ವರ್ಗಸೂರೆಬಿಟ್ಟೆನೆಂಬ ಪುರಂದರವಿಠಲ ॥ ೧ ॥

೩೦

ಉಗಾಭೋಗ

[3]ಗಜ-ತುರಗಸಹಸ್ರ ದಾನ ।
ಗೋಕುಲಕೋಟಿ ದಾನ ।
ಭೂದಾನ ಸಮುದ್ರ ಪರ್ಯಂತರ ।
ದಾನಿ ಪುರಂದರವಿಠಲನ ಧ್ಯಾನಕ್ಕೆ ಸಮವಿಲ್ಲ ॥ ೧ ॥

೩೧

ಉಗಾಭೋಗ

[4]ಜೀವಜೀವಕೆ ಭೇದ ಜಡಜಡಕೆ ಭೇದ ।
ಜೀವ ಜಡ ಪರಮಾತ್ಮನಿಗೆ ಭೇದ ।

---

೧ ಎ ಓ ಪ್ರತಿಗಳಿಂದ ಆರಿಸಿದೆ
೨ ಎ ಓ ಜ (೨) ಪ್ರತಿಗಳಿಂದ ತೆಗೆದುಕೊಂಡಿದೆ
೩ ಖ೧ (೪) ಪ್ರತಿಯಿಂದ ತೆಗೆದುಕೊಂಡಿದೆ
೪ ಓ ಪ್ರತಿಯಿಂದ ತೆಗೆದುಕೊಂಡಿದೆ

ಜೀವಾಜೀವ ಮುಕ್ತಾಮುಕ್ತರ ಭೇದ ।
ಸಂಸಾರದೊಳು ಭೇದ ಮುಕ್ತರೊಡೆಯು ಹರಿ ।
ಭಕ್ತರಾಧೀನ ಜಗತ್‍ಕರ್ತೃ ನೀ ಸಲಹಯ್ಯ ।
ಪುರಂದರವಿಠಲ || ೧ ||

೩೨

ಉಗಾಭೋಗ

[೧]ಗುರುಕರುಣವಾಹೋದು ಪರಮ ದುರ್ಲಭವಯ್ಯ ।
ಪರಿಪರಿ ವ್ರತಗಳಾಚರಿಸಿ ಫಲವೇನು ? ।
ಗುರುಕರುಣವೊಂದಲ್ಲದೆ ಗತಿ ಬೇರೆಯುಂಟೆ ? ।
ಶರೀರದ ಪುತ್ರ ಮಿತ್ರ ಕಳತ್ರ ಬಾಂಧವರು ।
ನೆರೆ ಸಲಿಸುವರೆ ಸದ್ಗತಿಗೆ ಸಾಧನವ ? ।
ನಿರುತದಿ ಗುರುಪಾದವ ನಿಜವಾಗಿ ಮನದಲ್ಲಿ ।
ಅರಿತು ಭಜಿಸಲು ಅಖಿಳಸಂಪದವಿತ್ತು ।
ಪರಿಪಾಲಿಸುವ ನಮ್ಮ ಪುರಂದರವಿಠಲ || ೧ ||

೩೩

ಉಗಾಭೋಗ

[೨]ಮನದಭಿಮಾನಿ ಮಹಾರುದ್ರನ ಭಜಿಸಲು ।
ಅನವರತ ಶ್ರೀಹರಿಯ ಆರಾಧಿಸುವುದಕ್ಕೆ ।
ಮನಶುದ್ಧಿಯನೀವ ಮತಿಕೊಡುವ ।
ಮನುಜೋತ್ತಮರು ಕೇಳಿ ಮನಕೆ ಪ್ರೇರಕನವನು ।
ವನಜಾಕ್ಷ ಪುರಂದರವಿಠಲನ ಒಲುಮೆಗೆ ।
ಮನಸು ಕಾರಣವಲ್ಲದೆ ಮಿಗಿಲಾವುದು ? || ೧ ||

---

೧ ಎ ಓ ತ ಧ ಪ್ರತಿಗಳಿಂದ ಆರಿಸಿದ
೨ ಎ ಪ್ರತಿಯಿಂದ ತೆಗೆದುಕೊಂಡಿದೆ

# ೨. ಕಾರುಣ್ಯಯಾಚನೆ

೩೪

ಸುಳಾದಿ

ಧ್ರುವತಾಳ

[1]ಅತಿಮೀರಿತು ಶ್ರೀಹರಿಹರಿ ಅನ್ಯಾಯು |
ಕಲಿಕಾಲ ದುಷ್ಕಾಲ ಅತಿಅತಿ ಮೀರಿತು |
ಅಕರ್ಮ ಕುಕರ್ಮ ಅತಿಅತಿ ಮೀರಿತು |
ಪತಿಕರಿಸೆನ್ನ ಪುರಂದರವಿಠಲರಾಯು || ೧ ||

ಮಟ್ಟತಾಳ

ಇನ್ನೆಂತೀ ಕಲಿಕಾಲವ ಕಳೆವೆ |
ಇನ್ನೆಂತೀ ಪರಸುಖ ಗತಿಪಡೆವೆ |
ಅನೆಂತು ನಿನ್ನ ಕಾಂಬುವೆ ಪುರಂದರವಿಠಲ ? || ೨ ||

ರೂಪಕತಾಳ

ಈ ಕಲಿಯುಗದಲಿ ಒಂದಡಕಲಗಡಿಗೆ |
ದೇಹಬಂಧನ ಬಿಟ್ಟು ಕಾಯುತಹರೆ |
ತನು-ಪ್ರಾಣಂಗಳ ಬಿಟ್ಟು ಕಾಯುತಹರೆ |
ತನ್ನವರೆಲ್ಲರ ಮರೆದು ಕಾಯುತಹರೆ |
ಅನೆಂತು ಜೀವಿಪೆ ಪುರಂದರವಿಠಲ ? || ೩ ||

ಆದಿತಾಳ

ಎಂತೀಪಾಪವ ಕಳೆವೆ ಆಗಲಿ |
ಎಂತು ಆ ಕರ್ಮವ ಕಳೆವೆ ಆಗಲಿ |
ಎಂತಹ ನಾಯಕ ನರಕವೆ ಆಗಲಿ |
ಎಂತಹನಾಥ್ಯ ಪುರಂದವಿಠಲ ? || ೪ ||

---

೧ [illegible] ಪ್ರತಿಯೊಂದರಲ್ಲಿಯೂ ಸಂಸ್ಕೃತ [illegible]

ಏಕತಾಳ

ಶ್ರೀಮನ್ನಾರಾಯಣ ಹರಿಪಾರಾಯಣರು ।
ಅಂಜುವರೆ ಭಯಕೆ ಅಂಜುವರೆ ಭಯಕೆ ? ।
ಪುರಂದರವಿಠಲ ಹರಿಪಾರಾಯಣರು ? ॥ ೫ ॥

ಜತೆ

ಒಂದೇ ನಾಮವೆ ಸಾಕು ಮುಕುತಿಗೆ ।
ಪುರಂದರವಿಠಲರಾಯ ಮಿಕ್ಕನಾಮಕೆ ಋಣಿ ॥

೩೫

ರಾಗ - ಕಾಂಬೋದಿ ತಾಳ - ಝಂಪೆ

[1]ಪೂರ್ವಜನ್ಮದಲಿ ನಾ ಮಾಡಿದಾ ಪಾಪದಿಂ-
ದುರ್ವಿಯೊಳು ಜನಿಸಿದೆನೊ ಕೃಷ್ಣ ॥ ಪ ॥
ಕಾರುಣ್ಯನಿಧಿಯೆನ್ನ ಕಾಯಬೇಕಯ್ಯ ಹರಿ ।
ವಾರಿಜೋದರ ಮುದ್ದುಕೃಷ್ಣ ॥ ಅ. ಪ. ॥
ಪುಟ್ಟನಂದಿಂದಿಗೂ ಸುಖವೆಂಬುದನು ಅರಿಯೆ ।
ಕಷ್ಟಪಡುತಿಹೆನಯ್ಯ ಕೃಷ್ಣ ॥
ದಟ್ಟದಾರಿದ್ರ್ಯವನು ಪರಿಹರಿಸದಿರೆ ದೂರು ।
ತಟ್ಟುವುದು ನಿನಗಯ್ಯ ಕೃಷ್ಣ ॥ ೧ ॥
ಮುಟ್ಟಲಂಜುವರೆನ್ನ ಬಂಧುಗಳು ಕಂಡರೆ ।
ಅಟ್ಟಿ ಕೊಲುತಿಹರಯ್ಯ ಕೃಷ್ಣ ॥
ತೊಟ್ಟಲಿನ ಶಿಶು ಬಾಯಬಿಟ್ಟ ತೆರನಂತೆ ಕಂ-
ಗೆಟ್ಟು ಕುಳಿತಿರುವೆ ಕೃಷ್ಣ ॥ ೨ ॥
ತಂದೆತಾಯಿಯು ಇಲ್ಲ ಬಂಧುಬಳಗವು ಇಲ್ಲ ।
ಇದೆನಗೆ ಗತಿಯೇನೊ ಕೃಷ್ಣ ॥
ಮಂದರೋದ್ಧಾರ ಶ್ರೀಪುರಂದರವಿಠಲನೇ ।
ಬಂದು ನೆಲೆಯಾಗಯ್ಯ ಕೃಷ್ಣ ॥ ೩ ॥

೧ ಓ ಪ್ರತಿಯಿಂದ ಅಳಿಸಿದೆ

## ೩೬

### ಸುಳಾದಿ

#### ಧ್ರುವತಾಳ

[೧]ಖಳರ ನೋಟವೇ ಹಾವಲ್ಲದೆ ಹಾವ ಬೇರೆ ಇನ್ನರಸಲೇತಕೆ ? ।
ಖಳರ ನೋಟವೇ ಹುಲಿಯಲ್ಲದೆ ಹುಲಿಯು ಬೇರೆ ಇನ್ನ ರಸಲೇತಕೆ? ।
ಖಳರ ಕೂಟವೇ ವಿಷವಲ್ಲದೆ ವಿಷವ ಬೇರೆ ಇನ್ನರಸಲೇತಕಯ್ಯ? ।
ಖಳರೊಳಗೆನ್ನ ಪುಟ್ಟಿಸಿದೆ ಖಳರಿಗೊಪ್ಪಿಸಿಕೊಟ್ಟೆಯಯ್ಯ ।
ಖಳರ ಖಂಡದಿಂಡವ ಮುರಿವನೊ ।
ಖಳರ ನಿವಾರಣ ಪುರಂದರವಿಠಲ ॥ ೧ ॥

#### ಮಟ್ಟತಾಳ

ಖಳರ ಐಶ್ವರ್ಯ ಖಳರ ವಿಭೂತಿ ಖಳರ ದೌತ್ಯ ।
ಖಳರ ವಿದ್ಯೆಗಳು ಖಳರ ತ್ಯಾಗ ಖಳರ ಕರ್ಮ ।
ಖಳರ ಕಷ್ಟ-ನಿಷ್ಠುರಗಳು ಪುರಂದರವಿಠಲನ ।
ಪರಮಪ್ರಿಯರ ಅವಮನ್ನಣೆ ಇವು ।
ಸದಾಸರ್ವದಾ ನೋಡಾ । ॥ ೨ ॥

#### ರೂಪಕತಾಳ

ಖಳರ ಕಷ್ಟ-ನಿಷ್ಠುರಗಳ ತಾಳಿದರಲಾ ಮನುಗಳು ।
ತಾಳಿದರಲಾ ಮುನಿಗಳು ತಾಳಿದರಲಾ ಸಕಲ ದೇವತೆಗಳು ।
ತಾಳಿದರಲಾ ಪುರಂದರವಿಠಲವೊಲಿವನ್ನಕ ? ॥ ೩ ॥

#### ಅಟತಾಳ

ಪಾಷಂಡರ ಕೂಡೆ ಕಾಳಗ ವಿಷ್ಣುದ್ವೇಷಿಗಳ ಕೂಡೆ ಕಾಳಗ ।
ನಾಸ್ತಿಕರ ಕೂಡೆ ಕಾಳಗ ಹರಿಡಂಬಕರ ಕೂಡೆ ಕಾಳಗ ।
ಪುರಂದರವಿಠಲ ಮೆಚ್ಚಿ ಕಾದಿಸಿ ಕಾದಿಸಿ ।
ನಮ್ಮನೇ ಗೆಲಿಸುವ ॥ ೪ ॥

---

೧ ಇ (ಮುದ್ರಿತ) ಎ (ಮುದ್ರಿತ ಸುಳಾದಿ) ಪ್ರತಿಗಳಲ್ಲಿ ಬಿಟ್ಟಿದೆ

ಏಕತಾಳ

ಅಸುರರ ಬದುಕು  ಆ ಬಿಸಿಯ ಅರಗಿನವೊಟ್ಟ (?) ।
ಸುರರ ಬದುಕು ಸುಸ್ಥಿರ ಕಾಣಿರೊ ।
ಅದಾವ ಜಗ-ಜಗಂಗಳೊಳಗೆ ಸುರರ ಬದುಕು ಸುಸ್ಥಿರ ಕಾಣಿರೊ
ಪುರಂದರವಿಠಲನ ಕೋಪಪ್ರಸಾದದಿಂದ ॥ ೫ ॥

ಜತೆ

ಖಳಕುಲತಿಮಿರ ದಿವಾಕರನರ್ಥಿಯು ।
ಖಳಕಮಲೇಂದು ಪುರಂದರವಿಠಲ ॥

೩೭

ರಾಗ - ಭೈರವಿ  ತಾಳ - ಆದಿ

[೧]ಸಿಕ್ಕಿದೆಯೋ ಎಲೆ ಜೀವ—ನಿನ್ನ-
ಕುಕ್ಕಿ ಕೊಲ್ಲದೆ ಬಿಡರು ॥ ಪ ॥
ಸೊಕ್ಕಿದ ಹೆಣ್ಣಿಗೆ ನೀ ಮರುಳಾದೆ ।
ಉಕ್ಕಿನ ಕಂಬಕೆ ನೀ ಗುರಿಯಾದೆ ॥ ಅ ಪ ॥

ಹಾಳೂರ ಕೋಳಕೆ—ಕಾಲು ಚಾಚಿದ ಹಾಗೆ ।
ಮೂಳ ಸಂಸಾರಕೆ ನೀ ಗುರಿಯಾಗಿ ॥
ತೇಲುತ ಮುಳುಗುತ ಇಲ್ಲಿಗೆ ಬಂದೆ ॥ ೧ ॥

ಸತಿ-ಸುತರೆಂಬುವರೆ—ಹಿತರೆಂದು ನಂಬಿದೆಯೊ ।
ಯತಿಗಳತಿಥಿಗಳು ಬಂದರೆ ಮನೆಗೆ— ॥
ಗತಿಯಿಲ್ಲವೆಂದು ಖತಿಗೊಂಡೆಯಲ್ಲೊ ॥ ೨ ॥

ಶುನಕನಂದದಿ ನೀನು—ಮನೆಮನೆಯನು ತಿರುಗಿ ।
ಘನಘನವಾದ ಕೂಳನೆ ತಿಂದು ॥
ತನುವ ತಗ್ಗಿಸಿ ಇಲ್ಲಿಗೆ ಬಂದೆ ॥ ೩ ॥

---

೧ ಅ (I) ಪ್ರತಿಯಿಂದ ತೆಗೆದುಕೊಂಡಿದೆ

ಕಂಡವರ ಒಡವೆಯು—ಖಂಡುಗ ಧನವನು ।
ಮಿಂಡೆಯರ ಒಡವೆಯ ಭಂಡತನದಲಿ ॥
ಕಂಡುಕಾಣದೆ ನೀ ತಿಂದೆಯಲ್ಲೊ ॥ ೪ ॥

ಗೋಪಾಲಕೃಷ್ಣಯ್ಯ—ತಾಪತ್ರಯವ ಕಳೆವ ।
ಆಪತ್ತೆಲ್ಲ ಪರಿಹಾರ ಮಾಡುವ ॥
ಶ್ರೀಪತಿಪುರಂದರವಿಠಲನ ನೆನೆಯದೆ ॥ ೫ ॥

೩೮

ರಾಗ – ಮೋಹನ ತಾಳ – ಅಟ

[1]ಏಕೆ ಕಡೆಗಣ್ಣಿಂದ ನೋಡುವೆ—ಕೃಷ್ಣ ।
ನೀ ಕರುಣಾಕರನಲ್ಲವೆ ? ॥ ಪ. ॥

ಭಕ್ತವತ್ಸಲ ನೀನಲ್ಲವೆ—ಕೃಷ್ಣ ।
ಚಿತ್ಸುಖದಾತ ನೀನಲ್ಲವೆ ? ॥
ಅತ್ಯಂತ ಅಪರಾಧಿ ನಾನಾದಡೇನಯ್ಯ ।
ಇತ್ತಿತ್ತ ಬಾ ಎನ್ನಬಾರದೆ ರಂಗ ॥ ೧ ॥

ಇಂದಿರೆಯರಸ ನೀನಲ್ಲವೆ—ಬಹು
ಸೌಂದರ್ಯನಿಧಿ ನೀನಲ್ಲವೆ ? ॥
ಮಂದಮತಿ ನಾನಾದಡೇನು ಕೃಪಾ-
ಸಿಂಧು ನೀ ರಕ್ಷಿಸಬಾರದೆ ರಂಗ ॥ ೨ ॥

ದೋಷಿಯು ನಾನಾದಡೇನಯ್ಯ—ಸರ್ವ-
ದೋಷರಹಿತ ನೀನಲ್ಲವೆ ? ॥
ಗಾಸಿಯೇತಕೆ ನಿನ್ನ ನಂಬಿದೆ ಸಲಹಯ್ಯ ।
ಶೇಷಶಾಯಿ ಶ್ರೀಪುರಂದರವಿಠಲ ॥ ೩ ॥

---

೧ ಪ್ರ. ಹಿಂಬಂಗ ತೆರೆದುಕೊಂಡಿದೆ

## ೩೯

ರಾಗ - ಮಧ್ಯಮಾವತಿ  ತಾಳ – ಆದಿ

ನೀನೇ ಅಚ್ಯುತ  ನೀನೇ ಮಾಧವ ।
ಹರಿಗೋವಿಂದನು ನೀನೆ ॥
ನೀನೆ ಗತಿಯೆಂದು ನಂಬಿದ ದಾಸಗೆ।
ಅಭಯಕೊಟ್ಟಾತನು ನೀನೆ  ॥ ಪ ॥

ಜಲದೊಳು ಪೊಕ್ಕು ಮೈನಡುಗಿಸಿ ಭಾರವ ।
ತಳೆದಾತನು ನೀನೆ ॥
ಇಳೆಯ ಕದ್ದಸುರರ ದಾಡೆಯಿಂದ ಸೀಳಿ ಕಂಬ।
ದೊಳು ಉದ್ಭವಿಸಿದೆ ನೀನೆ ॥ ೧ ॥

ಬಲಿಯ ಪಾತಾಳಕೆ ತುಳಿದೆಯೊ ನೀನು ಕೊ- ।
ಡಲಿಯ ಪಿಡಿದವನು ನೀನೆ ॥
ಜಲಧಿಯ ದಾಟಿ—ಅಸುರರ ಕಡಿದು ।
ಲಲನೆಯ ತಂದಾತ ನೀನೆ ॥ ೨ ॥

ಗೊಲ್ಲರ ಮನೆಯಲಿ ಬೆಣ್ಣೆಯ ಕದ್ದು ।
ಕಳ್ಳನೆನಿಸಿದವ  ನೀನೆ ॥
ಬಲ್ಲಿದ ತ್ರಿಪುರದಿ  ಬತ್ತಲೆ ನಿಂತು।
ಒಳ್ಳೆ ಹಯವ ಹತ್ತಿದೆ ನೀನೆ ॥ ೩ ॥

ಪಾಂಡವರಿಗತಿ ಪ್ರಿಯನೆಂದೆನಿಸಿದ ।
ಪುಂಡರೀಕಾಕ್ಷನು ನೀನೆ ।
ಪುಂಡಲೀಕ ಪುರುಷೋತ್ತಮ ಮೂರುತಿ ।
ಪುರಂದರವಿಠಲನು ನೀನೆ ॥ ೪ ॥

---

೧ ಅ (ಬಿಡಿ ೨) ರಲ್ಲಿಯಷ್ಟೇ ಸಿಕ್ಕಿದೆ

ವಿ. ಸೂ ಇದು ನಾಲ್ಕು ನುಡಿಯ ಹಾಡು. ಐದನೆಯದು ಕಳೆದಿದೆಯೊ ಏನೊ ತಿಳಿಯದು.

೪೦

ಉಗಾಭೋಗ

[೧]ಅನ್ಯರೊಬ್ಬರ ಕಾಣೆ ಮನ್ನಿಸುವರೆನ್ನ ಆ-
ಪನ್ನರಕ್ಷಕನೆ ಪರಿಪಾಲಿಸೊ ಇನ್ನು ।
ಪನ್ನಂಗಶಯನ ಶ್ರೀಪುರಂದರವಿಠಲನೆ ॥ ೧ ॥

೪೧

ಉಗಾಭೋಗ

[೨]ಅಪಾಯಕೋಟಿಗಳಿಗೆ ಉಪಾಯ ಒಂದೇ ।
ಹರಿಭಕ್ತರು ತೋರಿಕೊಟ್ಟ ಉಪಾಯ ಒಂದೇ ।
ಪುರಂದರವಿಠಲನೆಂದು ಭೋರಿಟ್ಟು ।
ಕರೆವ ಉಪಾಯವೊಂದೇ ॥ ೧ ॥

೪೨

ಉಗಾಭೋಗ

[೩]ಎಡಕೆ ಬಾವಿಯುಂಟು ಬಲಕೆ ಕೆರೆಯು ನೋಡು ।
ಮುಂದೆ ಕಾಳ್ಗಿಚ್ಚು ಹಬ್ಬಿದೆಯೊ ಎಲೊ ದೇವ ।
ಹಿಂದೆ ಹುಲಿ ಬೆನ್ನಟ್ಟಿ ಬರುತಲಿದೆ।
ಆರಿಗೆ ಆರೋ ಪುರಂದರವಿಠಲ ॥ ೧ ॥

೪೩

ಉಗಾಭೋಗ

[೪]ಎಂದಿಗಾದರೂ ನಿನ್ನ ಪಾದಾರವಿಂದವೆ ಗತಿ ।
ಯೆಂದು ನಂಬಿದೆನೊ ಬಂಧುಬಳಗವ ಬಿಟ್ಟು ।
ಬಂದೆ ನಿನ್ನ ಮನೆಗಿಂದು ಮಂದರಧರ ಗೋ-
ವಿಂದ ಪುರಂದರವಿಠಲನೆ ನೀ ಬಂಧು ॥ ೧ ॥

---

೧ ಓ ಪ್ರತಿಯಿಂದ ತೆಗೆದುಕೊಂಡಿದೆ
೨ ಎ ಓ ಪ್ರತಿಗಳಿಂದ ಆರಿಸಿದೆ
೩ ಧ ಪ್ರತಿಯಿಂದ ತೆಗೆದುಕೊಂಡಿದೆ
೪ ಓ ಧ ಪ್ರತಿಗಳಿಂದ ಆರಿಸಿದೆ

೪೪

ಉಗಾಭೋಗ

[೧]ಎರಗಿ ಭಜಿಪೆನು ನಿನ್ನ ಚರಣಸನ್ನಿಧಿಗೆ ।
ಕರುಣದಿಂದಲಿ ಎನ್ನ ಸ್ಮರಣೆಯು ಎನಗಿತ್ತು ।
ಮರೆಯದೆ ಸಲಹೊ ಶ್ರೀಪುರಂದರವಿಠಲ ॥ ೧ ॥

೪೫

ಉಗಾಭೋಗ

[೨]ಏನ ಓದಿದರೇನು ಏನ ಕೇಳಿದರೇನು ।
ಹೀನಗುಣಂಗಳ ಹಿಂಗದ ಜನರು ।
ಮಾನಾಭಿಮಾನವ ನಿನಗೊಪ್ಪಿಸಿದ ಮೇಲೆ ।
ನೀನೆ ಸಲಹಬೇಕೊ ಪುರಂದರವಿಠಲ ॥ ೧ ॥

೪೬

ಉಗಾಭೋಗ

[೩]ಏಳುತ್ತ ಗೋವಿಂದಗೆ ಕೈಮುಗಿಯುವೆ ।
ಕಣ್ಣನು ತೆರೆದು ನೋಡುವೆ ಶ್ರೀಹರಿಯೆ ।
ನಾಲಗೆಯಲಿ ನಾರಾಯಣಾ ನರಹರಿ ।
ಸೋಳಸಾಸಿರ ಗೋಪಿಯರರಸಾ ಎಂಬೆ ಎ- ।
ನ್ನಾಳುವ ದೊರೆ ಪುರಂದರವಿಠಲ ॥ ೧ ॥

೪೭

ಉಗಾಭೋಗ

[೪]ಒಬ್ಬರ ಬಂಟನಾಗಿ ಕಾಲಕಳೆವುದಕಿಂತ ।
ನಿರ್ಬಂಧವಿಲ್ಲದೆ ತನ್ನಿಚ್ಛೆಯೊಳಿದ್ದು ।

---

೧ ಓ ಧ ಪ್ರತಿಗಳಿಂದ ಆರಿಸಿದೆ
೨ ಎ ಓ ತ ಧ ಪ್ರತಿಗಳಿಂದ ಆರಿಸಿದೆ
೩ ಎ ಧ ಪ್ರತಿಗಳಿಂದ ಆರಿಸಿದೆ
೪ ಎ ಓ ತ ಪ್ರತಿಗಳಿಂದ ಆರಿಸಿದೆ

ಲಭ್ಯವಾದೊಂದು ತಾರಕ ಸಾಕುಸಾಕು ಎನಗೆ
ಅಬ್ಬರ ಒಲ್ಲೆನಯ್ಯ ಅಷ್ಟರಲ್ಲೆ ಸಂತುಷ್ಟನಹೆನು ।
ಅರುಣಾಕರ ಪುರಂದರವಿಠಲ ॥ ೧ ॥

೪೮

ಉಗಾಭೋಗ

[1]ದಿನ ದಿನ ದಿನ ದಿನಾ ನೆನೆದು ನೆನೆದು ತೋದುತೋದು ।
ಜನುಮವು ವ್ಯರ್ಥವಾಯಿತು ।
ತೋದ ಹರಗೋಲು ವೈಕುಂಠಕ್ಕೆ ಒಯ್ದೀತೆ ।
ತೋದು ತೋದು ನಿನ್ನವಧಾನವು ಕಂಡುದಿಲ್ಲವೆಂದು ।
ಆದಿಮೂರುತಿ ನಮ್ಮ ಪುರಂದರವಿಠಲನ ।
ಪಾದತೀರಥದಲಿ ನಾದಲಿ ಎನ್ನ ಮನ ॥ ೧ ॥

೪೯

ಉಗಾಭೋಗ

[2]ನಿನ್ನನೆ ಪಾಡುವೆ ನಿನ್ನನೆ ಪೊಗಳುವೆ ।
ನಿನ್ನನೆ ಬೇಡಿ ಬೇಸರಿಸುವೆನಯ್ಯ ।
ನಿನ್ನ ಕಾಲನು ಪಿಡಿವೆ ನಿನ್ನ ಹಾರಯಿಸುವೆ ।
ನಿನ್ನ ತೊಂಡರಿಗೆ ಕೈಗೊಡುವೆ ।
ನಿನ್ನಂತೆ ಸಾಕಬಲ್ಲವನು ಇನ್ನುಂಟೆ ।
ಘನ್ನ ಪುರಂದರವಿಠಲ ದೇವರದೇವ ॥ ೧ ॥

೫೦

ಉಗಾಭೋಗ

[3]ಮನೆಯಿಂದ ಸಂತೋಷ ಕೆಲವರಿಗೆ ಲೋಕದಲ್ಲಿ ।
ಧನದಿಂದ ಸಂತೋಷ ಕೆಲವರಿಗೆ ಲೋಕದಲ್ಲಿ ।

---

೧ ಘ ಧ ಪ್ರತಿಗಳಿಂದ ತೆಗೆದುಕೊಂಡಿದೆ
೨ ಎ ತ ಪ್ರತಿಗಳಿಂದ ಇರಿಸಿದೆ
೩ ಓ ತ ಪ್ರತಿಯಿಂದ ತೆಗೆದುಕೊಂಡಿದೆ

ಸತಿಯಿಂದ ಸಂತೋಷ ಕೆಲವರಿಗೆ ಲೋಕದಲ್ಲಿ ।
ರತಿಯಿಂದ ಸಂತೋಷ ಕೆಲವರಿಗೆ ಲೋಕದಲ್ಲಿ ।
ಇನಿತು ಸಂತೋಷ ಅವರವರ್ಗಾಗಲಿ ।
ಎನಗೆ ಸಂತೋಷ ನಿನ್ನ ರತಿಯೊಳಗೆ ।
ಪುರಂದರವಿಠಲ ॥ ೧ ॥

೫೧

ಉಗಾಭೋಗ

[1]ಹರಿ ನಿನ್ನ ನಾಮವ ಸ್ಮರಿಸಲು ।
ದುರಿತ ಪೀಡಿಪುದುಂಟೆ ।
ಅರಿತು ಭಜಿಪರಿಗೆಲ್ಲ ಕೈವಲ್ಯ ನಿನ್ನಯ ।
ಕರುಣ ವರಿತು ತನ್ನ ಮಗನ ಕೂಗಿದವಗೆ ।
ಮರಣ ಕಾಲದಿ ಒದಗಿದೆ ಶ್ರೀಪುರಂದರವಿಠಲ ॥ ೧ ॥

೫೨

ಉಗಾಭೋಗ

[2]ಹೀನಮಾನವ ಯೋನಿಯಲಿ ಜನಿಸಿದೆನೊ ನಾನು ।
ಏನಾದರೇನು ದೀನದಯಾಸಾಗರನೆ ಕು-
ಯೋನಿಯಲಿ ಎನ್ನ ದೇಹವೆನ್ನದಂತೆ ಮಾಡು ।
ಜ್ಞಾನವನು ಬೋಧಿಸಿ ಸಾನುರಾಗದಿ ಕಾಯೊ ।
ವೇಣುಧರ ವೇದಾಂತವೇದ್ಯ ನರಹರಿಯೆ ।
ಕಾನನದೊಳು ಕಣ್ಣು ಕಾಣದವ ಬಿದ್ದಂತೆ ।
ನಾನು ಬಿದ್ದಿಹೆ ಕಾಯೊ ಪುರಂದರವಿಠಲ ॥ ೧ ॥

---

೧ ಬ ಪ್ರತಿಯಿಂದ ತೆಗದುಕೊಂಡಿದೆ
೨ ಧ ಪ್ರತಿಯಿಂದ ತೆಗೆದುಕೊಂಡಿದೆ

೫೩

ಉಗಾಭೋಗ

[೧]ಹೃದಯಕಮಲದಲ್ಲಿ ನಾನಿನ್ನ |
ಪದಪದುಮವ ನೆನೆವಂತೆ ಮಾಡು |
ಯದುರಾಜಾಧಿರಾಜ |
ಸುದರುಶನಧರ ಯದುರಾಜಾಧಿರಾಜ |
ಇದನೆ ಕೃಪೆಮಾಡೆನಗೆ ಮದನಪಿತ |
ಪುರಂದರವಿಠಲ ಯದುರಾಜಾಧಿರಾಜ ||೧||

೫೪

ಉಗಾಭೋಗ

[೨]ಹೆತ್ತಮಕ್ಕಳು ಹುಚ್ಚರಾದರೆ ತಾಯ್ತಂದೆ |
ಎತ್ತದೆ ಇಳಿಸದೆ ತಪ್ಪಿಹೋಗುವರೆ |
ಮತ್ತೆ ನಿನ್ನ ದಾಸ ನಾನಜ್ಞನಾದರೆ |
ಕರ್ತೃ ನೀ ಪೊರೆಯದಿರುವರೆನೊ ಪುರಂದರವಿಠಲ ||೧||

---

೧ ಜ ೧ ಪ್ರತಿಯಿಂದ ತೆಗೆದುಕೊಂಡಿದೆ
೨ ಎ ಓ ತ ೧ ಪ್ರತಿಗಳಿಂದ ಆರಿಸಿಕೊಂಡಿದೆ



# ೩ ಭಕ್ತಿಭಾವವಿಕಸನ

೫೫

ಉಗಾಭೋಗ

[೧]ಎಲೆ ಜಿಹ್ವೆ, ನೀ ಕೇಶವನ ನಾಮವನೆ ಸ್ತುತಿಸು ।
ಎಲೆ ಕರಗಳಿರ, ಶ್ರೀಹರಿಯ ಪೂಜೆಯ ಮಾಡಿ ।
ಎಲೆ ನೇತ್ರಗಳಿರ, ಶ್ರೀಕೃಷ್ಣನಮೂರ್ತಿಗಳ ನೋಡಿ ।
ಎಲೆ ಕಾಲುಗಳಿರ, ಶ್ರೀಹರಿಯ ಯಾತ್ರೆಯ ಮಾಡಿ ।
ಎಲೆ ನಾಸಿಕವೆ, ಮುಕುಂದನ ಚರಣಪರಿಮಳವ-
ನಾಘ್ರಾಣಿಸುತಿರು ।
ಎಲೆ ಶಿರವೆ, ನೀನಧೋಕ್ಷಜನ ಪಾದಜಲರುಹದಲ್ಲಿ ಎರಗಿರು ।
ಎಲೆ ಮನವೆ, ನೀ ವರದಕೇಶವ ಪುರಂದರವಿಠಲನ ।
ಭಕುತಿವಿಷಯಗಳಲ್ಲಿ ಅನುದಿನವು ಕಳೆಯುತ್ತಿರು ॥ ೧ ॥

೫೬

ರಾಗ – ಕೇದಾರಗೌಳ ತಾಳ – ಆದಿ

[೨]ನರಸಿಂಹನ ಪಾದಭಜನೆಯ ಮಾಡೊ ॥ ಪ ॥
ನರಸಿಂಹನ ಪಾದಭಜನೆಯ ಮಾಡಲು ।
ದುರಿತ ಪರ್ವತವಖಂಡಿಸುವ ಕುಲಿಶದಂತೆ ॥ ಅ ಪ ॥

ತರಳನ ಮೊರೆಕೇಳಿ ತವಕದಿಂದಲಿ ಬಂದು ।
ದುರುಳನಕರುಳ ತನ್ನ ಕೊರಳಲಿ ಧರಿಸಿದ ॥ ೧ ॥

ಸುರರೆಲ್ಲ ನಡುಗಲು ಸಿರಿದೇವಿ ಮೊರೆಯಿಡೆ ।
ತ್ವರದಿ ಕಂಬದಿ ಬಂದ ವೈಕುಂಠಪತಿ ನಮ್ಮ ॥ ೨ ॥

ಹರವಿರಿಂಚ್ಯಾದಿಗಳು ಕರವೆತ್ತಿ ಮುಗಿಯಲು ।
ಪರಮ ಶಾಂತನಾದ ಪುರಂದರವಿಠಲ ॥ ೩ ॥

೧ ಅ (ಬಿಡಿ ೨) ರಿಂದ ತೆಗೆದುಕೊಂಡಿದೆ
೨ ಗ (A) ಪ್ರತಿಯಲ್ಲಿ ಸಿಕ್ಕುತ್ತಿದೆ

೫೭

ರಾಗ – ಶಂಕರಾಭರಣ ಆದಿ – ತಾಳ

[೧]ಏನಬೇಡಲಿ ಸ್ವಾಮಿ—ನಿನ್ನ ॥ ಪಲ್ಲ ॥

ಏನಬೇಡಲಿ ನಿನ್ನ ಚಂಚಲ ಕಠಿಣನ ।
ಮೌನದಿಂದಲಿ ಮೋರೆ ಓರೆಮಾಡುವನ ॥ ಅ ಪ ॥

ಕರುಳ ಹರಕನ—ಬೇಡಲೇನು ।
ತಿರಿದು ತಿಂಬವನ ॥
ಕೊರಳಗೊಯ್ಕ ಅರಣ್ಯ ತಿರುಗುವನ ।
ತಿರುಗಿ ಬೆಣ್ಣೆ ಕದ್ದು ತಿಂಬವನ ॥ ೧ ॥

ವಾಸಶೂನ್ಯನ ಕೈಯಕತ್ತಿ ।
ಬೀಸಿ ಸವರುವನ ।
ಕಾಸು-ವೀಸವನೆಲ್ಲ ಮೊಸಲು ಮಾಡಿಟ್ಟು ।
ಕೇಸಕ್ಕಿ ಉಂಡುಂಡು ವಾಸ ಮಾಡುವನ ॥ ೨ ॥

ಬೇಡಿದರೆ ನೀಡಿ—ಅವರ ಮೋರೆ ।
ಬಿಡೆಯುವನ್ನು ನೋಡಿ ।
ಬಡವರ ಕರತಂದು ಅಡಿಗೆ ಸೇರಿಸಿಕೊಂಡ ।
ಒಡೆಯ ಶ್ರೀಪುರಂದರವಿಠಲ ದೊರೆಯೆ ॥ ೩ ॥

೫೮

ರಾಗ – ಪೂರ್ವಕಲ್ಯಾಣಿ ತಾಳ – ಆದಿ

[೨]ಕೊಟ್ಟವನೂ ಸರಿಯೆ ಕೊಡದೆ-
ಬಿಟ್ಟವನೂ ಸರಿಯೆ ॥ ಪ ॥

---

೧ ಗ (B) ಛ (೧೨) ಪ್ರತಿಗಳನ್ನು ಹೊಂದಿಸಿ ಬರೆದಿದೆ
೨ ಆ (II) ಪ್ರತಿಯಿಂದ ತೆಗೆದುಕೊಂಡಿದೆ

ಇಕ್ಕಿದವರಿಗುಂಟು—ದುರ್ಮತಿ ।
ಸೊಕ್ಕಿದಗೇನುಂಟು ? ॥
ರಕ್ಕಸಾಂತಕ ನಮ್ಮ ಲಕ್ಕುಮಿಪತಿಯು ಮೊರೆ ।
ಹೊಕ್ಕವರಾದ ಭಜಕರಿಗೆ ॥ ೧ ॥

ಅರಸನಾದರು ಸರಿಯೆ—ಅವರಿಗೆ ।
ತಿರುಕನಾದರು ಸರಿಯೆ ॥
ಸರಸ-ವಿರಸದಿಂ ಮಾತನಾಡಿದರೇನು ? ।
ಹರಿಪಾದಪದುಮವ ನಿರುತ ಭಜಿಪರಿಗೆ ॥ ೨ ॥

ಪುಟ್ಟಿಸಿದ ಹರಿಯು—ನಮಗೆ ।
ಹೊಟ್ಟೆಗೆ ಕೊಡದಿಹನೆ ॥
ದಿಟ್ಟನಾಗಿ ನಮ್ಮ ಪುರಂದರವಿಠಲನ ।
ಗಟ್ಟಿಯಾಗಿ ನಂಬಿದ ದಾಸರಿಗೆ ॥ ೩ ॥

೫೯

ಉಗಾಭೋಗ

[1]ಬೆನಕನ ನಾನೊಲ್ಲೆನವ್ವ ಕುಲುಕಿ ನಡೆವವನ ।
ಷಣ್ಮುಖನನೊಲ್ಲೆನವ್ವ ಹಲವು ಬಾಯವನ ।
ಇಂದ್ರನನಾನೊಲ್ಲೆನವ್ವ ಮೈಯೆಲ್ಲ ಕಣ್ಣಿನವನ ।
ಚಂದ್ರನನಾನೊಲ್ಲೆನವ್ವ ಕಳೆಹೀನನಾದವನ ।
ರವಿಯನಾನೊಲ್ಲೆನವ್ವ ಉರಿದು ಮೂಡುವನ ।
ಹರನನಾನೊಲ್ಲೆನವ್ವ ಮರುಳುಗೊಂಬುವನ ।
ಧರೆಗತಿಚೆಲುವನು ಜಗಕೆಲ್ಲ ಒಡೆಯನು ।
ತಂದುತೋರೆ ನಮ್ಮ ಪುರಂದರವಿಠಲನ ॥ ೧ ॥

---

೧ ಅ ([illegible]

೬೦

ಸುಳಾದಿ

ಧ್ರುವತಾಳ

[೧]ನಿನ್ನಾಧೀನ ಎನ್ನ ತನು-ಮನ ।
ನಿನ್ನಾಧೀನ ಎನ್ನ ಧನ-ಧಾನ್ಯ ।
ಎನ್ನ ವಸ್ತು-ವಾಹನ ನಿನ್ನಾಧೀನ ।
ಎನ್ನ ಪುತ್ರ-ಮಿತ್ರ-ಕಳತ್ರರು ನಿನ್ನಾಧೀನ ।
ಎನ್ನ ಅನ್ನೋದಕ ನಿನ್ನಾಧೀನ ।
ಎನ್ನ ಆಧೀನ ಅವುದುಂಟು ನೀನೇ ನೋಡಾ ।
ಎನ್ನ ಇಚ್ಛೆಯೆ ಪುರಂದರವಿಠಲ ॥ ೧ ॥

ಮಟ್ಟತಾಳ

ತೇನವಿನಾ ತೃಣಮಪಿ ನ ಚಲತಿ ಎಂದು ಪ್ರಮಾಣ ।
ಅಣೋರಣೀಯಾನ್ ಮಹತೋಮಹಿಯಾನ್ ।
ಮಣಿಗಣಕಾಧಾರ ಗುಣವು ಇದ್ದಂತೆ ।
ಗುಣಗಣಭರಿತ ಶ್ರೀಪುರಂದರವಿಠಲ ।
ಅಣೋರಣೀಯಾನ್ ಜಗಕೆ ನಿನ್ನಾಧಾರ ॥ ೨ ॥

ರೂಪಕತಾಳ

ನಿನ್ನವನೆಂದೆನ್ನ ಕೈಯು ಪಿಡಿಯಲು ।
ನಿನ್ನ ಸೇವೆಯ ಸಾಧನಕೆ ಯತ್ನವಮಾಳ್ಪೆ ।
ಎನ್ನ ಯತ್ನಕೆ ನಿನ್ನ ಸಹಾಯವು ।
ನಿನ್ನ ಯತ್ನವು ನಿನ್ನ ಸ್ವಾಧೀನ ।
ನಿನ್ನ ಯತ್ನಕೆ ನಿನ್ನ ಸಹಾಯವು ।
ನಿನ್ನಾಧೀನ ಸರ್ವವು ಪುರಂದರವಿಠಲ ॥ ೩ ॥

೧ ಇ (ಮುದ್ರಿತ) ಪ್ರತಿಯಿಂದ ತೆಗೆದುಕೊಂಡಿದೆ

ಝಂಪೆತಾಳ

ಸ್ಮೃತಿಯೋ ಪಥಗತಿಯೋ ನಿನ್ನ ತಿಳಿಸುವ ।
ಮತಿಹೀನ ಕರ್ಮಠರು ಬಲ್ಲರೆ ಜಗದ ।
ಪತಿಯೇ ನಿನ್ನಯುಸ್ಥಿತಿಯು ಜಗದ ।
ಉತ್ಪತ್ತಿಸ್ಥಿತಿಗಳಿಗೆ ನೀನೆ ಕಾರಣನೆಂದು ।
ಮತಿವಂತರೆಲ್ಲ ಬಲ್ಲರಯ್ಯ ಪುರಂದರವಿಠಲ ॥ ೪ ॥

ತ್ರಿವಿಡೆತಾಳ

ಶ್ರುತಿ ಉಪನಿಷತ್ತುಗಳಲ್ಲಿ ।
ಸ್ಮೃತಿ ಪುರಾಣಗಳಲ್ಲಿ ।
ಇತಿಹಾಸ ಪಂಚರಾತ್ರಾಗಮಗಳಲ್ಲಿ ।
ಪ್ರತಿಪಾದ್ಯನು ನೀನೆ ಅತಿಶಯರಿಗತಿಶಯ ।
ಚತುರ್ಮುಖ ಪಂಚಮುಖ ದೇವತೆಗಳಿಗೆಲ್ಲ ।
ಗತಿನೀನೆ ಪುರಂದರವಿಠಲ ದೇವ ॥ ೫ ॥

ಅಟತಾಳ

ವೇದಗಳೆಂಬ ದಾವಣಿಗಳಲ್ಲಿ ।
ನಾಮಗಳೆಂಬ ಮೂಗುನೇಣುಗಳಿಂದ ।
ಜೀವರುಗಳೆಂಬ ಎತ್ತುಗಳನೆ ಕಟ್ಟಿ ।
ಭಕುತಿರಸವೆಂಬ ಮುಟ್ಟುಗಳನೆ ಹಾಕಿ ।
ಕರ್ಮವೆಂಬ ಭಾರವನು ಹೇರಿ ।
ಆಡುವನೊಬ್ಬ ಪುರಂದರವಿಠಲನೆಂಬ ।
ದೊಡ್ಡ ಬೇಹಾರಿಗ ಕಾಣಿರೊ ॥ ೬ ॥

ಆದಿತಾಳ

ಸಚರಾಚರ ಪ್ರೇರಿಸುವವರು ಆರಯ್ಯ ।
ಸ್ವತಂತ್ರರಾರಯ್ಯ ಯಂತ್ರವಾಹಕನಾರೊ ।
ಪುರಂದರವಿಠ್ಠಲರಾಯ ನೀನಲ್ಲದೆ ಇನ್ನಾರಯ್ಯ ॥ ೭ ॥

ಜತೆ

ನಿನ್ನನೆ ನಿನ್ನನೆ ನಿನ್ನನೆ ಮೊರೆ ಹೊಕ್ಕೆ ।
[illegible] ॥

೬೧

ರಾಗ – ಸೌರಾಷ್ಟ್ರ ತಾಳ – ಅಟ

[೧]ಕೇಶವ-ಮಾಧವ-ಗೋವಿಂದ ವಿಠಲೆಂಬ ದಾಸಯ್ಯ ಬಂದ ಕಾಣೆ ।
ದೋಷರಹಿತ ನರವೇಷವ ಧರಿಸಿದ ದಾಸಯ್ಯ ಬಂದ ಕಾಣೆ ॥ ಪ ॥

ಖಳನು ವೇದವನೊಯ್ಯೆ ಪೊಳೆವ ಕಾನಾದ ದಾಸಯ್ಯ ಬಂದ ಕಾಣೆ ।
ಘಳಿಲನೆ ಕೂರ್ಮತಾನಾಗಿ ಗಿರಿಯ ಪೊತ್ತ ದಾಸಯ್ಯ ಬಂದ ಕಾಣೆ ॥
ಇಳೆಯ ಕದ್ದ ಸುರನ ಕೋರೆದಾಡಿಯ ಅಳಿದ ದಾಸಯ್ಯ ಬಂದ ಕಾಣೆ ।
ಛಲದಿ ಕಂಬದಿ ಬಂದು ಅಸುರನ ಸೀಳಿದ ದಾಸಯ್ಯ ಬಂದ ಕಾಣೆ ॥ ೧ ॥

ಬಲಿಯ ದಾನವ ಬೇಡಿ ನೆಲವನಳೆದು ನಿಂದ ದಾಸಯ್ಯ ಬಂದ ಕಾಣೆ ।
ಮಲೆತ ಕ್ಷತ್ರಿಯರ ಕುಲವ ಸಂಹರಿಸಿದ ದಾಸಯ್ಯ ಬಂದ ಕಾಣೆ ॥
ಲಲನೆಯನೊಯ್ಯೆ ತಾ ತಲೆ ಹತ್ತಾರನು ಕೊಂದ ದಾಸಯ್ಯ ಬಂದ ಕಾಣೆ ।
ನೆಲಕೊತ್ತಿ ಕಂಸನ ಬಲವನಳಿದ ಮುದ್ದು ದಾಸಯ್ಯ ಬಂದ ಕಾಣೆ ॥ ೨ ॥

ಪುಂಡತನದಿ ಪೋಗಿ ಪುರವನುರುಪಿ ಬಂದ ದಾಸಯ್ಯ ಕಾಣೆ ।
ಲಂಡರ ಸದೆಯಲು ತುರಗವನೇರಿದ ದಾಸಯ್ಯ ಬಂದ ಕಾಣೆ ॥
ಹಿಂಡು ವೇದಗಳೆಲ್ಲ ಅರಸಿನೋಡಲು ಸಿಗದ ದಾಸಯ್ಯ ಬಂದ ಕಾಣೆ ।
ಪಾಂಡುರಂಗ ನಮ್ಮ ಪುರಂದರವಿಠಲ ದಾಸಯ್ಯ ಬಂದ ಕಾಣೆ ॥ ೩ ॥

೬೨

ರಾಗ—ಧನ್ಯಾಸಿ ತಾಳ—ಅಟ

[೨]ಎನಗೊಬ್ಬ ದೊರೆ ದೊರಕಿದನು ।
ವನಜಸಂಭವನಯ್ಯ ಹನುಮನಂತರ್ಯಾಮಿ ॥ ಪ ॥

ಮಾತಾಪಿತನು ಆದ ಭ್ರಾತೃ ಬಾಂಧವನಾದ ।
ಪ್ರೀತಿಯಿಂದಲಿ ತಾನೇ ನಾಥನಾದ ॥

---

೧ ಓ ಪ್ರತಿಯೊಂದರಲ್ಲಿಯೇ ಸಿಕ್ಕಿದೆ
೨ ಓ ಪ್ರತಿಯೊಂದರಲ್ಲಿಯೇ ಸಿಕ್ಕಿದೆ

ಖ್ಯಾತನು ತಾನಾದ  ದಾತನು ತಾನಾದ ।
ಭೂತೇಶವಂದ್ಯ ವಿಭೂತಿಪ್ರದನಾದ ॥ ೧ ॥

ಅಜರಾಮರಣನಾದ ಅಪ್ರಾಕೃತನಾದ ।
ವಿಜಯಗೊಲಿದು ನಿಜ ಸೂತನಾದ ॥
ಭುಜಗಶಯನನಾದ ತ್ರಿಜಗವಂದಿತನಾದ ।
ಅಜಮಿಳನಂತ್ಯಕತ್ಯಂತ ಸುಹೃದನಾದ ॥ ೨ ॥

ಶಂಖಚಕ್ರಾಂಕಿತದ  ಸಂಕರುಷಣನಾದ ।
ಬಿಂಕದ ಬಿರುದುಗಳ ಪೊತ್ತವನಾದ ॥
ಪಂಕಜನಯ್ಯನ ಮೀನಾಂಕಜನಕನಾದ ।
ಓಂಕಾರಮೂರುತಿ ಪುರಂದರವಿಠಲನು ॥ ೩ ॥

## ೬೩

ರಾಗ - ಕಾಂಬೋದಿ   ತಾಳ - ಝಂಪೆ

[೧]ಬದುಕಿದೆನು ಬದುಕಿದೆನು ಭವದುರಿತ ಹಿಂಗಿತು ।
ಪದುಮನಾಭನಪಾದದೊಲಿಮೆ ಎನಗಾಯಿತು ॥ ಪ ॥

ಹರಿಯತೀರ್ಥಪ್ರಸಾದವು ಎನಗೆ ದೊರಕಿತು ।
ಹರಿಕಥಾಮೃತವೆನ್ನ ಕಿವಿಗೊದಗಿತು ॥
ಹರಿದಾಸರುಗಳೆನ್ನ ಬಂಧು-ಬಳಗವಾದರು ।
ಹರಿಯಶ್ರೀಮುದ್ರೆಯೆನಗೆ ಆಭರಣವಾಯ್ತು ॥ ೧ ॥

ಮುಕ್ತರಾದರು ಎನ್ನ ನೂರೊಂದು ಕುಲದವರು ।
ಮುಕ್ತಿಮಾರ್ಗಕೆ ಯೋಗ್ಯ ನಾನಾದೆನು ॥
[೨]ಸುಕೃತಿದೇಹಕ್ಕೆನ್ನ ಮನವು ತಾನೆಳಸಿತ್ತು ।
ಅಕಳಂಕ ಹರಿನಾಮ ದಿವ್ಯಕೊದಗಿತ್ತು ॥ ೨ ॥

---

೧ ಕ. ವಿ. ವಿ. ತಾಳೆಗರಿ (ಸಂ. ೨೫೬೩–೧೭೫೦) ಪ್ರತಿಯಿಂದ ತೆಗೆದುಕೊಂಡಿದೆ. ಎ ಓ ಪ್ರತಿಗಳಲ್ಲಿ ವಿಕಾರಗಳು ಹೇರಳವಾಗಿವೆ.
ವಿ. ಸೂ. ಇದು ಕನಕದಾಸರ ಅಂಕಿತದಿಂದ ಬೇರೆ ಕಡೆಯಲ್ಲಿ ಅಚ್ಚಾಗಿದೆ.

೨ ಮು... ದೇಹಕ್ಕೆ ಯುಕುತಿಮನವೆಳಸಿತು [ ಬ೧ (ಬಡ೬) ].

ಇಂದೆನ್ನ ಸಂತತಿಗೆ ಸಕಲ ಸಂಪದವಾಯ್ತು ।
ಮುಂದೆನ್ನ ಜನ್ಮ ಸಾಫಲ್ಯವಾಯ್ತು ॥
ತಂದೆ ಶ್ರೀಹರಿ ಪುರಂದರವಿಠಲರಾಯನೇ ।
ಬಂದೆನ್ನ ಹೃದಯದೊಳು ನೆಲೆಯಾಗಿ ನಿಂತ ॥ ೩ ॥

೬೪

ರಾಗ - ಕೇದಾರಗೌಳ ತಾಳ – ರೂಪಕ

[೧]ರಾಮರಾಮ ರಾಮರಾಮ ರಾಮನೆನ್ನಿರೊ ।
ರಾಮರಾಮವೆಂಬ ನಾಮಮನದಿನೆನೆಯಿರೊ ॥ ಪ ॥

ಇಂದ್ರಿಯಂಗಳೆಲ್ಲ ಕೂಡಿ ಬಂದು ತನ್ನ ಮುಸುಕಿದಾಗ ।
ಸಿಂಧುಸುತಾಪತಿಯ ಧ್ಯಾನ ಅಂದಿಗೆ ಒದಗಲೀಯದು ॥ ೧ ॥

ಭರದಿ ಯಮನ ಭಟರು ಬಂದು ಹೊರಡು ಎಂದು ಮೆಟ್ಟಲು ।
ಕೊರಳಿಗಾತ್ಮ ಸೇರಿದಾಗ ಹರಿಯ ಧ್ಯಾನ ದೊರೆಯದಯ್ಯ ॥ ೨ ॥

ಕಾಸಶ್ವಾಸದಲ್ಲಿ ಸಿಲುಕಿ ದೋಷ ಬಲಿದು ಪೋಗುವಾಗ ।
ವಾಸುದೇವನೆಂಬ ನಾಮ ವದನದಲ್ಲಿ ಒದಗದಯ್ಯ ॥ ೩ ॥

ಶೃಂಗಾರವಾದ ದೇಹ ತಂಗಿ ಬಿಟ್ಟು ಪೋಗುವಾಗ ।
ಕಂಗಳಿಗಾತ್ಮಸೇರಿದಾಗ ರಂಗನ ಧ್ಯಾನ ದೊರಕದಯ್ಯ ॥ ೪ ॥

ಕಷ್ಟಜನ್ಮದಲ್ಲಿ ಬಂದು ದುಷ್ಟಕರ್ಮಗಳನುಮಾಡಿ ।
ಬಿಟ್ಟುಹೋಗುವಾಗ ಪುರಂದರವಿಟ್ಠಲನ ನೆನೆಮನವೆ ॥ ೫ ॥

೬೫

ರಾಗ—ಕಾಂಬೋದಿ ತಾಳ—ಝಂಪೆ

[೨]ಹಣ್ಣ ಕೊಳ್ಳಿರೊ—ಜನರು-ಹಣ್ಣ ಕೊಳ್ಳಿರೊ ॥ ಪ ॥
ಘನ್ನರಕ್ಕಸಮಥನನೆಂಬ ಸವಿ ॥ ಅ. ಪ. ॥

ಕಳಿತು ಬೀಳುವುದಲ್ಲ ಕೊಳೆತು ಕೆಡುವುದಲ್ಲ ।
ಹುಳಿತು ಬೀಸಾಡಿಸಿಕೊಂಬುವುದಿಲ್ಲ ॥

---

೧ ಅ (ಅ) ಪ್ರತಿಯೊಂದರಲ್ಲಿಯೇ ಸಿಕ್ಕುತ್ತಿದೆ
೨ ಕ, [illegible] [illegible] ಪ್ರ[illegible]ದೆ.

ಗಿಳಿ ಕಚ್ಚಿ ತಿಂಬುವುದಲ್ಲ ಅಳತೆಗೊಂಬುವುದಲ್ಲ ।
ಕಳಿತ ಮಾವಿನಹಣ್ಣು ಬಂದಿದೆ ॥ ೧ ॥

ಹವ್ಯಕವ್ಯದ ಹಣ್ಣು ಸವಿಯು ಸಕ್ಕರೆ ಹಣ್ಣು ।
ಭವರೋಗಗಳನೆಲ್ಲ ಪರಿಹರಿಪಹಣ್ಣು ॥
ನವನೀತವಾದ ಹಣ್ಣು ಜವಗೆ ಅಂಜದ ಹಣ್ಣು ।
ಪವನಸುತನರಸ ಶ್ರೀರಾಮನೆಂಬ ಹಣ್ಣು ॥ ೨ ॥

ತೊಟ್ಟು ಮುಗುಳು ಇಲ್ಲ ಬಿತ್ತು ಸಕ್ಕರೆ ಇಲ್ಲ ।
ಮುಟ್ಟು ಹೊಂದುಗಳಿಲ್ಲದ ಹಣ್ಣು ॥
ಗಟ್ಟಬೆಟ್ಟದ ಮೇಲೆ ಸುತ್ತಿ ಸುಳಿದಾಡಿಸುವ ।
ಸೃಷ್ಟೀಶ ಪುರಂದರವಿಠಲನೆಂಬ ಹಣ್ಣು ॥ ೩ ॥

೬೬

ರಾಗ - ಶಂಕರಾಭರಣ ತಾಳ - ಆದಿ

[1]ಹಣ್ಣು ಕೊಂಬರು ಬನ್ನಿ ಹರಿದಾಸರು ।
ಚಿನ್ನ ಬಾಲಕೃಷ್ಣನೆಂಬ ಗೊನೆ ಬಾಳೆಹಣ್ಣು ॥ ಪ ॥

ಅಜನ ಪಡೆದ ಹಣ್ಣು ಗಜವಸಲಹಿದ ಹಣ್ಣು ।
ನಿಜವಿದು ಮುನಿಗಳಿಗೆ ತೋರಿಸಿದಾ ಹಣ್ಣು ॥
ತ್ರಿಜಗವಂದಿತಪಾದ ಎಂಬ ಮಾವಿನ ಹಣ್ಣು ।
ಸುಜನ ಗಂಧಿಯರು ಕೊಳಬನ್ನಿರಮ್ಮಯ್ಯ ॥ ೧ ॥

ಮುದ್ದು ಸುರಿವ ಹಣ್ಣು ಮುರಹರನೆಂಬ ಹಣ್ಣು ।
ಕ್ಷುದ್ರದೋಷಂಗಳ ಪರಿಹರಿಸುವ ಹಣ್ಣು ॥
ಕದ್ದು ಬೆಣ್ಣೆಯ ಮೆದ್ದು ಕಳಲಿಲ್ಲವೆಂತೆಂಬ ಹಣ್ಣು ।
ಮುದ್ದುಕೃಷ್ಣನೆಂಬ ಹಣ್ಣ ಕೊಳಬನ್ನಿರಮ್ಮ ॥ ೨ ॥

ಮುನ್ನೊಬ್ಬ ಅಜಾಮಿಳ ಗತಿಯುಬಯಸಿದ ಹಣ್ಣು ।
ಕನ್ನೆಯಭಿಮಾನವ ಕಾಯ್ದ ಹಣ್ಣು ॥

[1] ಮ ಮುದ್ರಿತ ಪ್ರತಿಗಳಿಂದ ಆರಿಸಿಕೊಂಡಿದೆ.

ಪನ್ನಗಶಾಯಿ ಪಾಲ್ಗಡಲೊಡೆಯನೆಂಬ ಹಣ್ಣು ।
ಚೆನ್ನಕೃಷ್ಣನೆಂಬ ಹಣ್ಣ ಕೊಳಬನ್ನಿರಮ್ಮಯ್ಯ ॥ ೩ ॥

ಸುತ್ತೇಳು ಲೋಕದಿ ಸುರರು ಬಿತ್ತಿದ ಹಣ್ಣು ।
ಭಕ್ತರ ಬಾಯೊಳು ನೆನೆಯುವ ಹಣ್ಣು ॥
ಸತ್ಯವಂತರೆಲ್ಲ ಕೊಳಬೇಕಾದ ಹಣ್ಣು ।
ಚಿತ್ತಜಪಿತನೆಂಬ ಹಣ್ಣು ಕೊಳ್ಳಿರಮ್ಮಯ್ಯ ॥ ೪ ॥

ತುರುವ ಕಾಯ್ದ ಹಣ್ಣು ಉರಗನ ತುಳಿದ ಹಣ್ಣು ।
ಕರೆದರೆ ಕಂಬದೊಳು ಬಂದ ಹಣ್ಣು ॥
ಮರುಗುವ ಧ್ರುವನ ಉನ್ನತವ ಮಾಡಿದ ಹಣ್ಣು ।
ಪುರಂದರವಿಠಲನೆಂಬ ಹಣ್ಣು ಕೊಳಬನ್ನಿರಮ್ಮ ॥ ೫ ॥

## ೬೭

ರಾಗ ತಾಳ

[೧]ರಾಮನಾಮಾಮೃತವ ಕೊಂಬವರೆಲ್ಲ ।
ಪ್ರೇಮದಿಂದಚ್ಯುತಪೇಟೆಗೆ ಬನ್ನಿರೆ ॥ ಪ ॥

ಒಮ್ಮನವೆರಸಿಬನ್ನಿ ।
ನಿಮ್ಮ ಮನಕೆ ಬಂದಂತಳೆದುಕೊಳ್ಳಿ ॥
ರಾಮಟಂಕೆಯ ಸಲಿಸಿ ಶ್ರೀಕೃಷ್ಣನೆಂಬ ।
ಧರ್ಮದ ಸಂತೆ ನೆರೆದಿದೆ ಬನ್ನಿ ॥ ೧ ॥

ಉಂಟು ನಾಲ್ಕು ಕುದುರೆಗಳು ।
ಎಂಟಾನೆಯು ಬಿರುಬಲೆಯಲ್ಲಿ ಕಟ್ಟಬಾಹುದು ॥
ಸಾಲವರ್ಣದ ಪಟ್ಟೆಯು ಏಳಿರೆ ।
ಏಳುಲೋಕವು ಬಲ್ಲದು ॥ ೨ ॥

---

೧ ಕ.ವಿ.ವಿ. ತಾಳೆಗರಿ (ಸಂ ೨೯೯೨ । ೧೬೭೦) ಯಿಂದ ತೆಗೆದುಕೊಂಡಿದೆ.

ವಿ, ಸು. ಈ ಹಾಡನ್ನು ಇದ್ದ ಹಾಗೆಯೆ ಬರೆದಿದೆ. ಇದರಲ್ಲಿ ಭಾಷೆಯ ಮತ್ತು ಛಂದಸ್ಸಿನ ದೋಷಗಳಿದ್ದಂತೆ ತೋರುತ್ತದೆ.

ಬೆಲೆಯಿಲ್ಲದ ಮುತ್ತುಂಟು ।
ಏಳೇಳ್ಪುಟಿಯು ಹೊಳೆವಪರಂಜಿಯುಚಿನ್ನವುಂಟು ॥
ಥಳಥಳಿಸುವ ನೀಲಿಯುಕೊಂಬುವರೆಲ್ಲ ।
ನಳಿನನಾಭನ ಸನ್ನಿಧಿಗೆ ಬನ್ನಿ ॥ ೩ ॥

ಎರಡು ರಾಶಿಯುಲಳೆವ ಕೊಳಗವು ।
ಪಿರಿದುದೊಂದು ಕಿರಿದುದೊಂದು ಉಂಟಲ್ಲಿಗೆ ॥
ಗರಳವವೊರಿಸಲು ರತ್ನವು ।
ಮರುತಾಶ್ರಯನ ಸನ್ನಿಧಿಗೆ ॥ ೪ ॥

ಆರಂಗಡಿಯು ಸುಟ್ಟು ।
ಸೂರೆಮಾಡಿ ಏಳು ಎಂಟು ಹಟ್ಟಕೊರವನೊ....ದುದು ॥
ಸಾರಿಸಿನವವಿಧ ಶುಚಿಯು ಹೇಳಿದ ।
ಸರ್ವಾತ್ಮಗೆ ಸೌದೆಯು ॥ ೫ ॥

ಸುಂಕಿಗರ್ಯೈವರಿಗೆ ಹರುಷದಿಂದ ।
ಪಂಕಜನಾಭನ ಚೀಲತೋರಿ
ಶಂಕೆಯಿಲ್ಲದೆ ನಡೆವ ಆವರನೆಲ್ಲ ।
ವಂಚಿಸಿ ಎದೆಯು ಟೊಣೆದುಹೋಗುವಾ ॥ ೬ ॥

ಇಂದೊಂದು ಸರಶಿಗೆ ಬಹಳಲಾಭ । ತಾ—
ತಂದು ಕುಳಿತುಂಬುದಕೆ ಉಂಟು ॥
ತಂದೆ ಪುರಂದರವಿಠಲರಾಯು ।
ಗಂಡವಾಯಿತು ಬೇಹಾರವು ॥ ೭ ॥

೬೮

ರಾಗ – ಶಂಕರಾಭರಣ ತಾಳ - ಛಾಪು

[1]ರಾಮನಾಮಪಾಯಸಕ್ಕೆ ಕೃಷ್ಣನಾಮಸಕ್ಕರೆ ।
ನಾಮವಿಠಲ ತುಪ್ಪ ಬೆರೆಸಿ ಬಾಯಿ ಚಪ್ಪರಿಸಿರೊ ॥ ಪ ॥

---

೧ ಅ (ಅ) ಹ (ಪಾ) ಪ್ರತಿಗಳಿಂದ ಆರಿಸಿದೆ.

ಒಪ್ಪುನ ಗೋದಿಯ ತಂದು। ವೈರಾಗ್ಯಕಲ್ಲಲಿ ಬೀಸಿ।
ಸುಷುಮ್ನ ಸಜ್ಜಿಗೆ ತೆಗೆದು। ಸಣ್ಣ ಸೇವಗೆ ಹೊಸೆದು ॥ ೧ ॥

ಹೃದಯವೆಂಬ ಪಾತ್ರೆಯೊಳಗೆ। ಮನವೆಂಬ ಎಸರನಿಟ್ಟು।
ಬುದ್ಧಿಯಿಂದ ಪಾಕ ಮಾಡಿ। ಹರಿವಾಣ ತುಂಬಿರೋ ॥ ೨ ॥

ಆನಂದ ಆನಂದವೆಂಬ ತೇಗು ಬಂದ ಪರಿಯಲಿ।
ಆನಂದಮೂರುತಿ ನಮ್ಮ ಪುರಂದರವಿಠಲ ॥ ೩ ॥

೬೯

ಉಗಾಭೋಗ

[1]ಶ್ರವಣದಿಂದ ಹೋಯಿತು ಬ್ರಹ್ಮಹತ್ಯಾಪಾಪ।
ಸ್ಮರಣೆಯಿಂದ ಹೋಯಿತು ಸೇರಿದ್ದ ಪಾಪವು।
ಎಲ್ಲಿದ್ದ ಅಜಮಿಳ ಎಲ್ಲಿತ್ತು ವೈಕುಂಠ।
ಕೊಟ್ಟಾತನೆ ಬಲ್ಲ ಪುರಂದರವಿಠಲ ॥ ೧ ॥

೭೦

ಉಗಾಭೋಗ

[2]ಹರಿ ನೀ ಮುನಿದರೆ ಆರು ಒಲಿದೇನ ಮಾಡುವರು।
ಹರಿ ನೀ ಒಲಿದರೆ ಆರು ಮುನಿದೇನ ಮಾಡುವರು।
ಪುರಂದರ ವಿಠಲ ॥೧॥

೭೧

ಉಗಾಭೋಗ

[3]ಅಚ್ಯುತನ ಭಕುತರಿಗೆ ಮನ।
ಮೆಚ್ಚದವನು ಪಾಪಿ।

---

೧ ಝು (ಲ) ಪ್ರತಿಯಿಂದ ಆರಿಸಿದೆ.
೨ ಝು (೬) ಪ್ರತಿಗಳಿಂದ ಆರಿಸಿದೆ
೩ ಧ ಪ್ರತಿಯಿಂದ ತೆಗೆದುಕೊಂಡಿದೆ

ಆನರರನೊಳ್ ಆಡಿ ನೋಡಿ ನುಡಿಯೆ ।
ಮನುಜವೇಷದ ರಕ್ಕಸನೋಳ್ ಆಡಿನುಡಿದಂತೆ ।
ಸಚ್ಚಿದಾನಂದಾತ್ಮ ಪುರಂದರ ವಿಠಲನು ।
ಮೆಚ್ಚನು ಮೆಚ್ಚನು ಕಾಣೊ ಎಂದೆಂದಿಗೂ ॥೨॥

೭೨

ಉಗಾಭೋಗ

[1]ಅಣಕದಿಂದಾಗಲಿ ಡಂಭದಿಂದಾಗಲಿ ।
ಎಡಹಿದಡಾಗಲಿ ಬಿದ್ದಡಾಗಲಿ ।
ತಾಗಿದಡಾಗಲಿ ತಾಕಿಲ್ಲದ ಡಾಗಲಿ ।
ಮರೆದು ಮತ್ತೊಮ್ಮೆ ಆಗಲಿ ।
ಹರಿ ಹರಿ ಎಂದವರಿಗೆ ನರಕದ ಭಯವೇಕೆ ? ।
ಯಮಪಟ್ಟಣ ಕಟ್ಟಿದರೇನು ।
ಯಮಪಟ್ಟಣ ಬಟ್ಟಬಯಲಾದರೇನು ? ।
ಹರಿ ದಾಸರಿಗೆ ಪುರಂದರವಿಠಲ ॥೩॥

೭೩

ಉಗಾಭೋಗ

[2]ಒಡಲೊಳು ಪೊಗದನಕ ಆರೆಬಿಡರುನಾಮ ಸುಧೆಯ ।
ಕೊಡುವರೊ ಮುಕುತಿಯ ತಡೆವರೊ ಭವಸಿಂಧುವ ।
ಮೃಡಸಖಪುರಂದರವಿಠಲನ ದಾಸರು ।
ಕೊಡುವರೊ ಮುಕುತಿಯ

೭೪

[3]ಕಣ್ಣಲ್ಲಿ ನೀರಿಲ್ಲ ಮನದಲ್ಲಿ ಕರಗಿಲ್ಲ ।
ಅತ್ತೆ ಸತ್ತರೆ ಸೊಸೆ ಅಳುವಂತೆ ।

---

೧ ಎ ಓ ಧ ಪ್ರತಿಗಳಿಂದ ಆರಿಸಿದೆ,
೨ ಧ ಪ್ರತಿಯಲ್ಲಿ ಸಿಕ್ಕುತ್ತಿದೆ
೩ ಘ ೩ ಪ್ರತಿಗಳಿಂದ ತೆಗೆದುಕೊಂಡಿದೆ

ಅತ್ತೆ ಅತ್ತೆ ಎಂತೆಂದು ನಾನತ್ತೆ ।
ಅತ್ತೆ ಸತ್ತರೆ ಎದೆ ಎರಡುಪರಿಯಾಯಿತೆಂದು !
ಅತ್ತೆ ಅತ್ತೆ ಎಂದು ಅತ್ತೆ ಪುರಂದರವಿಠಲನ ।
ದಾಸರೆಲ್ಲರ ಮುಂದೆ ಹಾಡಿ ಹಾಡಿ ನಾನತ್ತೆ ॥

೭೫

ಉಗಾಭೋಗ

[1]ತನುವೆಂಬ ದೊಡ್ಡ ದೋಣಿಯಲಿ ।
ಹರಿನಾಮವೆಂಬ ಬಂಡವ ತುಂಬಿ ।
ವ್ಯವಹಾರವನು ಮಾಡುವೆನಯ್ಯ ।
ಇಂದ್ರಿಯಗಳೆಂಬ ಸುಂಕಿಗರು ಅಡ್ಡಾದರೆ ।
ಮುಕುಂದನ ಮುದ್ರೆಯನೇ ತೋರಿ ಹೊಳೆಯ-
ದಾಟುವೆನಯ್ಯ ।
ಪುರಂದರವಿಠಲನಲ್ಲಿಗೆ ಪೋಗಿ ।
ಮುಕುತಿ ಸುಖದ ಲಾಭವ ಪಡೆವೆ

೭೬

ಉಗಾಭೋಗ

[2]ದರಿದ್ರರೆನಬಹುದೆ ಹರಿದಾಸರ ।
ಸಿರಿವಂತರೆನಬಹುದೆ ಹರಿದ್ರೋಹಿಗಳ ।
ಹರಿದಾಸರಮೇಲಿದ್ದ ಕರುಣವು ಸಿರಿದೇವಿಯಮೇಲಿಲ್ಲ ।
ಪುರಂದರವಿಠಲನ ಆಳುಗಳಿಗೆ ।
ಎಲ್ಲಿಹುದೈ ಮಾನ ಅಭಿಮಾನ ಜಗದಿ ॥

೭೭

ಉಗಾಭೋಗ

[3]ದಾಸನಾಗುವುದಕ್ಕೆ ಏಸುಜನ್ಮದ ಸುಕೃತ ।
ಭಾಸುರ ರವಿಕೋಟಿ ಶ್ರೀಶ ಸುಗುಣವಂತ ।

---

೧ ಧ ಪ್ರತಿಯಿಂದ ತೆಗೆದುಕೊಂಡಿದೆ
೨ ಏ ದ ಪ್ರತಿಗಳಿಂದ ಆರಿಸಿಕೊಂಡಿದೆ
೩ [illegible] ಧ ಪ್ರತಿಗಳಿಂದ ಆರಿಸಿದೆ

ನಾಶರಹಿತ ನಿನ್ನ ದಾಸರ ದಾಸ್ಯವ ।
ಬೇಸಾಗಿ ಕೊಡು ಕಂಡೆಯ ಪುರಂದರವಿಠಲ ॥

೭೮

ಉಗಾಭೋಗ

[೧]ನಿನ್ನ ಕಾಲ ಹೆಜ್ಜೆಯ ಪಿಡಿದು ನಾನಿಲುವೆ ।
ನಿನ್ನ ಪಂಜು ಹಿಡಿದು ಒಡ್ಡಿ ಬೊಬ್ಬಿಡುವೆ ।
ನಿನ್ನ ಛತ್ರ ಚಾಮರ ಪಿಡಿದೇಳುವೆ ।
ನೀರ ನೀವಾಳಿಸಿಕೊಂಡು ಕೊಬ್ಬುವೆನು ।
ಬಿಡೆನು ಬಿಡೆನು ನಿನ್ನ ಚರಣಕಮಲವ ।
ಪುರಂದರವಿಠಲ ನಿನ್ನ ಪಾದವ ಬಿಡೆನು ॥

೭೯

ಉಗಾಭೋಗ

[೨]ನಿನ್ನ ದಾಸನಾಗಿ ನಿನ್ನೆಂಜಲವನುಂಡು ।
ನೀನುದಾಸೀನ ಮಾಡಿದರೆ ಲೋಕರು ನಗರೆ ।
ನಿನ್ನ ಚರಣ ಕಮಲವನ್ನು ಕೊರಳಲಿ ಕಟ್ಟುವೆ ।
ಪುರಂದರ ವಿಠಲ ॥

೮೦

ಉಗಾಭೋಗ

[೩]ನಿನ್ನಾಳೆಂದಡೆ ಹರಿಯೆ ಇನ್ನೇನಿನ್ನೇನು ।
ಎನ್ನೊಳಿದ್ದವ ನೀನಾದೆ ನಿನ್ನದಾಸನಾನಾದೆ ।
ಇನ್ನು ನೀನು ಸಾಕದಿರಲು ನಿನ್ನದಾಸರು ನಗರೆ ।
ಘನ್ನಮಹಿಮ ಪುರಂದರವಿಠಲರಾಯ ॥

---

೧ ಎ ಜ ಪ್ರತಿಗಳಿಂದ ಆರಿಸಿದೆ
೨ ಎ ಓ ಘ ಙ ಧ ಪ್ರತಿಗಳಿಂದ ಆರಿಸಿಕೊಂಡಿದೆ
೩ ಧ ಪ್ರತಿಯಿಂದ ತೆಗೆದುಕೊಂಡಿದೆ

೮೧

ಉಗಾಭೋಗ

[1]ಯದು ಕೃಷ್ಣ ಯಾದವಕೃಷ್ಣ ಎಂದವರಿಗೆ ಅಂತ್ಯಕಾಲದಲಿ |
ಮೊದಲಿನ ಶಬ್ದ ಕೇಳಿದ ಮಾತ್ರದಿಂದ ಮುದದಿ ಮುಕ್ತಿಯನಿತ್ತಂತೆ |
ಸದಾಭಕುತಿಯ ತನ್ನ ಪಾದದಲ್ಲಿ ಕೊಟ್ಟು |
ಎರಡನೆಯನಾಮ ಕೇಳಿದ್ದಕ್ಕೆ ಏನ ಕೊಡಲೆಂದು ನಾಚಿ |
ನಮ್ರದಿ ಸದಯ ಶ್ರೀಪುರಂದರವಿಟ್ಠಲಸ್ವಾಮಿ |
ಮುದದಿ ನಾಮಸ್ಮರಣೆಯ ಕೊಟ್ಟು ಕಾಯ್ವ ||

೮೨

ಉಗಾಭೋಗ

[2]ಲೇಸು ದಾಸರಿಗೆ ಕ್ಲೇಶ ದುಷ್ಟರಿಗೆ |
ಸಿರಿ ಭಾಗವತರಿಗೆ ಪಾಪ ಪಾಷಂಡಿಗಳಿಗೆ |
ಕೀರ್ತಿಕಿಂಕರರಿಗೆ ಅಪಕೀರ್ತಿ ಮಂಕುಗಳಿಗೆಲ್ಲ |
ಸುಖ ಮಹಾತ್ಮರಿಗೆ ಕಷ್ಟನಷ್ಟರಿಗೆ |
ಪುರಂದರವಿಠಲನ ಆಳುಗಳಿಗೆ ಮುಕುತಿ |
ಇತರರಿಗೆ ಅಂಧಂತಮಸ್ಸು ಸಂದೇಹವಿಲ್ಲವೊ ||

೮೩

ರಾಗ - ಮಧ್ಯಮಾವತಿ ತಾಳ - ಅಟ

[3]ತಾಳಬೇಕು—ತಕ್ಕ—ಮೇಳಬೇಕು—ಶ್ರೀ |
ಲೋಲನಚರಿತೆಯ ಹೇಳುವದಾಸರಿಗೆ || ಪ ||

ಗಳಶುದ್ಧಿ ಇರಬೇಕು | ತಿಳಿದು ಪೇಳಲು ಬೇಕು |
ಕಳವಳಬಿಡಬೇಕು | ಕಳೆಮೊಗವಿರಬೇಕು || ೧ ||

ಯತಿಪ್ರಾಸವಿರಬೇಕು | ಗತಿಗೆ ನಿಲ್ಲಿಸಬೇಕು ||

---

೧ ಖ ೧ (೪) ಪ್ರತಿಯಿಂದ ತೆಗೆದುಕೊಂಡಿದೆ ಇದು ಬಹಳವಿಕಾರಗೊಂಡಿದೆ
೨ ಎ ಖ ೧ (೪) ಘ ೩ ಪ್ರತಿಗಳಿಂದ ಇರಿಸಿಕೊಂಡಿದೆ
೩ ಅ (೮) ರಿಂದ ಆರಿಸಿಕೊಂಡಿದೆ.

 

[1]ಶ್ರುತಿಪತಿಕೇಳಬೇಕು । ರತಮುಖವಿರಬೇಕು ॥ ೨ ॥

ಹರಿದಾಸನಾಗಿರಬೇಕು । ಹರುಷಪಡುತಿರಬೇಕು ।
ಪುರಂದರವಿಠಲನಲಿ । ಸ್ಥಿರಚಿತ್ತವಿರಬೇಕು ॥ ೩ ॥

೮೪

ರಾಗ - ಕಲ್ಯಾಣಿ ತಾಳ - ಅಟ

[2]ಒಂದೇ ನಾಮವು ಸಾಲದೆ—ಶ್ರೀಹರಿಯೆಂಬ
ಒಂದೇ ನಾಮವು ಸಾಲದೆ ॥ ಪ ॥

ಒಂದೇ ನಾಮವು ಭವಬಂಧನ ಬಿಡಿಸುವು- ।
ದೆಂದು ವೇದಂಗಳಾನಂದದಿಸ್ತುತಿಸುವ ॥ ಅ ಪ ॥

ಉಭಯರಾಯರು ಸೇರಿ ಮುದದಿಲೆತ್ತವನಾಡಿ ।
ಸಭೆಯೊಳು ಧರ್ಮಜ ಸತಿಯುಸೋಲೆ ॥
ನಭಕೆ ಕೈಯೆತ್ತಿ ದ್ರೌಪದಿ ಕೃಷ್ಣ ಎನ್ನಲು ।
ಇಗರಾಜಗಮನೆಗಕ್ಷಯುವಸ್ತ್ರವನಿತ್ತ ॥ ೧ ॥

ಹಿಂದೊಬ್ಬ ಋಷಿಪುತ್ರನಂದು ದಾಸಿಯುಕೂಡೆ ।
ಸಂದೇಹವಿಲ್ಲದೆ ಹಲವು ಕಾಲ ।
ದಂದುಗದೊಳು ಸಿಲುಕಿ ನಿಂದಂತ್ಯಕಾಲದಿ ।
ಕಂದನಾರಗನೆಂದು ಕರೆಯುಲಭಯವಿತ್ತ ॥ ೨ ॥

ಕಾಶಿಯುಪುರದೊಳು ಈಶಭಕುತಿಯಿಂದ ।
ಸಾಸಿರನಾಮದ ರಾಮನೆಂಬ ॥
ಶ್ರೀಶನನಾಮದ ಉಪದೇಶ ಸತಿಗಿತ್ತ ।
ವಾಸುದೇವ ಶ್ರೀಪುರಂದರವಿಠಲನ ॥ ೩ ॥

---

೧ ರತಿಪತಿಪಿತನೊಳು ಅತಿಪ್ರೇಮವಿರಬೇಕು, (ಓ).

೨ ಓ [illegible]

೮೫

ರಾಗ – ನಾದನಾಮಕ್ರಿಯೆ ತಾಳ – ಅಟ

[೧]ಕಣ್ಣಿನೊಳಗೆ ನೋಡೊ ಹರಿಯ–ಒಳ–
ಗಣ್ಣಿನಿಂದಲಿ ನೋಡೊ ಮೂಜಗದೊರೆಯ || ಪ ||

ಆಧಾರ ಮೊದಲಾದ ಆರು–ಚಕ್ರ–
ಶೋಧಿಸಿ ಸುಡಬೇಕು ಈ ಷಣ ಮೂರು ||
ಸಾಧಿಸಿ ಸುಷುಮ್ನ ಏರು ಅಲ್ಲಿ
ಭೇದಿಸಿ ನೀ ಪರಬ್ರಹ್ಮನಸೇರು || ೧ ||

ಏವೆಹಾಕದೆ ಮೇಲೆ ನೋಡು–ಮುಂದೆ–
ತವಕದಿಂದಲಿ ವಾಯು ಬಂಧನ ಮಾಡು ||
ಸವಿದು ನಾದವ ಪಾನ ಮಾಡು–ಅಲ್ಲಿ–
ನವವಿಧ ಭಕ್ತಿಯಲಿ ನಲಿನಲಿದಾಡು || ೨ ||

ಅಂಡದೊಳಗೆ ಆಡುತಾನೆ-ಭಾನು-
ಮಂಡಲ ನಾರಾಯಣನೆಂಬುವನೆ ||
ಕುಂಡಲಿ ತುದಿಯೊಳಿದ್ದಾನೆ–ಶ್ರೀ ಪು–
ರಂದರವಿಠಲನು ಪಾಲಿಸುತಾನೆ || ೩ ||

೮೬

ಉಗಾಭೋಗ

[೨]ಸಂತತಿಯಪ್ಪುದು ರಾಮಾಯಣವ ಕೇಳಲು |
ಸಕಲ ಪಾಪಹರವು ಭಾರತ ಕೇಳಲು |
ತಂತುಮಾತ್ರವೆ ವಿಷ್ಣು ಪುರಾಣವ ಕೇಳಲು |
ತತ್ತ್ವವಿವೇಕವು ಬಾಹೋದು |
ಅಂತರವರಿತು ಭಾಗವತ ಕೇಳಲು |
ಆಹೋದ್ದೈ ಜ್ಞಾನಭಕ್ತಿವೈರಾಗ್ಯವು |
ಸಂತತ ಪುರಂದರ ವಿಠಲನ ಸಂಕೀರ್ತನೆ ಮಾಡಲು |
ಸಕಲವುಬಾಹೋದು ಸಾಯುಜ್ಯ || ೧ ||

---

೧ ತ ಪ್ರತಿಯಿಂದ ತೆಗೆದುಕೊಂಡಿದೆ

೨ ಝು (ಟ) ಪ್ರತಿಯಿಂದ ತೆಗೆದುಕೊಂಡಿದೆ

# ೪. ಪುರಾಣಕಥಾಸಂದರ್ಭ

೮೭

ರಾಗ – ಪುಷ್ಯಮಾವತಿ    ತಾಳ – ರೂಪಕ

[1]ಜಲದ ನೀಲ ಗಾತ್ರ ಏತರ ಚೆಲುವ ರುಕ್ಮಿಣಿ ।
ಬಿಳಿಯು ಜಡೆಯು ಮೈಯು ಜೋಗಿಗೊಲಿದ ಪಾರ್ವತಿ ॥ ಪ ॥

ಉದಕದೊಳಗೆ ವಾಸವೇಕೆ ಸದನವಿಲ್ಲವೆ ।
ಸುದತಿ ಸುಡುವ ಕಾಡಿಗಿಂತ ಲೇಸು ಅಲ್ಲವೆ ॥ ೧ ॥

ಶೃಂಗಿಯು ಬೆನ್ನಿಲೆತ್ತಿದವನ ಸೊಗಸು ನೋಡಿದೆ ।
ಗಂಗೆಯು ಶಿರದಿ ಪೊತ್ತವನ ಗರುವ ಕೇಳಿದೆ ॥ ೨ ॥

ವಸುಧೆ ನೆಗಹಿ ಬೇರ ಮೆಲುವ ಅಶನವಿಲ್ಲವೆ ।
ಹಸಿದು ವಿಷವ ಕುಡಿದ ಎಂತು ಸ್ವಾದವಲ್ಲವೆ ॥ ೩ ॥

ಕರುಳ ಕೊರಳಸರವು ಏಕೆ ಸರವು ದೊರಕದೆ ।
ಕೊರಳರುಂಡಮಾಲೆ ಏಕೆ ಕಾಂಚನವಿಲ್ಲವೆ ॥ ೪ ॥

ಧರಣಿ ಮೂರಡಿ ಬೇಡಲಿಕ್ಕೆ ದೊರೆಯು ಅಲ್ಲವೆ
ನರಕಪಾಲ ಪಿಡಿವ ಜಗದ ಕರ್ತೃವಲ್ಲವೆ ॥ ೫ ॥

ಮಾತೆಶಿರವ ಅಳಿದವನ ಮಾತ ಕೇಳಿದೆಯಾ ।
ತಾತನಾಣೆ ಸುತನ ಕೊಂದ ನೀತಿ ನೋಡಿದೆಯಾ ॥ ೬ ॥

ಕೋತಿಗಳನು ಕೂಡಲಿಕ್ಕೆ ಜಾತಿ ತನ್ನದೆ ।
ಭೂತಗಣಗಳಾಳುವುದಕೆ ಭೀತಿಯಿಲ್ಲವೆ ॥ ೭ ॥

---

[1] ಅ (ಬಿಡಿ ೪) ಪ್ರತಿಯಿಂದ ತೆಗೆದುಕೊಂಡಿದೆ.

ವಿ. ಸೂ.— ಈ ಹಾಡಿನಲ್ಲಿರಬೇಕಾದ ಕೃಷ್ಣಾವತಾರ ಸೂಚಕವಾದ ನುಡಿಯು ಮೂಲಪ್ರತಿಯಲ್ಲಿಲ್ಲ.

ಹತ್ತಿರಿದ್ದ ವಾಜಿ ಬಿಟ್ಟು ಹದ್ದನೇರ್ವರೆ ।
ಎತ್ತಿನ ಬೆನ್ನನೇರಿದವರು ಉತ್ತಮರಾಹರೆ । ॥ ೮ ॥

ಸುತ್ತಲಿದ್ದ ಬಾಲೆಯರೊಳು ಬತ್ತಲಿರುವರೆ ।
.... .... .... ....ಶಾಪಹತ್ತಲಿಲ್ಲವೆ ॥ ೯ ॥

ಹರಿಹರರೊಳು ಭೇದವೇನು ಹೇಳೆ ರುಕ್ಮಿಣಿ ।
ಪುರಂದರವಿಠಲತಾನೆ ಬಲ್ಲ ಕೇಳೆ ಪಾರ್ವತಿ ॥ ೧೦ ॥

## ೮೮

### ಸುಳಾದಿ

#### ಧ್ರುವತಾಳ

[೧]ಶಿವನೆ ದುರ್ವಾಸ ಕಾಣಿರೊ ಶಿವನೆ ಶುಕಯೋಗಿ ಕಾಣಿರೊ ।
ಶಿವನೆ ಅಶ್ವತ್ಥಾಮ ಕಾಣಿರೊ ।
ಶಿವಗುತ್ಪತ್ತಿಯಿಲ್ಲ ಎಂಬರನೆನೆಂಬೆನಯ್ಯ ।
ಶಿವನಾದಿಯಲ್ಲಿ ಬೊಮ್ಮನ ಸುತ ।
ಬೊಮ್ಮನಾದಿಯಲಿ ಅಚ್ಯುತನ ಸುತ ।
ಪುರಂದರವಿಠಲನೊಬ್ಬನೆ ಅಜಾತನಾಗಿಯೂ ಜಾತನಾಗಿ
ಇರುತಿಪ್ಪ ॥ ೧ ॥

#### ಮಟ್ಟತಾಳ

ಹರಿಶಂಕರರೊಳಗೆ ಉತ್ತಮರಾರೆಂದು ।
ಪರೀಕ್ಷಿಸಬೇಕೆಂದು ಆದಿಯ ಯುಗದಲ್ಲಿ ।
ಸರಸಿಜಸಂಭವ ಸುರಪತಿಯಾದಿ ಸುರರು ।
ಸಾರಂಗ ಪಿನಾಕಿಗಳಿಂದೆಚ್ಚಾಡಿರೆನಲು ।
ಹರಿ ಸಾರಂಗವನೆತ್ತಿದ ಏರಿಸಿದ ಶಂ-
ಕರ ನಿಶ್ಚೇಷ್ಟಿತನಾಗಿದ್ದ ಕಾಣಿರೊ ।
ಹರಿಯಾಡಿಸಲಾಡುವರಜಭವಾದಿಗಳು
ಸಿರಿಪುರಂದರವಿಠಲನೆ ಸರ್ವೋತ್ತಮ ಕಾಣಿರೋ ॥ ೨ ॥

---

೧ ಜ ೨ ಇ (ಮುದ್ರಿತ) ಪ್ರತಿಗಳಿಂದ ಆರಿಸಿಕೊಂಡಿದೆ

ರೂಪಕತಾಳ

ಜನಕನ ಮನೆಯಲ್ಲಿ ಮುರಿಸಿಕೊಂಡ ಬಿಲ್ಲು |
ಶಿವನ ಬಿಲ್ಲೆಂದರಿಯಿರೊ ಹರನ ಬಿಲ್ಲೆಂದರಿಯಿರೊ |
ಸುರಾಸುರರ ಭಂಗ ಬಡಿಸಿ ಬಿದ್ದ ಬಿಲ್ಲು |
ಸಿರಿ ಪುರಂದರವಿಠಲ ಶ್ರೀರಾಮ ಮುರಿದ ಬಿಲ್ಲು || ೩ ||

ಅಟತಾಳ

ಬಾಣಾಸುರನ ಭಕುತಿಗೊಲಿದು ಬಂದು |
ಅವನ ಬಾಗಿಲ ಕಾಯ್ದುದಿಲ್ಲವೆ ಶಿವನು |
ಬಾಹುಸಹಸ್ರವ ಕಡಿಯುವಾಗ |
ಬೇಕುಬೇಡೊಂದೊಮ್ಮೆ ಎಂದನೆ ಶಿವನು |
ಪುರಂದರವಿಠಲ ಪರದೈವವೆಂದರಿತ ಕಾರಣ |
ಒಪ್ಪಿಸಿಯೇಕೊಟ್ಟಾ ಶಿವನು || ೪ ||

ತ್ರಿವುಡ ತಾಳ

ವಿಷ್ಣು ಸಹಸ್ರ ನಾಮಗಳ ಶಿವಜಪಿಸಿ
ಉಪದೇಶಿಸುವ ಗೌರಿಗೆ |
ವಿಷ್ಣು ಸಹಸ್ರನಾಮಗಳ ಸಮ
ರಾಮರಾಮೆಂದು ಭಕ್ತಿಭರದಲಿ |
ವಿಷ್ಣು ಪುರಂದರವಿಠ್ಠಲರಾಯನ
ಅತ್ಯಧಿಕ ಪ್ರಿಯನು ಉಮೇಶನು || ೫ ||

ಝಂಪೆ ತಾಳ

ರಾಮ ವಿಶ್ವರೂಪವ ಕಂಡು ಶಂಕರ |
ರಾಮನೇ ಪರದೈವ ರಾಮನೇ ಪರದೈವ |
ರಾಮನೆ ಎಂದು ಸ್ತುತಿಸಿದ ಕಾರಣ |
ರಾಮನೇ ಪರದೈವ ರಾಮಚಂದ್ರ ಸಿರಿಪುರಂದರವಿಠ್ಠಲ || ೬ ||

ಏಕತಾಳ

ಮಣಿಕರ್ಣಿಕೆ ತೀರಥದಲ್ಲಿ
[illegible] ಉಪದೇಶಿಸುವ |

ತಾರಕ ಬ್ರಹ್ಮಸ್ವರೂಪ
ಆ ರಾಮನೆ ಕಾಣಿರೊ ।
ರಾಮನಾಮ ಮಂತ್ರವ ಪುರಂದರವಿಠಲರಾಯಗೆ ।
ಬಲ್ಲರಿಯ ಸದಾಶಿವ || ೭ ||

ಜತೆ

ಜಗಕೆ ಶ್ರೀಅಜಭವಾದಿಗಳು ಗುರುಗಳು ।
ಜಗಕೆ ಶ್ರೀ ಪುರಂದರವಿಠಲನೆ ದೈವ ||

೮೯

ಸುಳಾದಿ :

ಧ್ರುವತಾಳ

[1]ಸಂತತ ಹನ್ನೆರಡು ಕೋಟಿ ಸುವರ್ಣಪುಷ್ಪ ಸಮರ್ಪಿಸಲು ।
ಅಂತಾಫಲದಿ ಕೋಟಿ ಕೋಟಿಗುಣಿತ ತುಳಸೀದಳಕೆ ।
ತಂತುಮಾತ್ರ ಭಕ್ತಿಯಲಿ ತವಕದಿ ಪೂಜಿಸು ಶ್ರೀ-
ಮಂತ ಶ್ರೀಪುರಂದರವಿಠಲ ವೈಕುಂಠವನೀವ || ೧ ||

ಮಟ್ಟತಾಳ

ಆದಿವಾರದಿ ಸಂಜೆಯಲಿ ರಾತ್ರಿಯಲಿ ।
ಅಂಗಾರಕ ಶುಕ್ರವಾರದಲ್ಲಿ ।
ಆದಿತ್ಯಸೋಮಗ್ರಹಣ ಅಮಾವಾಸ್ಯೆಹುಣ್ಣಿಮೆ ।
ದ್ವಾದಶಿಯಲಿ ಸಾದರಾರ್ಚಿತ ಜಯಂತಿಗಳಲಿ ।
ವೈಧೃತಿ ವ್ಯತಿಪಾತಸಂಕ್ರಾಂತಿಗಳಲಿ ಶ್ರೀಪು-
ರಂದರವಿಠಲಮುನಿವ ಶ್ರೀತುಲಸಿಯ ತೆಗೆದರೆ || ೨ ||

ತ್ರಿಪುಟ ತಾಳ

ಸಾರಂಗಧರನಿಗೆ ಸಂವತ್ಸರದ ತುಳಸಿ ।
ಆರುತಿಂಗಳಬಿಲ್ವ ಆಹೋದು ಅಚ್ಯುತನರ್ಚನೆಗೆ ।

---

೧ [illegible] (ಮುದ್ರಿತ) ಪ್ರತಿಗಳಿಂದ ತೆಗೆದುಕೊಂಡಿದೆ

ಕಾರುಣ್ಯ ಮೂರುತಿಗೆ ಕಮಲ ಏಳುದಿನವಹುದು ।
ಪುರಂದರವಿಟ್ಠಲನಿಗೆ ದಿನದಿನದಿ ಕಣಗಿಲ ಆಹೋದು ಸತತ ॥ ೩ ॥

ಅಟತಾಳ

ಇಲ್ಲದಿದ್ದರೆ ಚಿಗುರು ತುಳಸಿ ಅದು ।
ಇಲ್ಲದಿದ್ದರೆ ಮುಗುಳು ತೆನೆಯು ಅದು ।
ಇಲ್ಲದಿದ್ದರೆ ತುಳಸಿ ಎಲೆಯು ಅದು ।
ಇಲ್ಲದಿದ್ದರೆ ಒಣಗಿಹ ಕಾಷ್ಟ ಆದು ।
ಇಲ್ಲದಿದ್ದರೆ ತುಳಸಿಯ ಬುಡದ ಮಣ್ಣು ಅದು ।
ಇಲ್ಲದಿದ್ದರೆ ತುಳಸಿತುಳಸಿ ಎಂದು ಕೂಗಿದರೆ ।
ನಮ್ಮ ಪುರಂದರ ವಿಠಲ ಒಲಿವ ಕಾಣಿರೊ ॥ ೪ ॥

ಝಂಪೆತಾಳ

ಶ್ರೀರಮಣನು ತನ್ನ ಶ್ರೀಯನ್ನೆ ಕೂಡಿ ।
ಶ್ರೀವತ್ಸ ಕೌಸ್ತುಭಮಾಲೆ ವೈಜಯಂತಿಹಾರ-ಏ-
ಕಾವಳಿಯನು ಒಲ್ಲೆ ತುಳಸಿ ಎನ್ನವಳೆಂದ ಪುರಂದರವಿಠಲ ॥ ೫ ॥

ಆದಿತಾಳ

ಒಂದೇಒಂದು ಬೆರಳಜಪ ಒಂದೇ ಐದುಗೆರೆಯ ಜಪ ।
ಒಂದೇಹತ್ತು ಪುತ್ರಜೀವಿಮಣಿಯ ಜಪ ।
ಒಂದೇ ನೂರು ಶಂಖಮಣಿಯ ಜಪ ।
ಒಂದೇ ಸಾವಿರ ಹವಳದ ಜಪ ।
ಒಂದೇ ಹತ್ತು ಸಾವಿರ ಮುತ್ತಿನ ಮಣಿಯ ಜಪ ।
ಒಂದೇ ಹತ್ತು ಲಕ್ಷ ಸುವರ್ಣ ಮಣಿಯ ಜಪ ।
ಒಂದು ಕೋಟಿ ದರ್ಭೆ ಬೆಟ್ಟನ ಜಪ ।
ಒಂದೇ ಅನಂತ ಶ್ರೀತುಲಸೀಮಣಿಯ ಜಪ ।
ವೆಂದು ಪುರಂದರವಿಟ್ಠಲಪೇಳ್ದ ॥ ೫ ॥

ಜತೆ

ಸ್ನಾನದಾನಕೆ ತುಳಸಿ ಪ್ರಯೋಜನ ತುಳಸಿ
ಪುರಂದರವಿಠಲಗೆ ಅತಿಪ್ರಿಯ ತುಳಸಿ ॥

೯೦

ಸುಳಾದಿ

ಧ್ರುವತಾಳ

[1]ಹೆಜ್ಜೆಗೆಹೆಜ್ಜೆಗೆ ಸಾವಿರ ಸಾವಿರ ಹೊನ್ನೀವರಾಯ ರಾವುತರಾಯ ।
ಹೆಜ್ಜೆಗೆಹೆಜ್ಜೆಗೆ ಪರಸಮಯವ ಮೆಟ್ಟಿನಡೆವ ರಾವುತ ರಾಯ ।
ಹೆಜ್ಜೆಗೆಹೆಜ್ಜೆಗೆ ಸೂಳೆಯರುಡಿಮುಡಿ ಮೊಲೆ ನೋಡಿ ।
ನಲಿದೋಡುವ ಹಾರುವರ ಪರಿಹಾಸಕ್ಕೆ ನಗುವ ವಿನೋದಿ ರಾಯ
ರಾವುತರಾಯ ।
ಹೆಜ್ಜೆಗೆಹೆಜ್ಜೆಗೆ ಕಡೆಯಾ ಹೆಣ್ಣ ಗಂಡ ಮಾಡುವರಾಯ ರಾವುತರಾಯ ।
ಹೆಜ್ಜೆಗೆಹೆಜ್ಜೆಗೆ ತಾಳಮೇಳಕೆ ತಲೆದೂಗುವ ರಾಯ ರಾವುತರಾಯ ।
ಹೆಜ್ಜೆಗೆಹೆಜ್ಜೆಗೆ ಮಾಲಕುಮಿಯ ಕುರುಳ ಆಳಿಕುಂತಳ ಮಾತಿದ್ದುವ
ಕಂಚಿಯವರದರಾಜ ।
ಪುರಂದರವಿಟ್ಠಲರಾಯ ರಾವುತರಾಯ ॥ ೧ ॥

ಮಟ್ಟತಾಳ

ರಾಯರಾವುತನೆಂಬೀಬಿರುದ ತಡೆಯಬಂದ ।
ರಾಯಜೀಯಗಳನೆಲ್ಲ ಬೀಳುಕೊಳ್ಳುತ್ತಿರೆ ।
ರಾಜಜೀಯರು ಎಲ್ಲ ಜಯ ಜಯವೆನ್ನುತಿರೆ ।
ರಾಯರಾಯನೆ ಹಯರೇವಂತರಾಯ ।
ಹಯವೇರಿ ಬೀದಿಬೀದಿಯಲ್ಲಿ ರಾಯರಾಯರನೂಕಿಹಾಕಿ
ಮೆರೆದೆ ರಾಯ ।
ರಾಯ ವರದರಾಜ ಪುರಂದರವಿಟ್ಠಲರಾಯ ರಾವುತನೆಂಬ
ಬಿರುದು ಸಲ್ಲಿಸಿದೆ ॥ ೨ ॥

(ಜಾವಡಿ ತಾಳ) – ರೂಪಕ ತಾಳ

ನಾನಾದೇವತೆಗಳೆಲ್ಲರು ನಾನಾನಾಮಗಳಿಂದ ।
ನೀನೇ ಕೃತುಮಯನೆಂದು ನೀನೇ ಕರ್ತೃಭೋಕ್ತೃಯೆಂದು ।
ವಾಣೀಪತಿ-ಪಿತ ಏನು ಘನವೊ ವರದರಾಜ ।
ನೀನೇ ಪುರಂದರವಿಟ್ಠಲ ॥ ೩ ॥

---

೧ [illegible]

ಅಟತಾಳ

ಪುಣ್ಯಕೋಟಿ ಆವಕ್ಷೇತುರ ಅದಾವುದು ।
ಪುಣ್ಯಕೋಟಿ ಆವತೀರಥ ಆದಾವುದು ।
ಪುಣ್ಯಕೋಟಿ ನಮ್ಮ ಹರಿಯುಲ್ಲದೆ ।
ಪುಣ್ಯಕೋಟಿ ಆವದೇವರು ಆದಾರು ।
ಪುಣ್ಯಕೋಟಿ ಕಂಚಿವರದರಾಜ ।
ಪುಣ್ಯಕೋಟಿ ನಮ್ಮ ಪುರಂದರವಿಠಲ ॥ ೪ ॥

ಏಕತಾಳ

ಹಸ್ತಿಗಿರೀಶನೆ ಶಂಖಚಕ್ರ ।
ಹಸ್ತನೆ ಗದೆಯು ಭಯು ।
ಹಸ್ತ ಉತ್ತರದೇರಿಯು ಆವರಿಸಿದವನೆ ।
ಚಿತ್ತಜಾನಂದದ ಪುತ್ಥಳಿಯೆ ।
ರತ್ನಮುಕುಟ ಕುಂಡಲಧರ ।
ಕೌಸ್ತುಭ ಪೀತಾಂಬರಧರನೆ ।
ವಸ್ತು ವರದರಾಜ ಪುರಂದರವಿಟ್ಠಲ ।
ಈತನ ನಂಬಿ ಬದುಕಿರೊ ॥ ೫ ॥

ಜತೆ

ಆರನಾಸರಿಸ ಆರನಾವರಿಸ ಕಂಚಿಯು ।
ವರದರಾಜ ಪುರಂದರವಿಟ್ಠಲ ॥

೯೧

ಸುಳಾದಿ

ಧ್ರುವತಾಳ

[೧]ಅಯ್ಯಯ್ಯ ! ಕೈಕೆ ಮುನಿದರೆ ಏನವ್ವ ! ।
ದೀವೌಕಸರನಾಳುವ ನಿನ್ನ ಅದ್ವೈತತನವು ।

---

೧ ಇ (ಮುದ್ರಿತ) ಏ (ಮುದ್ರಿತ ಸುಳಾದಿ) ಇವುಗಳಲ್ಲಿಯಷ್ಟೇ ಸಿಕ್ಕಿದೆ.
ಏ. ಸೂ–ಇದರಲ್ಲಿ ಒಂದೆರಡುಕಡೆಗೆ ಅರ್ಥವು ಸ್ಪಷ್ಟವಾಗುವುದಿಲ್ಲ.

ಅಚಿಂತ್ಯಶಕ್ತಿ ಹೋಹುದೆ ಪ್ರಭುವೆ ।
ಅಯ್ಯ ಮಂಥರೆ ಜರಿದರೆ ಪಂತಿದೇರನಾಳುವ ।
ನಿನ್ನ ಲೋಕತಿಂತಿಣಿಯು ಗೆಲುವ ಶೀಲಬಹುದೆ ।
ವಿಭುವೆ, ಅಯ್ಯ ತಂದೆಯಿಲ್ಲದಿರೆ ।
ತರುಲತೆಗೆ ಪಶುಪಕ್ಷಿಗೆ ಚೇತನವೃಂದಕೆ ।
ಮುಕುತಿಯನಿತ್ತ ಮಹಿಮೆ ಹೋಹುದೆ ಅಯ್ಯ ।
ಆರುಮುನಿದರೆ ಆರುಜರೆದರೆ ಆರೊಲ್ಲದಿದ್ದರೆ ।
ಹೀನವುಂಟೆ ? ತಾರಕಬ್ರಹ್ಮದ್ವಿರೂಪನೆ ನಿನಗೆ ಅಯ್ಯ ।
ಜಾನಕಿವಲ್ಲಭ ಲಕ್ಷ್ಮಣಾಗ್ರಜ ಹನುಮನನಾಳ್ದ ।
ರಾಮರಾಯ ಪುರಂದರವಿಠಲ ಅಯ್ಯ ॥ ೧ ॥

ಮಟ್ಟತಾಳ

ತುಂಗವಕ್ಷ ತುರೀಯ ಮೂರುತಿಯ ।
ರಥಾಂಗಪಾಣಿಯ ತಂಗಿ, ತಾರೆ ।
ಪರಮಪುರುಷ ಹರಿಯ ತರಣಿತೇಜನ ।
ಅಂಗನೆಯುರ ಮನವ ಸೂರೆಗೊಂಬನ ತಂಗಿ, ತಾರೆ ।
ತರಣಿತೇಜನ ತಂಗಲೇಕೆ ತಗರಲೇಕೆ ।
ಸಾರಂಗದಾಮನೊಲೆದಿರನದೇಕೆ ತಂಗಿ ತಾರೆ, ತರಣಿತೇಜನ ।
ರಂಗೇಶ ಪುರಂದರವಿಟ್ಠಲನ ಮಂಗಳಾಂಗ ।
ಒಲೆದಿರನದೇಕೆ ತಂಗಿ, ತಾರೆ, ತರಣಿತೇಜನ ॥ ೨ ॥

ರೂಪಕತಾಳ

ಅರಿದನೊಬ್ಬ ನಾಸಿಕವ ನಿನ್ನನುಜೆಯ ।
ಪುರವನುರುಪಿ ದಾನವರ ಗೆದ್ದನೊಬ್ಬ ।
ಶರನಿಧಿಯ ದಾಂಟಿದನೊಬ್ಬ ।
ಸಿರಿಮುಡಿಯ ಮುಕುಟವ ಕಿತ್ತಿಟ್ಟನೊಬ್ಬ ।
ಪುರಂದರವಿಠಲರಾಯನ ತೋಟಿಬೇಡ ।
[illegible] ॥ ೩ ॥

ಆದಿತಾಳ

ರಾಮರಾಮ ಎನುತ ಅಂಬುಧಿಯ ದಾಟಿದೆ ।
ರಾಮರಾಮೆನುತ ಅಸುರರ ಗೆಲಿದೆ ।
ರಾಮರಾಮ ಎನುತ ಭೂಮಿಸುತೆಯ ಪಾದವ ಕಂಡು ।
ರಾಮರಾಮ ಎನುತ ರಾಮ ಪುರಂದರವಿಠಲನ ।
ಉಂಗುರವಿತ್ತ ರಾಮನರ್ಧಾಂಗಿ ದೇವಿ ಚಿತ್ತೈಸು ಎನುತ ॥ ೪ ॥

ಏಕತಾಳ

ರಾಮನೊಳು ಹನುಮನು ಸೇರುವನೆಂದರಿಯಿರೊ ।
ರಾಮನಿಂದ ಹತವಾಯ್ತು ರಾವಣನ ಕಟಕವೆಂದರಿಯಿರೊ ।
ರಾಮನಪ್ರಸಾದದ ದೊರೆಗಳ ಕೆಣಕದಿರಿರೊ ।
ರಾಮಬಾಣಕಿದಿರಾಗದಿರಿರೊ, ದನುಜರೆಲ್ಲ ।
ರಾಮ ನಿಮ್ಮ ರಾವಣನ ಶಿರವ ಚೆಂಡಾಡುವನು ।
ರಾಮ ಪುರಂದರ ವಿಠಲನ ಪೊಂದಿಬದುಕಿರೊ ॥ ೫ ॥

ಜತೆ

ಸಹಸ್ರನಾಮ ಸಮರಾಮನಾಮ ।
ಮಹಾಮಹಿಮೆಯ ಪುರಂದರವಿಠಲರಾಮ ।

೯೨

ರಾಗ - ಕಲ್ಯಾಣಿ ತಾಳ - ಝಂಪೆ

ಏನೆಂದಳಯ್ಯ ಸೀತೆ ।
ನಿನಗೇನ ಮಾಡಿದಳೊ ಪ್ರೀತೆ ॥ ಪ ॥
ದಾನವನಪುರದೊಳಗೆ ದಾರಿಯನು ನೋಡುತಲೆ ।
ಧ್ಯಾನವನು ಮಾಡುತಿಹಳೊ ಹನುಮಾ ॥ ಅ ಪ ॥

ಎಲ್ಲಿಂದ ಬಂದೆ ಹನುಮಾ–ನೀಯೆನ್ನ–
ಕೇಳುಸೊಲ್ಲೆನ್ನಪ್ರೇಮ ॥
ವಲ್ಲಭನ ನೆನೆದರೆ ನಿಮಿಷಯುಗವಾಗುತಿದೆ ।
ಇಲ್ಲಿಗಾರನು ಬಂದೆಯೊ ಹನುಮಾ ॥ ೧ ॥

ದೇವರಾಯನ ಪಾದವ—ಎಲೆ ಕಪಿಯೆ—
ದಾವಪರಿಯಲಿ ಕಾಂಬೆನೊ ॥
ರಾವಣನ ಶಿರವರಿದು ಲಂಕಪಟ್ಟಣವನೆಲ್ಲ ।
ಹವನವಮಾಡಿಸು ಎಂದಳೊ ಹನುಮಾ ॥ ॥ ೨ ॥

ಅಂಜನಾತನಯ ಕೇಳೊ—ನೀ ಹೋಗಿ—
ಕಂಜನಾಭನಿಗೆ ಪೇಳೊ ॥
ಕುಂಜರವಕಾಯ್ದ ಶ್ರೀಪುರಂದರವಿಠಲನ ।
ಪಂಜರದಗಿಣಿಯೆಂದಳೊ ಹನುಮಾ ॥ ೩ ॥

---

೧ ಕ. ವಿ. ವಿ. ತಾಳೆಓಲೆ (ಸಂ. ೧೮೫೮-೧೭೫೦) ಯಿಂದ ತೆಗೆದುಕೊಂಡಿದೆ.

ಅ (ಬಿಡಿ ೨)— ಕೆಳಗಿನ ಎರಡು ನುಡಿಗಳಿವೆ :

ಚಿಂತೆಯುಲಿ ಬಡವಾದಳೊ—ಜಾನಕಿಯು—
ಕಾಂತೆಯುಲಿ ಹೇಗೆ ಇಹಳೊ ॥
ಕಾಂತರಂಗದಲಿ ಅನಂತಾನಂತನೆನುತಲಿ ।
ಭ್ರಾಂತಿಯುಲಿ ಮರುಗುತಿಹಳೊ—ರಾಮಾ— ॥ ೧ ॥

ಚೆನ್ನಾರಚೆಲುವ ಕೇಳೊ--ಶ್ರೀದೇವಿ—
ನಿನ್ನ ಬಿಟ್ಟಿರಲಾರಳೊ ॥
ನಿನ್ನಿನಿರುಳೊಳೆ ನೀಲಕುಂತಳೆ ಕನಸಿನಲಿ ।
ನಿನ್ನನೆ ಕಂಡನಂತೆ ರಾಮಾ ॥ ೨ ॥

ವಿ. ಸೂ. ರಾಮಾಯಣಕ್ಕೆ ಸಂಬಂಧಿಸಿದ ಈ ಹಾಡು ಅಲ್ಲದೆ— "ಏನಯ್ಯ ರಾವಣ ಸೀನಯ್ಯ ಸೀತೆಯ ॥ ಎಂಬ ಹಾಡೂ; "ಏಳೇಳು ಶರಧಿಯು ಏಕವಾಗಿದೆ ಕಾಣೊ । ಹ್ಯಾಗಿಲ್ಲಿ ಬಂದೆಯೊ ಕೋತಿ" ಎಂಬ ಹಾಡೂ ಇದೆ. ಈ ಹಾಡುಗಳಲ್ಲಿಯ ನಾಟಕೀಯ ರೀತಿಯನ್ನು ನೋಡಿದರೆ ಪುರಂದರದಾಸರು ರಾಮಾಯಣದ ಕಥೆಗೆ ಸಂಬಂಧಿಸಿದ ಒಂದು ಗೀತಕಾವ್ಯವನ್ನು ರಚಿಸಿರಬಹುದೆಂದು ಊಹಿಸಬಹುದು.

# ೫. ಭಾವಸಮಸ್ಯೆಗಳು

೯೩

ರಾಗ - ನಾದನಾಮಕ್ರಿಯೆ   ತಾಳ - ಛಾಪು

[1]ಸುಲಭವಲ್ಲವೊ ಮಹಾನಂದ–ತ–
ನ್ನೊಳಗೆ ತಿಳಿಯಬೇಕು ಗುರುದಯದಿಂದ || ಪ ||

ಚಿಕ್ಕನು ಇಲಿ ನುಂಗುವನಕ–ಕಡು–
ರಕ್ಕಸಿಯನು ಕಂಡು ಗಿಣಿನುಂಗುವನಕ ||
ಮಕ್ಕಳ ಭಕ್ಷಿಸುವನಕ-ಮದ-
ಸೊಕ್ಕಿದ ಗಜವನು ನರಿ ನುಂಗುವನಕ || ೧ ||

ಇಬ್ಬರೊಡನೆ ಕೂಡುವನಕ–ಮೂರು–
ಹಬ್ಬಿದ ಬೆಟ್ಟವ ನೊಣನುಂಗುವನಕ ||
ಒಬ್ಬರೊಡನೆ ಸೇರುವನಕ-ಕೆಟ್ಟ-
ಗುಬ್ಬಿಯು ರಾಜಹಂಸವು ನುಂಗುವನಕ || ೨ ||

ಒಳಹೊರಗೊಂದಾಗುವನಕ–ತಾನು–
ತಿಳಿದೆನೆಂಬ ಭಾವಬಯಲಾಗುವನಕ ||
ಬೆಳಕನೊಳಗೆ ಕಾಣುವನಕ-ನಮ್ಮ-
ಚೆಲುವ ಪುರಂದರವಿಠಲನದಯವಾಗುವನಕ || ೩ ||

೯೪

ರಾಗ-ಶಂಕರಾಭರಣ   ತಾಳ-ಆದಿ

[2]ಬಲ್ಲವನಾದರೆ ಈ ತಳ್ಳಿಬೇಡ |
ಅಲ್ಲದಪಥ ಇದರಾಶೆಯಬಿಡು ನೀನು || ಪ ||

---

೧ ಆ (II) ಪ್ರತಿಯಿಂದ ತೆಗೆದುಕೊಂಡಿದೆ.

೨ [illegible]

ಸರ್ಪನ ಪಣೆಯೊಳು ಜೇನುತುಪ್ಪವಕಂಡು ।
ಅಪ್ಪನೆ ತಾರೆಂದು ಅಳುತಿರಲು ॥
ತುಪ್ಪದ ಸವಿಯನು ಜನರುಂಡುತೀರಲು ।
ಮುಪ್ಪಾಗಿ ಇರುವುದ ಕಂಡು ಮೂದಲಿಸುವ ॥ ೧ ॥

ನಂಬಿದ ಮನುಜರ ಹಂಬಲಮರೆವುದು ।
ಡೊಂಬಿಯುವರು ಕಂಡು ತಡೆಯಲಾಗಿ ॥
ಕುಂಭದ ರೊಕ್ಕದ ಲಂಚವನಿತ್ತಲ್ಲಿ ।
ಅಂಬರವನು ಕಂಡು ನಗುತಿಪ್ಪ ಮನುಜನ ॥ ೨ ॥

ಅಂಬರವಡಗಿಯೆ ಕುಂಭಿನಿಜಾರಿಯೆ ।
ನಂಬಿದ ಮನುಜರು ನಡೆವಡೆಯೆ ॥
ಕುಂಭದ ನೀರನು ಚೆಲ್ಲುತಮಗುಳಲ್ಲಿ ।
ಕಂಬದ ಹಾಗೆಯೆ ನಿಂತಿಹಜನರನು ॥ ೩ ॥

ಇಟ್ಟಿಹ ಬಾಗಿಲ ಕಾಣದೆ ತಾ ಬಂದು ।
ಹೊಟ್ಟೆಯು ಬಗಿದಲ್ಲಿ ಹೊರವಂಟವೇಳೆ ॥
ಕಟ್ಟಿದ್ದು ಕರಗಿಯೆ ಸೆಟ್ಟಲೆ ಒಣಗಿಯೆ ।
ದುಷ್ಟನೊಬ್ಬನು ಬಂದುನಿಂತಿಹನು ॥ ೪ ॥

ಕಡಹದ ಪಲ್ಲಕ್ಕಿ ಬೆಡಗನು ಕಾಣುತ ।
ಆಡವಿಯ ಮೃಗಬಂದು ಕುಳಿತಿರ್ದುದ ॥
ಒಡನೆ ಕಟ್ಟದ ವಾಹಕರುಹದಿನಾರುಮಂದಿ ।
ಕಡಮೆಯ ಸಂಬಳ ತಡವಿಡುವವರನು ॥ ೫ ॥

ಅಕ್ಕಿಯ ರಾಶಿಯು ತೀರಲು ಕೊಳಗವು ।
ಬೆಕ್ಕಸಬೆರಗಾಗಿ ಕುಳಿತಿಪ್ಪುದು ॥
ಬಿಕ್ಕಿದ ಅಕ್ಕಿದ ಹಕ್ಕಿಯು ಹಕ್ಕಿಯೆ ।
ದಕ್ಕನೆ ಹಾರುವ ಪಕ್ಕಿಯು ನೋಡುತ ॥ ೬ ॥

ಇರುತಿರೆ ಗಣಿತದಿ ರವಿಶಶಿ ಒಂದಾಗಿ ।
ಧರೆಯೊಳು ಸಾವಿರ ಎಲೆಬೀಳ್ವುದು ॥
ಎರವಿನಾಭರಣವ ಆವರವರೊಯ್ಯಲು ।
ಪುರಂದರವಿಠಲನ ಮೊರೆಬೀಳು ಕಂಡೆಯ ॥ ೭ ॥

೯೫

ರಾಗ-ಮೋಹನ ತಾಳ-ಛಾಪು

[1]ಬಯಲಬಾವಿಯು ನೀರಿಗೆ ಬಂದಳೊಬ್ಬಳು ಬಾಲೆ ।
ಬಾಯಾರಿಬಿದ್ದಳು ಕೊಡವೊಡೆಯಿತು ನೀರುರುಳಿತು ॥ ಪ ॥
ನೀರಿಲ್ಲದೆ ನೆರಳಿಲ್ಲದೆ ಬೇರಿಲ್ಲದೆ ಸಸಿಹುಟ್ಟಿ ।
ಹೂವಿಲ್ಲದೆ ಕಾಯಿಲ್ಲದೆ ಅದು ಫಲಕೆ ಬಂದು ॥
ಕರವಿಲ್ಲದೆ ಕಾಲಿಲ್ಲದೆ ಕೊಯ್ವರಯ್ವರು ಆ ಹಣ್ಣನು ।
ಮರುಳಾಯಿತು ಮೂವತ್ತು ಸಾವಿರಮಂದಿ ॥ ೧ ॥

ಕುರುಡ ಕಂಡನು ಸರ್ಪಸಡುವಿರುಳು ಬಾಹುದನು ।
ಮೂಕ ಕಂಡನು ಕನಸ ಕಿವುಡನು ಕೇಳಿದ ॥
ಇರವು ಹಾರಿತು ಗಗನಕೆ ಮರವು ಮುರಿಯಿತು ನೋಡಿ ।
ವಿಧಿ ತನ್ನ ಬೇಟೆಗೆ ಹೋಗುವ ಸಡಗರ ನೋಡಿ ॥ ೨ ॥

ರೆಚ್ಚಿನ ಕೊಡದವಳೆ ನೀ ಬಂದೆ ತೋರಣಗಟ್ಟಿ ।
ರಚ್ಚೆಗೆ ಬಾಹೋರು ನಾಲುವರೊಳಗೆ ॥
ಉಚ್ಚರಿಸಲಾಸಲ್ಲ ಕೇಳುಪುರುಷನ ಸೊಲ್ಲ ।
ಅಚ್ಚಪುರಂದರ ವಿಠಲ ತಾನೆ ಬಲ್ಲ ॥ ೩ ॥

೯೬

ರಾಗ-ನಾದನಾಮಕ್ರಿಯೆ ತಾಳ-ಆದಿ

[2]ಪುಟ್ಟಿದವೆರಡು ಜೀವನ ।
ಬಟ್ಟಬಯಲು ಬೇಲಿಯನುಂಗುತಿದೆಕೋ ॥ ಪ ॥

---

೧ ಅ (ಬಡಿ ೫) ಪ್ರತಿಯಿಂದ ಆರಿಸಿದೆ.
೨ ಕ. ವಿ. ವಿ. ತಾಳೆಗರಿ (ಸಂ ೧೮೫೮-೧೬೭೦) ಪ್ರತಿಯಿಂದ ತೆಗೆದುಕೊಂಡಿದೆ.
ಅ (ಬ[illegible]) [illegible] ಪ್ರತಿ[illegible] ಉದ್ಧ[illegible]ದೆ.

ಆಸರ ಕಪ್ಪೆಯು ದೇಶವನುಂಗಿತಾ ।
ಕಾಶವನೊಂದು ನೊಣ ನುಂಗಿತು ॥
ದೇಶದ ಹಳ್ಳಕೆರೆಕಟ್ಟೆ ಬಾವಿಗಳನೆಲ್ಲಾ ।
ಪೋಶನ ಮಾಡಿತು ಒಂದಿರುವೆ ॥ ೧ ॥

ಹಲ್ಲಿನುಂಗಿತೊಂದು ಕಲ್ಲ ಮಡಕೆಯನು ।
ಇಲಿ ನುಂಗಿತೀರೇಳು ಭುವನವನು ॥
ಹಾಲಿದ್ದ ಕೊಡನೊಂದ ಹಸುಗೂಸು ನುಂಗಿತು ।
ಬಲ್ಲ ಮಹಾತ್ಮರು ಇದಪೇಳಿರಯ್ಯ ॥ ೨ ॥

ಕಾಷ್ಠವುನುಂಗಿತು ಗಿರಿಪರ್ವತಂಗಳ ।
ಕೃಷ್ಣನ ನುಂಗಿತು ಕಡಲೆಕಾಯಿ ಉಂ- ।
ಗುಷ್ಟದಿಂದಲೆ ಸೀಳ್ದ ಸದ್ಗುರುರಾಯ ಅ-
ದೃಷ್ಟಮೂರುತಿ ಶ್ರೀ ಪುರಂದರವಿಠಲ ॥ ೩ ॥

೯೭

ರಾಗ—ಧನ್ಯಾಸಿ ತಾಳ—ಆದಿ

[೧]ಪಿಂಡಾಂಡದೊಳಗಿನ ಗಂಡನ ಕಾಣದೆ ।
ಮುಂಡೆಯರಾದರು ಪಂಡಿತರೆಲ್ಲ ॥ ಪ ॥

ಆಧಾರಮೊದಲಾದ ಆರುಚಕ್ರವಮೀರಿ ।
ನಾದಬಿಂದು ಕಳೆಯುಳಿದ ಬಳಿಕ ॥
ಶೋಧಿಸಿ ಸುಧೆಯ ಪ್ರಸಾದವನುಣ್ಣದೆ ।
ಓದುತ ಮನದೊಳು ಬಂದನು ತಿಳಿಯದೆ ॥ ೧ ॥

ನಾದದೊಳಗೆ ಸುನಾದ ಓಂಕಾರದಿ ।
ಪದವ ಬಿತ್ತಿ ಪರಿಣಾಮಿಯಾಗದೆ ॥
ವೇದಾಂತರೂಪ ತದ್ರೂಪನಾಲಗೆಯಲಿ ।
ವಾದಿಸಿ ಮನದೊಳು ಒಂದನು ಅರಿಯದೆ ॥ ೨ ॥

---

[೧] ಮ ಪ್ರತಿಯಲ್ಲಿ ಮಾತ್ರ ಉಂಟು.

ನವನಾಳಮಧ್ಯದಿ ಪವನ ಸುತ್ತಿದ್ದ ಫಣಿ ।
ಶಿವನ ತ್ರಿಪುಟ ಸ್ಥಿತಿಸ್ಥಿರವಾಗದೆ ॥
ಭವರೋಗ ವೈದ್ಯನಧ್ಯಾನವ ಮಾಡದೆ ।
ಶವುರಿ ಶ್ರೀ ಪುರಂದರವಿಠಲನ ಸ್ಮರಿಸದೆ ॥ ೩ ॥

೯೮

ರಾಗ-ಸೌರಾಷ್ಟ್ರ ತಾಳ-ಅಟ

[1]ನಡುಮನೆಯೊಳಗೊಂದು ನಾಲ್ಕು ತೆಂಗಿನಮರ—
ಹೇಗಿಣಿ—ಹೇಗಿಣಿಯೆ ।
ಕಡೆಮೊದಲಿಲ್ಲದೆ ಅದು ಕಾತು ಹಣ್ಣಾಯ್ತು—ಹೇಗಿಣಿ ॥ ಪ ॥

ಕಾಲಿಲ್ಲದವ ಹತ್ತಿ ಕೈಯಿಲ್ಲದವ ಕೊಯ್ದ—ಹೇಗಿಣಿ ।
ತಲೆಯಿಲ್ಲದವ ಬಂದು ಹೊತ್ತುಕೊಂಡುಹೋದ—ಹೇಗಿಣಿ ॥ ೧ ॥

ಕಣ್ಣಿಲ್ಲದವ ನೋಡಿ ಕೆಂಪಿನ ಹಣ್ಣೆಂದ—ಹೇಗಿಣಿ ।
ಬಾಯಿಲ್ಲದವ ನುಂಗಿ ಬಸಿರೊಳಗಿಂಬಿಟ್ಟ—ಹೇಗಿಣಿ ॥ ೨ ॥

ಬಲೆಯು ಹಾಕಿದರು ಬಲೆಯುದಾಟುವದಯ್ಯ—ಹೇಗಿಣಿ ।
ಚೆಲುವ ಪುರಂದರವಿಟ್ಠಲನೇ ಬಲ್ಲ—ಹೇಗಿಣಿ ॥ ೩ ॥

೯೯

ರಾಗ-ಸೌರಾಷ್ಟ್ರ ತಾಳ-ಅಟ

[2]ಒಂಬತ್ತು ಬಾಗಿಲೊಳು ಒಂದು ದೀಪವ ಹಚ್ಚಿ ।
ನಂಬಿಗಿಲ್ಲದೆ ಒಗತನ ಮಾಡಿದೆನೆ ಸೂವಕ್ಕಸುವ್ವಿ ॥ ಪ ॥

ತನುವೆಂಬ ಕಲ್ಲಿಗೆ ಮನಧಾನ್ಯವನುತುಂಬಿ ।
ಒನೆದೊನೆದು ಒಬ್ಬಳೆ ಬೀಸಿದೆನೆ ॥ ೧ ॥

---

೧ ಊ ೧ (ಖ) ಪ್ರತಿಯಿಂದ ತೆಗೆದುಕೊಂಡಿದೆ.
೨ ಆ (vi) ಇ ಝ (೬) ಪ್ರತಿಗಳಿಂದ ಆರಿಸಿದೆ.

ಅಷ್ಟಮದಗಳೆಂಬ ಅಷ್ಟಧಾನ್ಯವ ತೆಗೆದು |
ಕುಟ್ಟಿ ಕುಟ್ಟಿ ಕಾಳು ಮಾಡಿದನೆ || ೨ ||

ನಷ್ಟತರ್ಕವೆಂಬ ಕಟ್ಟಿಗೆ ಉರಿದುನಾ |
ನಿಷ್ಠೆಯಿಂದನ್ನವ ಮಾಡಿದೆನೆ || ೩ ||

ಅಷ್ಟರೊಳು ಗಂಡಬಂದ ಅಡುವ ಗಡಿಗೆಯ ಒಡೆದ |
ಹುಟ್ಟುಮುರಿದು ಮೂಲೆಗೆ ಹಾಕಿದನೆ || ೪ ||

ಹುಟ್ಟನಲಿತಿರುಹುವ ಒಟ್ಟನಲಿ ಕುದಿಸುವ |
ಕಟ್ಟಂಬಲಿಯನೆತ್ತಿ ಕುಡಿಸಿದನೆ || ೫ ||

ಉಡುವ ಸೀರೆಯ ಸೆಳೆದು ಗಿಡದ ತೊಪ್ಪಲಸುತ್ತಿ |
ಕಡೆಗೆ ಬಾರದಹಾಗೆ ಮಾಡಿದನೆ || ೬ ||

ಮಾಡಿದೆನೆ ಒಗೆತನ ನಂಬಿಗಿಲ್ಲದ ಮನೆಯೊಳು |
ಕೂಡಿದೆನೆ ಪುರಂದರವಿಟ್ಠಲನ || ೭ ||

## ೧೦೦

ರಾಗ-ಪಂತುರಾವಳಿ ತಾಳ-ಅಟ

[೧]ಏನಾದರೂ ಒಂದಾಗಲಿ-ನಮ್ಮ-
ಮನೆತುಂಬದೇವರು ಮುರತುಂಡುಕಲ್ಲು || ಪ ||

ಅತ್ತೆಯುಕಣ್ಣೊಂದು ಹರಿಯಲಿ |
ಮತ್ತೆಮಾವನ ಕಾಲುಮುರಿಯಲಿ ||
ಹಿತ್ತಲಗೋಡೆಯು ಬಿರಿಯಲಿ—ಕಾ—
ಳ್ಗತ್ತಲೆಯಾದರೂ ಕವಿಯಲಿ ಹರಿಯೆ || ೧ ||

ಮನೆಯು ಗಂಡ ಮಾಯವಾಗಲಿ |
ಉಣಬಂದ ಮೈದುನ ಒರಗಲಿ—ನೆರೆ—
ಮನೆಯು ಹಾಳು ಹಾಳಾಗಲಿ—ನಾ—
ದಿನಿ ಅತ್ತಿಗೆಯರು ಸಾಯಲಿ ಹರಿಯೆ || ೨ ||

---

೧ ಝು (೭) ಗ (B) ಪ್ರತಿಗಳಿಂದ ಆರಿಸಿಕೊಂಡಿದೆ.

ಕಂದನ ಕಣ್ಣೊಂದು ಮುಚ್ಚಲಿ । ಆ
ಚಂದ್ರಂಗೆ ಹಾವು ಕಚ್ಚಲಿ ॥
ದ್ವಂದ್ವಾರ್ಥವನು ಬಿಚ್ಚಲಿ ಪು-
ರಂದರವಿಟ್ಠಲ ಮೆಚ್ಚಲಿ ಹರಿಯೆ ॥ ೩ ॥

## ೧೦೧

ರಾಗ-ಸುರಟಿ ತಾಳ-ಅಟ

[೧]ಇಲ್ಲಿಯೇ ಕುಳಿತಿದ್ದ ಭೂತವು-ಒಂದು-
ಹಲ್ಲಿಯು ನುಂತು ಹದಿನಾಲ್ಕು ಲೋಕವ ॥ ಪ ॥
ಸೂಳಿಯು ಮನೆಯುಲಿ ಇದೆಯೊಂದು ಕೋಳಿ ।
ಕೋಳಿಯು ನಾಲಗೆ ಏಳು ತಾಳೆಯುದ್ದ ॥
ಕೋಳಿ ನುಂಗಿತು ಏಳು ಕಾಳಿಂಗ ನಾಗನ ।
ಮೇಲೊಂದು ಬೇಡಿತು ಸಿಂಹದ ಮರಿಯು ॥ ೧ ॥

ಕಾನನದೊಳಗೊಂದು ಇರುವದು ಕೋಣ ।
ಕೋಣನ ಕೊರಳಿಗೆ ಮುನ್ನೂರುಬಾವಿ ॥
ಕೋಣ ನೀರಿಗೆ ಹೋಗಿ ಕ್ಷೋಣಿಕಪಿಯುಕೊಂದು ।
ಟೊಣ್ಣನ ಮನೆಯೊಳಗೌತನವಯ್ಯ ॥ ೨ ॥

ವೃಕ್ಷದಮೇಲೊಂದು ಸೂಕ್ಷ್ಮದ ಪಕ್ಷಿ ।
ಪಕ್ಷಿಭಕ್ಷಣವಾದ ಅಮೃತದಹಣ್ಣು ॥
ಪಕ್ಷಿ ನೋಡಲು ಬಂದ ರಾಕ್ಷಸ ಬ್ರಾಹ್ಮಣ ।
ಶಿಕ್ಷೆಯ ಮಾಡಿದ ಪುರಂದರವಿಠಲ ॥ ೩ ॥

---

೧ ಊ (ಕ) ಪ್ರತಿಯಿಂದ ತೆಗೆದುಕೊಂಡಿದೆ

### ೧೦೨

ರಾಗ - ಪೂರ್ವಿ   ತಾಳ - ಅಟ

[1]ಸುಣ್ಣವಿಲ್ಲ ಬಾಗವತರೆ |
ಸುಣ್ಣನೆಯು ಗೋಡೆಗೆ ನಿನ್ನೆ ತೊಡೆದುಬಿಟ್ಟೆ || ಪ ||

ವೀಳೆಯ ಹಾಕುವನಲ್ಲ ವ್ಯಾಧಿಷ್ಠ ನನಗಂಡ |
ಬಾಳುಗೇಡಿ ಎನ್ನ ಬಾಯನೋಡಿ ||
ಹಾಳಾದಮನೆ ಹೊಕ್ಕು ಗೋಳುಗರಿಯುತೇನೆ |
ಕೇಳಿದ ಬಳಿಕಿನ್ನು ಹೇಳದೆ ಫಲವೇನು || ೧ ||

ಮದ್ದು ಮದ್ದು ತಿಂದು ಮನೆಯೆಲ್ಲ ಬರಿದಾಯ್ತು |
ಹೊದ್ದಿತು ಮೂದೇವಿ ಮೈದುನಗೆ ||
ಬದ್ಧ ತನದಿ ಸಂಜೆ ಭಂಗಿ ಮುಕ್ಕುವ ಭಾವ |
ಒದ್ದುಕೊಳ್ಳುತಾನೆ ಒಳಗೆ ಕದವನಿಕ್ಕಿ || ೨ ||

ಅನ್ನೆಕಾರಿ ಅತ್ತೆ ತೊನ್ನುಬಡಕ ಮಾವ |
ಗನ್ನ ಘಾತಕಿರಂಡೆ ಅತ್ತಿಗೆ ಮುಂಡೆ ||
ಎನ್ನ ಗೋಳುತಾಗಿ ಎದಿಗೆ ಹೋದಾರು |
ಪನ್ನಗಶಯನ ಶ್ರೀಪುರಂದರವಿಠಲ || ೩ ||

---

೧ ಅ (೧೧) ಇ (೧೦) ವ: ಪ್ರತಿಗಳಿಂದ ತೆಗೆದುಕೊಂಡಿದೆ.

# ೬. ಜೀವನ ವೈವಿಧ್ಯ

### ೧೦೩

ರಾಗ – ಪಂತುವರಾಳಿ ತಾಳ – ಅಟ

[೧]ಒಲ್ಲೆನೆ ವೈದಿಕ ಗಂಡನ—ನಾ-
ನೆಲ್ಲಾದರೂ ನೀರ ಧುಮುಕುವೆನಮ್ಮ || ಪ ||

ಉಟ್ಟೆನೆಂದರೆ ಇಲ್ಲ ತೊಟ್ಟೆನೆಂದರೆ ಇಲ್ಲ |
ಕೆಟ್ಟ ಸೀರೆಯು ನಾನುಡಲಾರೆನೆ ||
ಒಟ್ಟ ತೊಳಸಿ ಎನ್ನ ರಟ್ಟೆಯೆಲ್ಲ ನೊಂದವು |
ಎಷ್ಟೆಂದು ಹೇಳಲಿ ಕಷ್ಟದ ಒಗತನ || ೧ ||

ಕೃಷ್ಣಾಜಿನವನು ರಟ್ಟೆಯಲಿ ಹಾಕಿಕೊಂಡು |
ಬೆಟ್ಟಲಿ ಗಿಂಡಿಯು ಹಿಡಿದಿಹನೆ ||
ದಿಟ್ಟತನದಿ ನಾನೆದುರಿಗೆ ಹೋದರೆ |
ದೃಷ್ಟಿಯಿಂದಲಿ ಎನ್ನ ನೋಡನಮ್ಮ || ೨ ||

ನಿನ್ನಾಣೆ ಹುಸಿಯಲ್ಲ ಬಿನ್ನಣಮಾತಲ್ಲ |
ಕಣ್ಣ ಸನ್ನೆಯಂತು ಮೊದಲೆ ಇಲ್ಲ ||
ಮುನ್ನಿನ ಜನ್ಮದಲಿ ಪುರಂದರವಿಠಲನ |
ಚೆನ್ನಾಗಿ ಪೂಜೆಯು ಮಾಡಲಿಲ್ಲಮ್ಮ || ೩ ||

### ೧೦೪

ರಾಗ – ನವರೋಜು ತಾಳ – ಆದಿ

[೨]ಡೊಂಕುಬಾಲಕದ ನಾಯಕರೆ |
ನೀವೇನೇನೂಟವ ಮಾಡಿದಿರಿ || ಪ ||

---

೧ ಝು (ಹ) ಪ್ರತಿಯೊಂದರಿಂದ ತೆಗೆದುಕೊಂಡಿದೆ.

೨ ಮು[illegible]ದಲ್ಲಿಲ್ಲ[illegible]

ಕಣಕಕುಟ್ಟುವಲ್ಲಿಗೆ ಹೋಗಿ |
ಹಣಿಕಿ ಹಣಿಕಿ ನೋಡುವಿರಿ ||
ಕಣಕ ಕುಟ್ಟುವ ಒನಕಿಯಲೊಗೆದರೆ |
ತಿಣಕುತ ರಾಗವ ಮಾಡಿದಿರಿ || ೧ ||

ಹುಗ್ಗಿ ಮಾಡುವಲ್ಲಿಗೆ ಹೋಗಿ |
ತಗ್ಗಿ ಬಗ್ಗಿ ನೋಡುವಿರಿ ||
ಹುಗ್ಗಿ ಮಾಡುವ ಸವಟಿಲಿ ಬಡಿದರೆ |
ಕಂಯ್ ಕುಂಯ್ ರಾಗವ ಮಾಡುವಿರಿ || ೨ ||

ಹಿರಿಯ ಬೀದಿಯಲಿ ಓಡುವಿರಿ |
ಕರಿಯ ಬೂದಿಯಲಿ ಹೊರಳುವಿರಿ ||
ಪುರಂದರವಿಟ್ಠಲರಾಯನ ಈಪರಿ |
ಮರೆತು ಸದಾ ನೀವು ತಿರುಗುವಿರಿ || ೩ ||

೧೦೫

ರಾಗ – ಸೌರಾಷ್ಟ್ರ ತಾಳ – ಛಾಪು

[೧]ತಾರಕ್ಕ ಬಿಂದಿಗೆ ನೀರಿಗೆ ಹೋಗುವೆ |
ತಾರೆ ಬಿಂದಿಗೆಯ || ಪ ||
ತರಲಾಗದಿದ್ದರೆ ಬಲಿಯಿಟ್ಟು ಬರುವೆನು |
ತಾರೆಬಿಂದಿಗೆಯ || ಅ. ಪ. ||

ಅಚ್ಯುತನೆಂಬುವ ಕಟ್ಟೆಯ ನೀರಿಗೆ ತಾರೆಬಿಂದಿಗೆಯ–ಅಲ್ಲಿ– |
ಮತ್ಸರಕ್ರೋಧವೆಂಬ ಕೊಡವನು ತೊಳೆವೆನು ತಾರೆ.... || ೧ ||

ರಾಮನಾಮವೆಂಬ ಸಾರದ ನೀರಿಗೆ ತಾರೆ ಬಿಂದಿಗೆಯ–ಹರಿ– |
ರಾಮವೆಂಬುವ ಹರಿದು ಹೋಗುವ ನೀರಿಗೆ ತಾರೆ— || ೨ ||

ಅಜ್ಞಾನವೆಂಬ ನೀರ ಚೆಲ್ಲಿ ಬಂದೆನು ತಾರೆ ಬಿಂದಿಗೆಯ |
ಸುಜ್ಞಾನವೆಂಬುವ ನೀರಿಗೆ ಹೋಹೆನು ತಾರೆ— || ೩ ||

೭೫ (೧) ಪ್ರತಿಯಲ್ಲಿ ಮಾತ್ರ ದೊರಕಿದೆ.

ಗೋವಿಂದನೆಂಬುವ ಗುಣವುಳ್ಳನೀರಿಗೆ ತಾರೆಬಿಂದಿಗೆಯು ।
ಚೆಲ್ವ ಬೆಳದಿಂಗಳೊಳು ಚಿಲುಮೆಯು ನೀರಿಗೆ ತಾರೆ— ॥ ೪ ॥

ಬಿಂದುಮಾಧವನ ಏರಿಯು ನೀರಿಗೆ ತಾರೆಬಿಂದಿಗೆಯು—ಪು— ।
ರಂದರವಿಠಲನ ಅಭಿಷೇಕಕೆ ಬೇಕು ತಾರೆ— ॥ ೫ ॥

## ೧೦೬

ರಾಗ – ನಾದನಾಮಕ್ರಿಯೆ ತಾಳ – ಆದಿ

[೧] ತುರುಕರು ಕರೆದರೆ ಉಣಬಹುದಣ್ಣ ।
ತುರುಕರು ಕರೆದರೆ ಉಣಬಹುದು ॥ ಪ ॥

ಕರಕರೆ ಚಂಚಲ ಮಾಡದಿರಣ್ಣ ।
ತುರುಕರು ಕರೆದರೆ ಉಣಬಹುದು ॥ ಅ. ಪ. ॥

ತುರುಕರುವಿಂದ ಮುಟ್ಟುಮುಡಚಟ್ಟುಹೋಹುದು ।
ತುರುಕರುವಿಂದ ಹೋಹುದು ಎಂಜಲವು ॥
ತುರುಕರು ಕಂಡರೆ ಸರಕನೆ ಏಳಬೇಕು ।
ತುರುಕರುವಿನ ಮಂತ್ರ ಜಪಿಸಬೇಕಣ್ಣ ॥ ೧ ॥

ತುರುಕರುವಿಂದ ಸ್ವರ್ಗ ಸ್ವಾಧೀನವಾಹುದು ।
ತುರುಕರುವಿಂದ ನರಕ ದೂರಪ್ಪುದು ॥
ತುರುಕರು ಕೂದಲ ತುರುಬಿಗೆ ಸುತ್ತಿಕೊಂಡು ।
ಗರತಿಯರೆಲ್ಲ ಮುತ್ತೈದೆಯರಣ್ಣ ॥ ೨ ॥

ತುರುಕರುವಿನ ನೀರೆರಕೊಂಡ ನಮ್ಮದೇವ ।
ಉರವಕೊಂಡ ನೀರೆಲ್ಲ ಸನಕಾದಿಗೆ ॥
ಬೆರಕೆಯು ಮಾಡಿದ ಪುರಂದರವಿಠಲ ।
ಅರಿಕೆಯು ಮಾಡಿದ ಹರಿದಾಸರಿಗೆಲ್ಲ ॥ ೩ ॥

---

೧ (ಟಿ). ಕ. ವಿ. ಬಿ. ಪ್ರತಿಗಳಿಂದ ಆರಿಸಿಕೊಂಡಿದೆ.

## ೧೦೭

ರಾಗ - ಕಲ್ಯಾಣಿ ತಾಳ - ಅಟ

[1]ಪಾಪೋಸು ಹೋದುವಲ್ಲ—ಸ್ವಾಮಿ ಎನ್ನ-
ಪಾಪೋಸು ಹೋದುವಲ್ಲ || ಪ ||

ಅಪಾರಜನುಮದಿ ಆರ್ಜನೆಯ ಮಾಡಿದ || ಅ. ಪ. ||

ಉರಗಾದ್ರಿಯಲಿ ಸ್ವಾಮಿಪುಷ್ಕರಣಿ ಮೊದಲಾದ |
ಪರಿ ಪರಿ ತೀರ್ಥಸ್ನಾನಗಳ ಮಾಡೆ ||
ಹರಿದಾಸರ ಕೂಡಿ ಶ್ರೀನಿವಾಸನ ಸಂ–
ದರುಶನದಲ್ಲಿ ಮೈಮರೆದಿದ್ದೆನೊ ಎನ್ನ || ೧ ||

ಪರಮಭಾಗವತರು ಹರಿಕಥೆ ಪೇಳಲು |
ಪರಮಭಕುತಿಯಲಿ ಕೇಳುತಿದ್ದೆ ||
ಪರಮಪಾಪಿಷ್ಠರ ಪಾಲಿಗೆ ಪೋದವು |
ಪರಮಾತ್ಮನ ಮನಸಿಗೆ ಬಂತು ಹೀಗೆ || ೨ ||

ಮಾಯೆ ಒಲಿದು ಎನಗೆ ತಂದುಕೊಟ್ಟಿದ್ದಳು |
ದಾಯಾದಿಗಳು ನೋಡಿ ಸಹಿಸಲಿಲ್ಲ ||
ಮಾಯಾರಮಣ ನಮ್ಮ ಪುರಂದರವಿಠಲನ |
ಮಾಯೆಯಿಂದ ಮಟ್ಟಮಾಯವಾದವು ಈಗ || ೩ ||

## ೧೦೮

ರಾಗ - ಶಂಕರಾಭರಣ ತಾಳ – ಆದಿ

[2]ಮಂದಿಯು ಗೊಡವೆ ಇನ್ನೇನು ಮಗಳೆ |
ಮುಂದೆನೋಡಿ ಹಂಜಿ ನೂಲವ್ವ || ಪ ||

---

೧ N ಪ್ರತಿಯಿಂದ ತೆಗೆದುಕೊಂಡಿದೆ.

೨ ಅ (ಬಿ ಎ ೨) [illegible]

ಕಣ್ಣ ಮುಂದಿನ ಕಸವನು ತೆಗೆದು ।
ಸಣ್ಣಗೆ ನೀ ನೂಲವ್ವ ॥ ಅ. ಪ. ॥

ವಸುಧೆಯು ದೊಡ್ಡ ಮಣೆಯುಮಾಡಿ ।
ಶಶಿರವಿಗಳೆರಡು ಕಂಬವ ಹೂಡಿ ॥
ಆ ಸಿರಿರಂಗರ ಎರಡು ಚಕ್ರವಮಾಡಿ ।
ದರ್ಶನವೆಂಬುವ ನುಲಿಯನು ಬಿಗಿದು ॥ ೧ ॥

ಪರಬ್ರಹ್ಮನ ಅಳವು ಮಾಡಿ ।
ಕುರುಡುನಾಶಿಕ ಬೆನಕದಿತಿಕ್ಕಿ ॥
ಹರಿ ನೀನೆ ಎಂಬ ದಾರವಕಟ್ಟಿ ।
ವಿರತಿ ವಿಚಾರದ ಚಿಲ್ಲಗಳಿಕ್ಕಿ ॥ ೨ ॥

ಜ್ಞಾನವೆಂಬುವ ಕದರನ್ನಿಕ್ಕಿ ।
ಮಾನವುದವೆಂಬ ಹಂಜಿಯುಹಿಡಿದು ॥
ಧ್ಯಾನವೆಂಬ ಎಳೆಯನು ತೆಗೆದು ।
ಮೌನದಿಂದಲಿ ನೂಲವ್ವ ॥ ೩ ॥

ಕಕ್ಕುಲಾತಿ ಕಾಂಕ್ಷೆಗಳೆಂಬ ।
ಸಿಕ್ಕು ದೊಡಕುಗಳನೆ ಬಿಡಿಸಿ ॥
ಒಕ್ಕುಡಿತೆಯುಮಾಡಿದ ಮನದಿ ।
ಕುಕ್ಕಡಿನೂಲು ಕೂಡಿಹಾಕಮ್ಮ ॥ ೪ ॥

ಇಪ್ಪತ್ತೊಂದು ಸಾವಿರದ ಮೇ–
ಲಿಪ್ಪನೂರು ಎಳೆಯನು ಹೊಡೆದು ॥
ತಪ್ಪದೆ ಹುಂಜವಕಟ್ಟ ನೀನು ।
ಒಪ್ಪದಿ ಸೀಳು ಇಳುವಮ್ಮ ॥ ೫ ॥

ಸದ್ಯದಿ ನೀ ಜಾಡರಲ್ಲಿ ।
ಸಿದ್ಧ ಬದ್ಧ ಸೀಳುಗಳ ಹಾಕಿ ॥

ವಿದ್ಯೆಯೆಂಬುವ ಹಚ್ಚಡವನ್ನು ।
ಬುದ್ಧಿಯಿಂದಲಿ ನೇಯಿಸಮ್ಮ || ೬ ||

ಒಪ್ಪುವಾತ್ಮ ಪರಮಾತ್ಮನೆಂಬ ।
ಬಪ್ಪ ಎರಡು ಹೋಳುಗಳ ಹಚ್ಚಿ ||
ತಪ್ಪದೆ ಪುರಂದರವಿಠಲನ ಪಾದಕೆ
ಒಪ್ಪಿಸಿ ಕಾಲವ ಕಳೆಯುಮ್ಮ || ೭ ||

## ೧೦೯

ರಾಗ – ಆನಂದಭೈರವಿ ತಾಳ - ಅಟ

[೧]ಮುಪ್ಪಿನ ಗಂಡನ ಒಲ್ಲೆನೆ ।
ತಪ್ಪದೆ ಪಡಿಪಾಟ ಪಡಲಾರೆನವ್ವ || ಪ ||

ಉದಯದಲೇಳಬೇಕು ಉದಕಕಾಸಲು ಬೇಕು ।
ಹದನಾಗಿ ಬಜೆಯನು ಅರೆದಿಡಬೇಕು ||
ಬದಿಯಲಿ ಎಲೆಅಡಿಕೆ ಕುಟ್ಟಿಡಬೇಕು ।
ಬಿದಿರಕೋಲು ತಂದು ಮುಂದಿಡಬೇಕು || ೧ ||

ಪಿತ್ತವೋಕರಿಕೆ ಮುದುಕರಿಗೆ ವಿಶೇಷವು ।
ಹೊತ್ತುಹೊತ್ತಿಗೆ ಜೊಲ್ಲ ಚೆಲ್ಲಬೇಕು ||
ಮೆತ್ತನವೆರಡು ಮುದ್ದಿಯ ಮಾಡಲುಬೇಕು ।
ಒತ್ತೊತ್ತಿ ಕೂಗಿ ಕರೆಯಲುಬೇಕು || ೨ ||

ಜಾಡಿ ಹಾಸಬೇಕು ನೋಡಿ ಬಾಡಬೇಕು ।
ಅಡಿಗಡಿಗೆ ಕಣ್ಣೀರ ಸುರಿಸಬೇಕು ||
ಒಡೆಯ ಶ್ರೀಪುರಂದರವಿಠಲನ ನೆನೆಯುತ ।
ಮಿಡಿಗೊಂಡು ಮೂಲೆಗೆ ಒರಗಬೇಕು || ೩ ||

---

೧ ಶ್ರೀ ಪ್ರತಿಯಿಂದಲೇ ತೆಗೆದುಕೊಳ್ಳಲಾಗಿದೆ. ಇ ಎ ಪ್ರತಿಗಳಲ್ಲಿ ವಿಕಾರಗಳು ತುಂಬಿವೆ.

೧೧೦

ರಾಗ - ಸಾರಂಗ    ತಾಳ – ಝಂಪೆ

[1] ಈ ಸಮಯಕಲ್ಲದಿನ್ನೆಲ್ಲಿ ಕಾಯೊ ।
ದೋಷರಹಿತ ವಸುದೇವ ನೀ ಕಾಯೊ ಕೃಷ್ಣ ॥ ಪ ॥

ನಿನ್ನಂಘ್ರಿಯನು ಭಜಿಸಿದವರ ಬಾಳ್ವೆಯ ಕಾಯೊ ।
ಎನ್ನ ಸತಿ-ಸುತರು ನಿನ್ನವರೆ ಕಾಯೊ ॥
ನೀನಲ್ಲದನ್ಯರನು ಕಾಣೆ ಕವಳಿಯ ಕಾಯೊ ।
ಮುನ್ನಸ್ಥಿರವಾಗಿ ನೀನೆಂಬೆ ಕಾಯೊ ॥ ೧ ॥

ಪರವೆಣ್ಣುಗಳಿಗೆ ಎನ್ನ ಮನಸು ಕಾತರಿ ಕಾಯೊ ।
ದುರಿತ ದುಷ್ಕರ್ಮ ಮುಂಚಿಲ್ಲ ಕಾಯೊ ॥
ಕರೆಕರೆಯ ಸಂಸಾರಕಷ್ಟ ಕಡಲಿಯ ಕಾಯೊ ।
ದುರಿತಭವ ಶರಧಿಗೆ ತಾರೆ ಕಾಯೊ ॥ ೨ ॥

ತ್ರಿವಿಧಪಾಪಂಗಳಿಗೆ ಪದವು ಉದ್ದಿನ ಕಾಯೊ ।
ಭವಸಾಗರದೊಳೀಸೆಂಬೆ ಕಾಯೊ ॥
ದಿವಿಜೇಂದ್ರಕೃಷ್ಣ ಕೈಪಿಡಿದು ಒಲಿದು ಕಾಯೊ ।
ನವಮುಕ್ತಿಪುರಂದರವಿಠಲ ನೀ ಬಿಡದೆ ಕಾಯೊ ॥ ೩ ॥

---

೧ ಅ(೧) ಪ್ರ[illegible]

# ೭ ಜೀವನಾನುಭವಚಿತ್ರಣ

## ೧೧೧

ರಾಗ – ಪೂರ್ವಿ ತಾಳ – ಆದಿ

[೧]ಆದದ್ದೆಲ್ಲ ಒಳಿತೇ ಆಯಿತು ನಮ್ಮ |
ಶ್ರೀಧರನಸೇವೆಯು ಮಾಡಲು |
ಸಾಧನಸಂಪತ್ತಾಯಿತು || ಪ ||

ದಂಡಿಗೆ ಬೆತ್ತ ಹಿಡಿಯುವುದಕ್ಕೆ |
ಮಂಡೆತಗ್ಗಿಸಿ ನಾಚುತಲಿದ್ದೆ ||
ಹೆಂಡತಿ ಸಂತತಿ ಸಾವಿರವಾಗಲಿ |
ದಂಡಿಗೆ ಬೆತ್ತ ಹಿಡಿಸಿದಳಯ್ಯ || ೧ ||

ಗೋಪಾಳ ಬುಟ್ಟಿ ಹಿಡಿಯುವುದಕ್ಕೆ |
ಭೂಪತಿಯಂತೆ ನಾಚುತಲಿದ್ದೆ ||
ಆ ಪತ್ನಿಯು ತಾ ಪ್ರೀತಿಯಿಂದಲಿ |
ಗೋಪಾಳಬುಟ್ಟಿಯ ಹಿಡಿಸಿದಳಯ್ಯ | || ೨ ||

ತುಳಸೀಮಾಲೆಯ ಹಾಕುವುದಕ್ಕೆ |
ಅಲಸಿಕೊಂಡು ನಡೆಯುತಲಿದ್ದೆ ||
ಜಲಜಾಕ್ಷಿಯು ಶ್ರೀಪುರಂದರವಿಠಲನ |
ತುಳಸೀ ಮಾಲೆಯ ಹಾಕಿಸಿದಳು || ೩ ||

---

೧ ಅ (೧), ಇ (೧೫), ಋ (೩।೧೦) ಈ ಪ್ರತಿಗಳಿಂದ ಆಯ್ದುಕೊಳ್ಳಲಾಗಿದೆ.

## ೧೧೨

ರಾಗ-ಸಾವೇರಿ ತಾಳ-ಝಂಪೆ

[೧]ಏನು ಕೌತುಕ ಕೃಷ್ಣ ತಾನೆ ಕನಸಿನೊಳು |
ಮಾನವರ ತೆರನಂತೆ ಮರುಳಾಡಿಸಿದನೆನ್ನ || ಪ ||

ಹಿಂದೆ ಮಾಡಿದ ಪದವ ಒಂದು ಹೇಳೆಂದೆನುತ |
ಮುಂದೆ ಅದರಂದವನು ಎಲ್ಲ ತಾಪೇಳ್ದ ||
ಒಂದು ದೋಸೆಯು ತನಗೆ ತಂದುಕೊಡು ಎಂದೆನಲು |
ತಿಂದ ಮೊಸಲಕೊಡೆನು ಎಂದು ಹೇಳಿದೆನು || ೧ ||

ಮೋಸ ಹೋದೆನು ನಾನು ದೋಸೆಯನು ಹರಿಗೆ-ಆ-
ಪೋಶನವನಿಕ್ಕದೇ ಪೋಟಿಸಿದೆನು ||
ಮೊಸಲಾದರು ಅಹುದು ದೋಷವಿಲ್ಲೆಂದೆನುತ |
ಆಸುರದ ಮಾತುಗಳ ವಾಸಿತೋರಿದನು || ೨ ||

ಎಳೆಯಪ್ರಾಯದೊಳಿರುವ ಚೆಲುವೆಯೊರ್ವಳು ಬಂದು |
ಹೊಳೆಯೊಳಗೆ ಈಸಾಡಿ ನಲಿವುದನು ನೋಡಿ ||
ನಳಿನಮುಖಿಯುನು ಮೇಲೆ ಕರೆಸಲಾ ಮೈಲಿಗೆಯು |
ತೊಳಕೊಂಡು ಒಳಯಿಂಕೆ ಬಂದುದನು ಕಂಡೆ || ೩ ||

ಈರೀತಿಸಿರಿಸಹಿತ ವಾರಿಜಾಕ್ಷನು ಕೃಷ್ಣ |
ತೋರಿದನು ಸ್ವಪ್ನ ಕಣ್ಣಾರೆ ನೋಡಿದೆನು ||
ಹಾರಿಹೋಯಿತು ಕಷ್ಟ ಸೂರೆಗೊಂಡೆನು ಸಿರಿಯು |
ಏರಿ ಬಂದುದು ಶುಭದವಾರಿಧಿಯು ಮುಂದೆ || ೪ ||

ಈ ಮಹಾ ಮೂರ್ತಿಯನು ಜಾವಪರ್ಯಂತರದಿ |
ಕಾಮಿಸಿಯೆ ನೋಡಿದೆನು ಸೌಮ್ಯನಸ್ಯದಲಿ ||
ಆ ಮಹಾ ಹರಿಯು ಪರಧಾಮವನು ಕೈಕೊಂಡು |
ಭೂಮಿಪತಿಯಾಗಿರ್ದ ಪುರಂದರವಿಠಲ || ೫ ||

---

೧ ಶ (೧) ಪ್ರತಿಯಿಂದ ತಗೆದುಕೊಂಡಿದೆ.

### ೧೧೩

ರಾಗ-ಪೂರ್ವಿ ತಾಳ-ಅಟ

[೧]ಮುಯ್ಯಕ್ಕೆ ಮುಯ್ಯ ತೀರಿತು—ಜಗ ।
ದಯ್ಯ ವಿಜಯಸಹಾಯ ಪಂಢರಿರಾಯ ॥ ಪ ॥

ಸಣ್ಣವನೆಂದು ನಾ ನೀರು ತಾಯೆಂದರೆ ।
ಬೆಣ್ಣೆಗಳ್ಳ ಕೃಷ್ಣ ಮರೆಯುವಮಾಡಿ ॥
ಚಿನ್ನದ ಪಾತ್ರೆಯ ನೀರ ತಂದಿತ್ತರೆ ।
ಕಣ್ಣ ಕಾಣದೆ ನಾನು ಟೊಣೆದೆ ಪಂಢರಿರಾಯ ॥ ೧ ॥

ಎನ್ನ ಪೆಸರ ಪೇಳಿ ಸೂಳೆಗೆ ಕಂಕಣ ।
ವನ್ನು ನೀನು ಕೊಟ್ಟು ನಿಜವಮಾಡೆ ॥
ಎನ್ನ ನೋಯಿಸಿ ಅಪರಾಧ ಭಂಡನ ಮಾಡಿ ।
ನಿನ್ನ ಮುಯ್ಯಕೆ ಮುಯ್ಯ ತೋರಿದೆ ಪಂಢರಿರಾಯ ॥ ೨ ॥

ಭಕ್ತವತ್ಸಲನೆಂಬ ಬಿರುದು ಬೇಕಾದರೆ ।
ಕಿತ್ತು ಈಡಾಡೊ ಇನ್ನೊಂದು ಕಂಕಣವ ॥
ಮುಕ್ತಿಗೆ ನೀನಲ್ಲದಾರನು ಕಾಣೆನು ।
ಮುಕ್ತೀಶ ಪುರಂದರವಿಠಲ ಪಂಢರಿರಾಯ ॥ ೩ ॥

### ೧೧೪

ರಾಗ – ಪಂತುರಾವಳಿ ತಾಳ – ಆದಿ

[೨]ನಿಮ್ಮ ಭಾಗ್ಯದೊಡ್ಡದೊ ನಮ್ಮ ಭಾಗ್ಯದೊಡ್ಡದೊ ।
ಸಮ್ಮತಿಯಲಿ ನಾವು-ನೀವು ಸಾಟಿಮಾಡಿನೋಡುವ ಬನ್ನಿ ॥ ಪ ॥

ಸರಕು ಬೆಲ್ಲತುಪ್ಪಧಾನ್ಯ ಸವೆವುವೆಂಬ ಚಿಂತೆಯುಂಟು ।
ಹರಿಯನಾಮಾಮೃತಕೆ ಇನ್ನು ಯಾವಚಿಂತೆ ಇಲ್ಲವಯ್ಯ ॥ ೧ ॥

---

೧ ಅ (೧) ಆ (೧) ಝ (೩।೧೦) ಪ್ರತಿಗಳಿಂದ ಆರಿಸಿದೆ.

೨ ಅ (೧) [illegible] ಪ್ರತಿಗಳಿಂದ [illegible]ದೆ.

ಕಡಗ ಕಂಠವಮಾಲೆಗಳಿಗೆ ಕಳ್ಳರ ಅಂಜಿಕೆಯುಂಟು ।
ಅಡವಿತುಳಸಿವಮಾಲೆಗಿನ್ನು ಯಾರಅಂಜಿಕೆಯಿಲ್ಲವಯ್ಯ ॥ ೨ ॥
ಹೇಮಹೊನ್ನುಹಣಗಳಿಗೆ ಹೇರಾಳದ ಭಯುಗಳುಂಟು ।
ರಾಮನಾಮದ್ರವ್ಯಕಿನ್ನು ಯಾರ ಭಯುವಿಲ್ಲವಯ್ಯ ॥ ೩ ॥
ವ್ಯಾಪಾರ ಉದ್ಯೋಗಕಿನ್ನು ವ್ಯಾಕುಲದ ಭಯುವುಂಟು ।
ಗೋಪಾಳದವೃತ್ತಿಗಿನ್ನು ಗೊಡವೆಯಾರದಿಲ್ಲವಯ್ಯ ॥ ೪ ॥
ನಿಮ್ಮ ಭಾಗ್ಯಲಕ್ಷ್ಮೆದೇವಿ ನಮ್ಮ ಭಾಗ್ಯ ನಾರಾಯಣ ।
ನಿಮ್ಮ ಭಾಗ್ಯದೊಡೆಯು ನಮ್ಮ ಪುರಂದರವಿಠಲ ॥ ೫ ॥

### ೧೧೫

### ಸುಳಾದಿ

#### ಧ್ರುವತಾಳ

[1]ಒಬ್ಬ ಆಚಾರ್ಯನು ದೈವವೇ ಇಲ್ಲವೆಂಬ ।
ಒಬ್ಬ ಆಚಾರ್ಯನು ದೈವಕೆ ಎಂಟು ಗುಣವೆಂಬ ।
ಒಬ್ಬ ಆಚಾರ್ಯನು ನಿರ್ಗುಣನಿರಾಕಾರನಿರೂಪನೆಂದು-
ತಾನೆ ದೈವವೆಂಬ ।
ಇವರೊಬ್ಬರೂ ವೇದಾರ್ಥವರಿತೂ ಅರಿಯರು ।
ಇವರೊಬ್ಬರೂ ಶಾಸ್ತ್ರಾರ್ಥವರಿತೂ ಅರಿಯರು ।
ಒಬ್ಬ ಮಧ್ವಾಚಾರ್ಯರೆ ಪುರಂದರವಿಠಲನೊಬ್ಬನೆ
ಎಂದು ತೋರಿ ಕೊಟ್ಟವರಾಗಿ ॥ ೧ ॥

#### ಮಟ್ಟತಾಳ

ಹರಿಪರದೇವತೆ ಎಂಬ ಜ್ಞಾನವೇ ಜ್ಞಾನ ।
ಹರಿಯಡಿಗಳನ್ನೈದುವ ಮುಕುತಿಯೇ ಮುಕುತಿ ।
ಹರಿವಿರಹಿತ ಜ್ಞಾನ ಮಿಥ್ಯಾಜ್ಞಾನ ।
ಹರಿವಿರಹಿತ ಮುಕುತಿ ಮಾತಿನ ಮುಕುತಿ ।

---

೧ ಜ (೧೩) [illegible] (ಬೆಂಪ್ರತಿ) ಪ್ರತಿಗಳಿಂದ ಸೇರಿದೆ.

ಹರಿಪರ ಸಿರಿಮಧ್ವಾಚಾರ್ಯರೇ ಗುರುಗಳು |
ತ್ರೈಲೋಕ್ಯಕೆ ಪುರಂದರವಿಠಲನೇ ದೈವವು ॥ ೨ ॥

ರೂಪಕತಾಳ

ಸುರತರುವಿರುತಿರೆ ಎಲವದಫಲ ಗಿಳಿ ಬಯಸಿಪ್ಪಂತೆ |
ಹಿರಿಯರಾದರು ನೋಡ ಹರಿಪರದೈವೆಂದರಿಯದೆ |
ಗುರುಗಳಾದರು ನೋಡ ಹರಿಪರದೈವೆಂದರಿಯದೆ |
ಸಿರಿವಿರಿಂಚಿಭವಾದಿಗಳೆಲ್ಲ ಹರಿಯ ಡಿಂಗರಿಗರೆಂದರಿಯದೆ |
ಹಿರಿಯರಾದರು ನೋಡು ಗುರುಗಳಾದರು ನೋಡ |
ಸಿರಿಪುರಂದರವಿಠಲನ ತೋರಿದ ಸಿರಿಮಧ್ವಾಚಾರ್ಯರಿರುತಿರೆ |
ಗುರುಗಳಾದರು ನೋಡ ॥ ೩ ॥

ತ್ರಿವುಡ ತಾಳ

ಸೋಽಹಂ ಎಂದು ಲೋಕವ ಮೋಹಿಸುವರ |
ನಿರಾಕರಿಸಿ ದಾಸೋಽಹಂ ರಹಸ್ಯವನರುಹಿದ |
ಸೋಽಹಂ ಎಂಬ ಸಿರಿಪುರಂದರವಿಟ್ಠಲನಾಳು |
ಮಧ್ವಮುನಿ ದಾಸೋಽಹಂ ಎಂಬ ॥ ೪ ॥

ಆದಿತಾಳ

ವೈದಿಕಮತದಲಿ ನಡೆದೆವೆಂದು ತಾವು
ವೈಷ್ಣವವಂಬಿಟ್ಟುಕೊಟ್ಟರು ಕೆಲವರು |
ವೈಷ್ಣವಮತದಲ್ಲಿ ನಡೆದೆವೆಂದು
ವೈದಿಕವಂಬಿಟ್ಟುಕೊಟ್ಟರು ಕೆಲವರು |
ವೈದಿಕವೈಷ್ಣವ ಒಂದೇ ಎಂದು ಮಧ್ವಮತಮುನಿ
ಪ್ರತಿಪಾದಿಸಿದ ಪುರಂದರವಿಠಲ ಮೆಚ್ಚೆ ॥ ೫ ॥

ಝಂಪೆತಾಳ

ಏಕವಿಂಶತಿಕುಭಾಷ್ಯದೂಷಕನೆಂಬ
ಬಿರುದು ನಮ್ಮಯ ಗುರುರಾಯಗಲ್ಲದುಂಟೆ |
ಪುರಂದರವಿಠಲ ಸರ್ವೋತ್ತಮನೆಂಬ
ಸಿದ್ಧಾಂತವು ನಮ್ಮ ಗುರುರಾಯಗಲ್ಲದುಂಟೆ? ॥ ೬ ॥

ಅಟತಾಳ

ಹರಿಯೆ ಪರಮಗುರು ಪರಮೇಷ್ಠಿ ಗುರುಸುರ ।
ಗುರುಮಧ್ವಾಚಾರ್ಯರ ಚಕ್ರವರ್ತಿ ಎಂ-
ದರಿತಿರೆ ಭಕುತಿ ಮುಕುತಿಯುಂಟು ।
ಪುರಂದರವಿಠಲನೆ ದೈವಾಧಿದೈವ ।
ಸುರಗುರುಮಧ್ವಾಚಾರ್ಯರೆ ಚಕ್ರವರ್ತಿ ॥ ೭ ॥

ಜತೆ

ಶರಣುಸಿರಿಮಧ್ವಾಚಾರ್ಯರಿಗೆ ಪುರಂದರವಿಠಲಗೆ ।
ಶರಣು ಶರಣೆಂಬೆನಾನನವರತ ॥

೧೧೬

ರಾಗ – ನೀಲಾಂಬರಿ ತಾಳ – ಅಟ

[1]ಗಿಳಿಯು ಪಂಜರದೊಳಿಲ್ಲ—ಶ್ರೀರಾಮರಾಮ ।
ಗಿಳಿಯು ಪಂಜರದೊಳಿಲ್ಲ ॥ ಪಲ್ಲ ॥

ಅಕ್ಕ ಕೇಳೆ ಎನ್ನ ಮಾತು ।
ಚಿಕ್ಕದೊಂದು ಗಿಳಿಯ ಸಾಕಿದೆ ॥
ಅಕ್ಕ ನಾನಿಲ್ಲದ ವೇಳೆ ।
ಬೆಕ್ಕು ಕೊಂಡುಹೋಯಿತಯ್ಯೋ ॥ ೧ ॥

ಅರ್ತಿಗೊಂದು ಗಿಳಿಯ ಸಾಕಿದೆ ।
ಮುತ್ತಿನ ಹಾರವನ ಹಾಕಿದೆ ॥
ಮುತ್ತಿನಂಥ ಗಿಳಿಯು ತಾನು ।
ಎತ್ತ ಹಾರಿ ಹೋಯಿತಯ್ಯೋ ॥ ೨ ॥

ಹಸಿರು ಬಣ್ಣದ ಗಿಳಿಯು ।
ಕುಶಲ ಬುದ್ಧಿಯ ಗಿಳಿಯು ॥

೧ ಅ (೧೧) N ಪ್ರತಿಗಳಿಂದ ಆರಿಸಿದೆ

ಹಸಗುಂದಿ ಗಿಳಿಯು ತಾ ।
ಮೋಸಮಾಡಿ ಹೋಯಿತಯ್ಯೋ ॥ ೩ ॥

ಮುಪ್ಪಾಗದ ಬೆಣ್ಣೆಯು ।
ತಪ್ಪದೆ ಹಾಕಿದೆ ಹಾಲು ॥
ಒಪ್ಪದಿಂದ ಕುಡಿದು ತಾನು ।
ಗಪ್ಪನೆ ಹಾರಿ ಹೋಯಿತಯ್ಯೋ ॥ ೪ ॥

ಒಂಬತ್ತು ಬಾಗಿಲ ಮನೆಯು ।
ತುಂಬಿದ ಸಂದಣಿ ಇರಲು ॥
ಕಂಬಮುರಿದು ಡಿಂಬಬಿದ್ದು ।
ಅಂಬರಕಡರಿ ಹೋಯಿತಯ್ಯೋ ॥ ೫ ॥

ರಾಮರಾಮ ಎಂಬ ಗಿಳಿಯು ।
ಕೋಮಲಕಾಯದ ಗಿಳಿಯು ॥
ಸಾಮಜಪೋಷಕ ತಾನು ।
ಪ್ರೇಮದಿ ಸಾಕಿದ ಗಿಳಿಯು ॥ ೬ ॥

ಅಂಗೈಯಲಾಡುವ ಗಿಳಿಯು ।
ಮುಂಗೈಯ ಮೇಲಿನ ಗಿಳಿಯು ।
ರಂಗಪುರಂದರವಿಠಲನಂತ– ।
ರಂಗದೊಳಿಹ ಗಿಳಿಯು ॥ ೭ ॥

೧೧೨

ರಾಗ – ಪೂರ್ವಿ ತಾಳ – ಆದಿ

[1]ಕದವನಿಕ್ಕಿದಳಿದೆಕೊ ಗಯ್ಯಾಳಿಮೂಳಿ ॥ ಪ ॥
ಕದವನಿಕ್ಕಿದಳಿದೆಕೊ ಚಿಲಕವಲ್ಲಾಡುತಿದೆ ।
ಒದಗಿದ ಪಾಪವು ಹೊರಗೆ ಹೋದೀತೆಂದು ॥ ಅ ಪ ॥

---

೧ ಅ (೧) ಆ (vi) ಪ್ರತಿಗಳಿಂದ ಆರಿಸಿಕೊಂಡಿದೆ. ಎ ಮತ್ತು ಓ ಪ್ರತಿಗಳಲ್ಲಿ ಬೇರೆ ಹೆಚ್ಚಿನ ಎರಡು ನುಡಿಗಳಿವೆ. ಇವು ಕೈಗಂಟಿನವೆಂಬಂತೆ ತೋರುತ್ತಿದೆ.

ಭಾರತ-ರಾಮಾಯಣ ಪಂಚರಾತ್ರಾಗಮ |
ಸಾರತತ್ತ್ವದಬಿಂದು ಕಿವಿಗೆ ಬಿದ್ದೀತೆಂದು ‖ ೧ ‖

ಹರಿಯಪಾದಾಂಬುಜಯುಗಳವನೆನೆವ ಭ- |
ಕ್ತರ ಪಾದದರಜ ಒಳಗೆ ಬಿದ್ದೀತೆಂದು ‖ ೨ ‖

ಮಂಗಳಮೂರುತಿ ಪುರಂದರವಿಠಲನ |
ತುಂಗವಿಕ್ರಮಪಾದ ಅಂಗಳ ಪೊಕ್ಕೀತೆಂದು ‖ ೩ ‖

## ೧೧೮

ರಾಗ - ನಾದನಾಮಕ್ರಿಯೆ ತಾಳ - ಛಾಪು

[೧]ರಾಗಿ ತಂದಿರಾ—ಭಿಕ್ಷಕೆ—
ರಾಗಿ ತಂದಿರಾ ‖ ಪ ‖

ಯೋಗ್ಯರಾಗಿ ಭೋಗ್ಯರಾಗಿ |
ಭಾಗ್ಯವಂತರಾಗಿ ನೀವು ‖ ಅ. ಪ ‖

ಅನ್ನದಾನವ ಮಾಡುವರಾಗಿ |
ಅನ್ನಛತ್ರವನಿಟ್ಟವ ರಾಗಿ ‖
ಅನ್ಯವಾರ್ತೆಗಳ ಬಿಟ್ಟವರಾಗಿ |
ಅನುದಿನ ಭಜನೆಯ ಮಾಡುವರಾಗಿ ‖ ೧ ‖

ಮಾತಾಪಿತರನು ಸೇವಿಪರಾಗಿ |
ಪಾತಕಕಾರ್ಯವ ಬಿಟ್ಟವರಾಗಿ ‖
ಖ್ಯಾತಿಯಲ್ಲಿ ಮಿಗಿಲಾದವರಾಗಿ |
ನೀತಿಮಾರ್ಗದಲಿ ಖ್ಯಾತರಾಗಿ ‖ ೨ ‖

ಗುರುಕಾರುಣ್ಯವ ಪಡೆದವರಾಗಿ |
ಗುರುವಿನ ಮರ್ಮವ ತಿಳಿದವರಾಗಿ ‖
ಗುರುವಿನಪಾದವ ಸ್ಮರಿಸುವರಾಗಿ |
ಪರಮಪುಣ್ಯವನು ಮಾಡುವರಾಗಿ ‖ ೩ ‖

---

೧ [illegible]

ವೇದಪುರಾಣವ ತಿಳಿದವರಾಗಿ ।
ಮೇದಿನಿಯಾಳುವಂಥವರಾಗಿ ॥
ಸಾಧುಧರ್ಮವಾಚರಿಸುವರಾಗಿ ।
ಓದಿ ಗ್ರಂಥಗಳ ಪಂಡಿತರಾಗಿ ॥ ೪ ॥

ಆರರಮಾರ್ಗವ ಅರಿತವರಾಗಿ ।
ಮೂರರಮಾರ್ಗವ ತಿಳಿದವರಾಗಿ ॥
ಭೂರಿತತ್ತ್ವವನು ಬೆರೆತವರಾಗಿ ।
ಕ್ರೂರರಸಂಗವ ಬಿಟ್ಟವರಾಗಿ ॥ ೫ ॥

ಕಾಮಕ್ರೋಧಗಳನಳಿದವರಾಗಿ ।
ನೇಮನಿಷ್ಠೆಗಳ ಮಾಡುವರಾಗಿ ॥
ಆ ಮಹಾಪದದಲಿ ಸುಖಿಸುವರಾಗಿ ।
ಪ್ರೇಮದಿ ಕುಣಿಕುಣಿದಾಡುವರಾಗಿ ॥ ೬ ॥

ಸಿರಿರಮಣನ ಸದಾ ಸ್ಮರಿಸುವರಾಗಿ ।
ಕುರುಹಿಗೆ ಬಾಗುವಂತವರಾಗಿ ॥
ಕರೆಕರೆಸಂಸಾರ ನೀಗುವರಾಗಿ ।
ಪುರಂದರವಿಠಲನ ಸೇವಿಪರಾಗಿ ॥ ೭ ॥

೧೧೯

ರಾಗ-ವರಾಳಿ ತಾಳ-ಅಟ

[೧]ಊಟಕ್ಕೆ ಬಂದೆವು–ನಿನ್ನ–
ಕೋಟಲೆಗಳ ಬಿಟ್ಟು ಅಡಿಗೆ ಮಾಡಮ್ಮ ॥ ಪ ॥

ಕತ್ತಲಿಕ್ಕುತಲಿವೆ ಕಣ್ಣು–ಬಲು–
ಒತ್ತಿ ಬರುತಲಿವೆ ಕೈಕಾಲಜುಮ್ಮ ॥
ಹೊತ್ತು ಹೋಗಿಸಬೇಡವಮ್ಮ–ಒಂದು–
ತುತ್ತನಾದರು ಮಾಡಿ ಇಕ್ಕುವುದು ಧರ್ಮ ॥ ೧ ॥

೧ ಝು (ಲ) ಪ್ರತಿಯೊಂದರಿಂದಲೇ ಆರಿಸಿದೆ.

ಒಡಲೊಳಗುಸಿರಿಲ್ಲವಮ್ಮ—ಗಳಿಗೆ—
ತಡವಾದರೀ ಪ್ರಾಣ ಉಳಿವುದಿಲ್ಲಮ್ಮ ||
ನುಡಿಯು ಚಿತ್ತಕೆ ಬರಲಮ್ಮ—ಒಂದು—
ಪಿಡಿ ಅಕ್ಕಿ ಅನ್ನದಿ ಕೀರ್ತಿ ಪಡೆಯುಮ್ಮ || ೨ ||

ಹೊನ್ನರಾಸಿಗಳನು ಸುರಿಯೆ—ಕೋಟಿ—
ಕನ್ನೆ ಧರಿತ್ರಿಯು ಧಾರೆಯನೆರೆಯೆ ||
ಅನ್ನದಾನಕೆ ಇನ್ನು ಸರಿಯೆ—ನಮ್ಮ—
ಚೆನ್ನ ಪುರಂದರವಿಠಲನೊಳ್ ಬೆರೆಯೆ || ೩ ||

## ೧೨೦

ರಾಗ – ಭೈರವಿ   ತಾಳ – ಅಟ

[೧]ಎಂದಪ್ಪಿಕೊಂಬೆ—ರಂಗಯ್ಯ ನಿನ್ನ |
ಎಂದಪ್ಪಿಕೊಂಬೆ || ಪ ||
ಎಂದಪ್ಪಿಕೊಂಬೆ ನಾನೆಂದು ಮುದ್ದಾಡುವೆ |
ಎಂದಿಗೆ ಸವಿಮಾತನಾಡಿ ನಾ ದಣಿವನೊ || ಅ. ಪ ||

ಅರಳೆಲೆಮಾಗಾಯಿ ಕೊರಳಪದಕಸರ |
ತರಳರನೊಡಗೂಡಿ ಬೆಣ್ಣೆಯ ಮೆಲುವನ || ೧ ||

ಅಂದುಗೆ ಪಾಯ್ಪಟ್ಟಗೆಜ್ಜೆ ಘಿಲುಘಿಲುಕೆನೆ |
ಚೆಂದದಿ ಕುಣಿವ ಮುಕುಂದನ ಚರಣವ || ೨ ||

ಹೊನ್ನಿನ ಉಡುದಾರ[೨]ರನ್ನದ ಚೌಕುಳಿ |
ಚಿನ್ನದುಂಗುರವಿಟ್ಟ ಜಾಹ್ನವಿಜನಕನ || ೩ ||

ಅಪ್ಪಣ್ಣ ಭಾಗವತನರೂಪವು ತಾನಾಗಿ |
ತುಪ್ಪದಬೀದಿಗೆ ತಂದ ವಿಟ್ಠಲನ || ೪ ||

ಪರಿಪರಿ ಭಕುತರ ಮರೆಯುದೆ ಸಲಹುವ |
ಪುರಂದರವಿಠಲನ ಸಿರಿಪಾದಪದುಮವ || ೫ ||

---

೧ ಅ (೧) ಆ (ii) ಝ (ಹ೧೦) ಶ್ರೀ ಪ್ರತಿಗಳಿಂದ ಆರಿಸಿದೆ.
೨ ರನ್ನದ [illegible] (ಅ ii).

೧೨೧

ರಾಗ–ಕಾಂಬೋದಿ ತಾಳ–ಝಂಪೆ

[೧]ಕನಕದಾಸನಮೇಲೆ ದಯಮಾಡಲು ವ್ಯಾಸ-
ಮುನಿಯು ಮತದವರೆಲ್ಲ ದೂರಿಕೊಂಬುವರು ‖ ಪ ‖

ಹರಿದಿವಸದಲ್ಲಿವರ ಪರೀಕ್ಷಿಸಲುಬೇಕೆಂದು ।
ಕರೆದು ವಿದ್ವಾಂಸರನು ಕನಕನನು ಬಿಡದೆ ‖
ಕರದಲ್ಲಿ ಕದಳಿಯ ಫಲಗಳನು ಇತ್ತು ನಿಂ-
ದಿರದೆ ಏಕಾಂತದಲಿ ಮೆಲುವುದೆಂದೆನಲು ‖ ೧ ‖

ಊರನ್ನು ಬಿಟ್ಟು ಬಲುದೂರದಲಿ ಪೋಗಿತಾವ್ ।
ಬೇರೆ ಬೇರೆಯೆ ಕುಳಿತು ವಿದ್ವಾಂಸರು ‖
ಆರು ಇಲ್ಲದ ಬಳಿಯೆ ಮೆದ್ದೆವೆಂದರೆ ಕನಕ ।
ತೋರದೆನಗೇ ಕಾಂತವೆನುತ ಪೇಳಿದನು ‖ ೨ ‖

ಶ್ರುತ್ಯಾದಿ ಪೃಥ್ವ್ಯಾದಿ ಶಬ್ದಾದಿ ವಾಗಾದಿ ।
ತತ್ತ್ವಶರೀತೆರದಿ ಒಳಗೆ ಹೊರಗೆ ‖
ಎತ್ತ ನೋಡಿದರು ಹರಿ ಸತ್ಯವಾಗಿರಲಾಗಿ ।
ಮತ್ತೆ ಮೆಲ್ಲುವುದೆಲ್ಲಿ ಎನುತ ಪೇಳಿದನು ‖ ೩ ‖

ಮಾಣಿಕವು ಕೋಡಗನ ಕೈಯಲ್ಲಿ ಇದ್ದಂತೆ ।
ಕೋಣನಿದಿರಲಿ ಕಿನ್ನರಿಯ ಮೀಟಿದಂತೆ ‖
ವೇಣುಸ್ವರವನು ಬಧಿರ ಸವಿಮಾಡಿ ಕೇಳ್ದಂತೆ ।
ಕಾಣದವನಿಗೆ ಕನ್ನಡಿಯ ತೋರಿದಂತೆ ‖ ೪ ‖

ತಮ್ಮ ಕರವನು ಪಿಡಿದು ಬ್ರಾಹ್ಮಣರ ಕೇಳೆ-ತಮ
ತಮಗೆ ತೋರಿದ ತೆರದಿ ಪೇಳುತಿರಲು ‖
ಗಮ್ಮನೆ ಕನಕ ಸಿರಿ ವಾಸುದೇವನೆ ಪರ ।
ಬೊಮ್ಮಪುರಂದರ ವಿಠಲನೆನುತ ಸಾರಿದನು ‖ ೫ ‖

---

೧ ಖ ಪ್ರತಿಯಿಂದ ತೆಗೆದುಕೊಂಡಿದೆ.

೨ ಓ ಪ್ರತಿಗಳಲ್ಲಿ ಎರಡು ನುಡಿಗಳು ಹೆಚ್ಚಾಗಿವೆ.

## ೧೨೨

ರಾಗ – ಭೈರವಿ ತಾಳ - ಆದಿ

[1]ಚಿತ್ತೈಸಿದ ವ್ಯಾಸರಾಯ |
ಚಿತ್ತಜನಯ್ಯನ ಬಳಿಗೆ || ಪ ||

ಮುತ್ತಿ ಮುತ್ತೈದೆಯರೆಲ್ಲ
ಎತ್ತೆ ರತುನದಾರತಿಯ || ಅ ಪ ||

ಹೇಮಪಿಡಿಗಳುಳ್ಳಂತಹ |
ಚಾಮರಂಗಳನು ಪಿಡಿದು ||
ಕಾಮಿನಿ ಮಣಿಯರು ಕೆಲರು |
ಸ್ವಾಮಿಯೆಂದು ಬೀಸುತಿರೆ || ೧ ||

ಹಾಟಕದ ಬೆತ್ತನೂರು |
ಸಾಟಿಯಿಲ್ಲದಲೆ ಪಿಡಿದು ||
ನೀಟಾದ ಓಲಗದವರ |
ಕೂಟಗಳ ಮಧ್ಯದಲಿ || ೨ ||

ಸಾಧುವಿಪ್ರಜನಂಗಳು |
ವೇಧಘೋಷ ಮಾಡುತಿರೆ ||
ಮೋದದಿಂದ ಗೋವಿಂದನ |
ಸಾಧನ ಮಾರ್ಗವ ಪಿಡಿದು || ೩ ||

ಭೇರಿ ತುತ್ತೂರಿ ಮೃದಂಗ |
ಮೌರಿ ಚಾರುವಾದ್ಯಂಗಳು ||
ಬಾರಿಬಾರಿಗೆ ಹೊಡೆಯೆ |
ನಾರದರತಾಕೂಡಿಯೆ || ೪ ||

ಅರವಿಂದಾಸನನಯ್ಯ |
ಪುರಂದರವಿಟ್ಠಲನು ||
ಸಿರಿಸಹಿತದಿ ಬಂದು |
ಕರಪಿಡಿದೆತ್ತಿದ್ದು ಕಂಡೆ || ೫ ||

---

[1] ಘ (೧) ಪ್ರತಿಯಿಂದ ತೆಗೆದುಕೊಂಡಿದೆ.

೧೨೩

ಸುಳಾದಿ

ಧ್ರುವತಾಳ

೧ವರಮಣಿಗಳ ಕೆತ್ತಿಸಿದ ಮುಕುಟದ ಚಾರು ।
ತಿರುಮಲಗಿರಿಯ ತಿಮ್ಮರಾಯನ ಕಂಡೆನಾ ।
ಪೆರೆಯನೊಸಲತಿಲಕದ ದಿವ್ಯಮಧುಕರ ।
ಕುರುಳುಭ್ರೂಲತೆಯ ಶ್ರೀಕಾರದ ಕರ್ಣಯುಗಳ ।
ಅರಳಿದ ಅರುಣ ಕಮಲದ ಆರಳನಯನದ ।
ವರದಂತಪಂಕ್ತಿಯೆಸೆವ ಅಧರ ಚುಬುಕಾಗ್ರ ।
ಸ್ಫುರಿತ ಕಂಬು ಕಂಠ ತ್ರಿರೇಖೆ ಚತುರ್ಭುಜ ।
ಅರಶಂಖಕಟಿ ಶೋಭಾಭಯಹಸ್ತವ ಕಂಡೆ ।
ತರಣಿಯನಂತಕಿರಣ ಜಾನುಜಂಘೆಯ ।
ಕಿರುಗೆಜ್ಜೆ ಎರಡು ಪಾದಾಂಗುಳಿಯ ನಖದ ।
ವರವಜ್ರಾಂಕುಶ ಧ್ವಜರೇಖೆಯಿಂದೊಪ್ಪುವ ।
ಚರಣವಾಂದಳಿರ ಕಂಡೆ ಒಲವಿಂದ ।
ಪರಮಪುರುಷ ಗುಣಾತ್ಮ ನೀಲಮೇಘಶ್ಯಾಮ ।
ಸಿರಿಯರಸು ಪುರಂದರವಿಠಲ ರಾಯನಕಂಡೆ ॥ ೧ ॥

ಮಟ್ಟತಾಳ

ಅಂದುಗೆ ಕಡೆಯ ಪೆಂಡೆಯವು ಮೆರೆವ ।
ಹೊಂದಿದ ಕಾಂಚೀಧಾಮವ ಕಂಡೆ ನಾ ।
ಕಂಡು ಪೇಳಲೇನು ಜಾಂಬುನದ ಸಟ ।
ಪೊಂದಿದ ಚಿನ್ನದ ಸೂತ್ರವಕಂಡೆ ನಾ ।
ಕುಂದದೆ ಹೊಳೆವ ಕೌಸ್ತುಭ ವೈಜಯಂತಿಯನ್ನು ಕಂಡೆ ನಾ ।
ಇಂದುವಿನಂದದಿ ಮೆರೆವ ಕುಂಡಲ ।
ಬಂಧುರಮಹಿಮ ಭಾವುರಿ ಕೀರ್ತಿಯಾ– ।

೩ ೨೬-(ಮ.ಪು.) ಶ್ರೀಪು.ದ ಸಾಹಿತ್ಯ ೭.

ಸಂದದಿ ನಿರುಪಮ ತಿರುವೆಂಗಳಪ್ಪ ಪು-
ರಂದರವಿಠಲ ರಾಯನ ಕಂಡೆ ನಾ || ೨ ||

ತ್ರಿವಿಡೆತಾಳ

ತಮನಕೊಂದವನೀತ ಮಂದರೋದ್ಧರನೀತ |
ಭೂಮಿಯನೆಗಹಿ ತಂದವನೀತ |
ಕುಮತಿರಕ್ಕಸರನು ಸೀಳೆ ಬಲಿಯಬೇಡಿದನೀತ |
ಜಮದಗ್ನಿ ಭವ ಪರಶುನಾಥನೀತ |
ಸುಮನಸೇಂದ್ರನ ತನೂಭವಸಖನೀತ |
ಚಮತ್ಕೃತಿಯಿಂದ ಮೂರೂರು ಗೆಲಿದನೀತ |
ಅಮಲ ಕಲ್ಕಿ ಮೊದಲಾದ ಅನಂತಾವತಾರನೀತ |
ಕಮಲೇಶ ಪುರಂದರವಿಠಲನೀತ || ೩ ||

ಅಟತಾಳ

ಮಡುವಿನೊಳಗೆ ಗಜರಾಜನ ಕಾಯ್ದನೀತ |
ಮಡದಿ ದ್ರೌಪದಿಯಭಿಮಾನ ರಕ್ಷಕನೀತ |
ಮಿಡುಕುವಜಾಮಿಳನ ಪಾಶ ಪರಿಹರಿಸಿ |
ಕಡುಮೆಚ್ಚಿಧ್ರುವಗೆ ಉನ್ನತಪದವಿತ್ತನೀತ |
ಕಡಲಶಯನನೀತ ಕರುಣಾಂಬುಧಿಯೀತ |
ಸಡಗರದ ಪುರಂದರವಿಟ್ಠಲನೀತ || ೪ ||

ಆದಿತಾಳ

ಶರಣು ಸಕಲ ಜಗತ್ಪಾಲಕದೇವ |
ಶರಣು ವಿರಿಂಚ್ಯಾದಿ ವಂದಿತಪಾದ |
ಶರಣು ಮುನಿಹೃತ್ಕುಮುದ ಚಂದ್ರ |
ಪರಿಪೂರ್ಣಗುಣನಿಧಿ ಪರಮಾನಂದ |
ಪುರಂದರವಿಠಲ ಪೂರ್ಣಕಾಮ || ೫ ||

ಜತೆ

ಸಿರಿಗಿದೆವೈಕುಂಠವೆಂದು ತೋರುವಹಸ್ತ |
ತಿರುವೆಂಗಳಪ್ಪ ಶ್ರೀಪುರಂದರವಿಠಲ ||

೧೨೪

ರಾಗ – ರೇಗುಪ್ತಿ ತಾಳ – ತ್ರಿಪುಟೆ

[೧]ನಾರಿರನ್ನೆಯು ಕಂಡೆಯಾ || ಪ ||

ವಾರಿಜನಾಭ ದೇವರದೇವ ಸುಗುಣ ಬೇ–
ಲೂರ ಚೆನ್ನಿಗರಾಯನ ಎನ್ನಪ್ರಿಯನ || ಅ. ಪ ||

ಹೊಸಬಗೆ ವಾಟದ ಹೊಳೆವಕಿರೀಟದ ।
ಎಸೆವ ಮಾಣಿಕದೋಲೆಯ ॥
ಶಶಿಕಾಂತಕಧಿಕವೆಂದೆನಿಪ ಮೂಗುತಿಯಿಟ್ಟ ।
ಬಿಸಜಾಕ್ಷ ಚೆನ್ನಿಗರಾಯನ ಎನ್ನಪ್ರಿಯನ || ೧ ||

ತಿದ್ದಿದ ಕಸ್ತೂರಿ ತಿಲಕದಿಂದೊಪ್ಪುವ ।
ಮುದ್ದು ಮೊಗದ ಸೊಂಪಿನ ॥
ಹೊದ್ದಿದ ಕುಂಕುಮರೇಖೆ ಪೀತಾಂಬರ ।
ಪೊದೆದ ಚೆನ್ನಿಗರಾಯನ ಎನ್ನಪ್ರಿಯನ || ೨ ||

ಮಘಮಘಿಸುವ ಜಾಜಿಮಲ್ಲಿಗೆ ಸಂಪಿಗೆ ।
ಬಗೆಬಗೆ ಪೂವಾಲೆಯ ॥
ಆಗರುಚಂದನ ಗಂಧದನುಲೇಪವ ಗೈಯ್ದ ।
ಜಗವಮೋಹಿಪ ಚೆನ್ನನ ಎನ್ನಪ್ರಿಯನ || ೩ ||

ದನುಜರಗಂಡನೆಂದೆನಿಪ ಪೆಂಡೆಯವಿಟ್ಟು ।
ಮಿನುಗುವ ಪೊಂಗೆಜ್ಜೆಯ ॥
ಘನ ಶಂಖಚಕ್ರಗದಾಂಕಿತನಾದನ ।
ಅನುಪಮ ಚೆನ್ನಿಗರಾಯನ ಎನ್ನಪ್ರಿಯನ || ೪ ||

ಲೀಲೆಯಿಂದಲಿ ಬಂದು ವೇಲಾಪುರದಿ ನಿಂತ ।
ಪಾಲುಗಡಲಶಾಯಿಯಾದನ ॥

---

[೧] ಪ್ರ. ಕಾ. ಸಂ.

ಪಾಲಕ ಇಂದು ಶ್ರೀಪುರಂದರವಿಟ್ಠಲ ।
ಬೇಲೂರ ಚೆನ್ನಿಗರಾಯನ ಎನ್ನಪ್ರಿಯನ || ೪ ||

೧೨೪

ರಾಗ – ಮುಖಾರಿ ತಾಳ – ಅಟ

[1]ವಾಸುದೇವನ ನಾಮಾವಳಿಯ ಕ್ಲುಪ್ತಿಯನು ।
ವ್ಯಾಸರಾಯರಪರ್ಯಂತ ವರ್ಣಿಸಿದೆ ನಾನು || ಪ ||

ಕೇದಾರ ರಾಮೇಶ್ವರ ಕೇರಳದ ಭೂತಳದ ।
ಪಾದಾರವಿಂದ ತೀರ್ಥ ಪ್ರತಿಕ್ಷೇತ್ರವ ||
ಆದರದಿ ಲಕ್ಷ ಇಪ್ಪತ್ತೈದು ಸಾಸಿರಕೃತಿಯ ।
ವೇದಶಾಸ್ತ್ರಪುರಾಣ ಸಮ್ಮತದಲಿ || ೧ ||

ಸುಳಾದಿ ಅರವತ್ತುನಾಲ್ಕು ಸಾಸಿರವಾಗಿ ।
ಬಲು ನಾಮಾವಳಿಯು ಮೂವತ್ತೈದು ಸಾಸಿರವಾಗಿ ||
ನಲಿದು ಶ್ವೇತದ್ವೀಪಾನಂತಾಸನವೈಕುಂಠ ।
ಸಲೆ ಶೇಷನ ಮಹಿಮೆಯ ಬಣ್ಣಿಸಿದೆನು || ೨ ||

ಬ್ರಹ್ಮಲೋಕ ಕೈಲಾಸ ಅಷ್ಟದಿಕುಪಾಲಕರ ।
ಪೆರ್ಮೆಯಿಂದೈವತ್ತುಸಾಸಿರ ಪೇಳಿದೆನು ||
ಸಮ್ಮತಹಲವು ಕಥೆಸಾರ ತೊಂಬತ್ತುಸಾಸಿರವು ।
ಒಮ್ಮನದಿ ಪೇಳಿದೆ ಒದಗಿಜನರೆಲ್ಲ ಕೇಳಿ || ೩ ||

ಆಹ್ನಿಕಗುಣ ಜನ್ಮಾಷ್ಟಮಿ ಏಕಾದಶಿ ।
ನಿರ್ಣಯವ ಶ್ರುತಿಸಹಿತ ವರ್ಣಿಸಿದೆನು ||
ಅನಘ ಅಗಣಿತಮೂರ್ತಿ ಗಂಡಿಕೆಶಿಲೆ ।
ಯನ್ನು ಕಲ್ಯಾಣದೇಶ ಅರವತ್ತುಸಾಸಿರದಿ || ೪ ||

೧ ಮ ಪ್ರತಿಯಿಂದ ಆರಿಸಿಕೊಂಡಿದೆ.

ಮಧ್ವರಾಯರ ಮಹಾಗುರು ಪರಂಪರೆ ಪ್ರ-
ಸಿದ್ಧ ವ್ಯಾಸರಾಯರ ಪರಿಯಂತವು ||
ಶುದ್ಧ ತಂತ್ರಸಾರೋಕ್ತ ನೇಮ ತಾರತಮ್ಯ |
ಉದ್ಧರಿಸಿ ನಾ ನಿಮಗೆ ಉರ್ವಿಯಲಿ ಪೇಳಿಸಿದೆ || ೫ ||

ಅವರವರ ಮೂರ್ತಿಧ್ಯಾನ ಅವರವರ ಕೀರ್ತಿಮಾನ |
ವಿವರದಲಿ ನಾ ನಿಮಗೆ ವಿಸ್ತರಸಿದೆ ||
ಹವಣದಿಂದಿಪ್ಪತ್ತೈದು ಸಾಸಿರಕೃತಿಯು |
ಭುವನದಲಿ ಪೇಳಿದೆನು ಬುಧಜನರೆಲ್ಲ ಕೇಳಿ || ೬ ||

ಇಂತು ನಾಲ್ಕುಲಕ್ಷ ಎಪ್ಪತ್ತೊಂಬತ್ತು ಸಾಸಿರಕೃತಿಯು |
ಕಂತುಜನಕನನಾಮ ಘನಮಹಿಮೆಯು ||
ಸಂತಸದಿ ಶ್ರುತಿಸ್ಮೃತಿ ಪುರಾಣ ಸಮ್ಮತದಿ ಶ್ರೀ-
ಮಂತ ಪುರಂದರವಿಠಲ ವ್ಯಾಸಮುನಿಗೆ ಪೇಳಿಸಿದ || ೭ ||


ಪುರಂದರ-ದಾಸರು ಸಂದರ್ಶಿಸಿದ
ತೀರ್ಥ-ಕ್ಷೇತ್ರಗಳು.
ಸಿಂಧು ನದಿ
ಬದರಿ
ಹರಿದ್ವಾರ
ಕುರುಕ್ಷೇತ್ರ
ಹಸ್ತಿನಾವತಿ
ವೃಂದಾವನ
ಗೋಕುಲ
ಮಥುರಾ
ಬ್ರಹ್ಮಪುತ್ರಾ ನದಿ
ಅಯೋಧ್ಯಾ
ಗಂಗಾ ನದಿ
ಪ್ರಯಾಗ
ವಾರಣಾಶಿ
ಗಯಾ
ದ್ವಾರಕಾ
ನರ್ಮದಾ ನದಿ
ತಾಪೀ ನದಿ
ಪುರುಷೋತ್ತಮಕ್ಷೇತ್ರ
ಪಂಢರಪುರ
ತೊರವಿ
ಕೃಷ್ಣಾ ನದಿ
ಗದಗು
ವಿಮಲಕಾಪುರ
ಗೋಕರ್ಣ
ಸೋದೆ
ಪಂಪಾಕ್ಷೇತ್ರ
ಹೊನ್ನಹೊಳೆ
ಕೂಡ್ಲಿ
ಅಹಗಿರಿ
ಹೊನ್ನೂರು
ಅಹೋಬಲ
ರೌಪ್ಯಪುರ (ಉಡುಪಿ)
ಬೇಲೂರು
ದಕ್ಷಿಣದ್ವಾರಕೆ
ತಿರುಪತಿ
ಅಲುಮೇಲುಮಂಗ
(ಪದ್ಮಾವತಿ)
ಮೇಲುಕೋಟೆ
ಹಸ್ತಿಗಿರಿ
ಶ್ರೀರಂಗಪಟ್ಟಣ
ಶ್ರೀಮುಷ್ಣ
ಕಾವೇರಿ ನದಿ
ಕುಂಭಪುರ
ಶ್ರೀರಂಗ
ಮನ್ನಾರು
50 0 150 200 300
ಇಂಗ್ಲಿಶ್ ಮೈಲುಗಳು
ರಾಮೇಶ್ವರ
ಲಂಕಾ
ಕೊಂಚೆಯೂರು?
ಬಬ್ಬೂರು?
K. Upadhye
1965

# ೮ ಮಂಗಲಮ್

## ೧೨೬

ರಾಗ – ತೋಡಿ ತಾಳ – ಅಟ

[1]ಫಲಹಾರವನೆ ಮಾಡೊ ಪರಮಪುರುಷನೆ ।
ಲಲನೆ ಲಕ್ಷ್ಮೀಸಹ ಸಕಲ ಸುರರೊಡೆಯ ॥ ಪ ॥

ಕಬ್ಬು ಕದಳಿಫಲ ಕೊಬ್ಬರಿ ಖರ್ಜೂರ ।
ಕೊಬ್ಬಿದ ದ್ರಾಕ್ಷಿ ಹಲಸು ತೆಂಗು ॥
ಶುಭ್ರ ಸಕ್ಕರೆ ಲಿಂಬೆ ಮಾವು ಕಿತ್ತಳೆಗಳು ।
ಇಬ್ಬದಿಯಲಿ ಇಟ್ಟ ಶೇಷ ಫಲಂಗಳ ॥ ೧ ॥

ನೆನೆಗಡಲಿಬೇಳೆ ಲಡ್ಡಿಗೆ ಮೂಗದಾಳು ।
ಪಾನಕ ಶುಂಠಿಬೆಲ್ಲ ಯಾಲಕ್ಕಿಯು ॥
ಗೊನೆಬಾಳೆಹಣ್ಣು ಘೃತವು ನೊರೆಹಾಲು ।
ಕನಕಪಾತ್ರೆಯೊಳಿಟ್ಟು ಸಕಲ ಪದಾರ್ಥವ ॥ ೨ ॥

ಧ್ಯಾನಪೂರ್ವಕದಿಂದ ಮಾನಸಪೂಜೆಯ ।
ಪನ್ನೀರನೆ ಭಕುತವತ್ಸಲಗೆ ।
ಜಾನಕಿರಮಣಗೆ ಷೋಡಶೋಪಚಾರ ।
ದಾನವಾಂತಕ ಸಿರಿಪುರಂದರವಿಠಲ ॥ ೩ ॥

## ೧೨೭

ರಾಗ – ಭೈರವಿ ತಾಳ – ಝಂಪೆ

[2]ಜಯಮಂಗಳಂ ನಿತ್ಯ ಶುಭಮಂಗಳಂ ॥ ಪ ॥

ದುರುಳತಮಘೇದವನುಕದ್ದು ಪಾತಾಳದಲಿ ।
ಇರಲವನ ಕೊಂದು ವೇದಾವಳಿಗಳ ॥

---

೧ ಅ (ಬಿಡಿ ೫) ಪ್ರತಿಯಲ್ಲಿ ಸಿಕ್ಕಿದೆ.
೨ ಇ (ಮುದ್ರಿತ) ಪ್ರತಿಯಲ್ಲಿ ಸಿಕ್ಕಿದೆ.

ಸರಸಿಜೋದ್ಭವಗಿತ್ತು ಸುರಮುನಿಗಳನ್ನೆಲ್ಲ ।
ಪೊರೆದ ಶ್ರೀ ಮತ್ಸ್ಯಾವತಾರಿ ಹರಿಗೆ ॥ ೧ ॥

ಸುರರು ದೈತ್ಯರಕೂಡಿ ಸಿಂಧುವನುಮಥಿಸುತಿರೆ ।
ಗಿರಿಮುಳುಗಿ ಪಾತಾಳಕಿಳಿದು ಪೋಗೆ ॥
ಭರದಿಂದ ತಾಬಂದು ಗಿರಿಯ ಬೆನ್ನೊಳಗಾಂತು ।
ಸುರರ ಸಂರಕ್ಷಿಸಿದ ಶ್ರೀಕೂರ್ಮ ಹರಿಗೆ ॥ ೨ ॥

ಭೂಮಿಯನು ಹಿರಣ್ಯಾಕ್ಷಕನೆಂಬ ದೈತ್ಯನು ಸುತ್ತಿ ।
ಭೀಮವಿಕ್ರಮನು ಪಾತಾಳಕೊಯ್ಯೆ ॥
ತಾಮರಸಸಂಭವನು ಬಿನ್ನೈಸಲವನಳಿದು ।
ಭೂಮಿಯನು ತಂದ ಶ್ರೀ ಭೂವರಾಹನಿಗೆ ॥ ೩ ॥

ಪರಮಭಾಗವತ ಪ್ರಹ್ಲಾದನ ಹಿರಣ್ಯಕನು ।
ಪರಿಪರಿಯ ಬಾಧೆಯಿಂದಲಿ ಪೀಡಿಸೆ ॥
ಕರುಣಾಳು ಕೋಪದಲಿ ದೈತ್ಯನುದರವ ಬಗೆದ ।
ಶರಣ ರಕ್ಷಕನಾದ ಶ್ರೀ ನರಸಿಂಹಗೆ ॥ ೪ ॥

ಬಲಿಚಕ್ರವರ್ತಿ ಭೂಮಿಯ ಧಾರೆಯೆರೆಯಲು ।
ಇಳೆಯನಳೆದವನ ಸುತಳಕೆ ಕಳುಹಿದ ॥
ಸಿಲುಕಿಭಕುತಿಗೆ ಮೆಚ್ಚಿ ಬಾಗಿಲವಕಾಯ್ದ ಶ್ರೀ ।
ಬಲವಂತ ಹರಿ ವಾಮನಾವತಾರನಿಗೆ ॥ ೫ ॥

ಕಾರ್ತವೀರ್ಯಾರ್ಜುನನ ಸಂಹರಿಸಿ ಮುದದಿಂದ ।
ಕೀರ್ತಿಯನು ಲೋಕದೊಳು ವಿಸ್ತರಿಸಿದೆ ॥
ಪಾರ್ಥಿವಾಂತಕ ಬಾಹುಬಲದಿ ಪರಿಪೂರ್ಣಗೆ ।
ಆರ್ತಬಾಂಧವಗೆ ಭಾರ್ಗವ ರಾಮಗೆ ॥ ೬ ॥

ದಶರಥನ ಮನೆಯಲುದ್ಭವಿಸಿ ಆ ರಾವಣನ ।
[illegible] ॥

ವಸುಧಾಧಿಪತ್ಯವನು ಲಂಕೆಯೊಳಗವಗಿತ್ತ ।
ಅಸಮವಿಕ್ರಮ ರಾಮಚಂದ್ರ ಹರಿಗೆ ॥ ೭ ॥

ಯದುಕುಲದಿ ತಾ ಬಂದು ಕೊಂದು ಕಂಸನನಂದು ।
ಮುದದಿಂದ ಪಾಂಡವರನುದ್ಧರಿಸಿದ ॥
ಒದಗೆ ಕೌರವಬಲವ ಸಂಹರಿಸಿ ಪದವಿತ್ತು ।
ಮುದದಿ ಮನ್ನಿಸಿದ ಶ್ರೀಕೃಷ್ಣ ಹರಿಗೆ ॥ ೮ ॥

ತ್ರಿಪುರದಮರಾರಿಗಳ ಸತಿಯರ ಪತಿವ್ರತವ ।
ಅಪಹರಿಸಿ ದಿವ್ಯ ಮೋಹನರೂಪದಿ ॥
ತ್ರಿಪುರಹರಗಂಬಾಗಿ ಶಿವಗೆ ಕೀರ್ತಿಯನಿತ್ತ ।
ಅಪರಮಿತ ಬುದ್ಧಾವತಾರ ಹರಿಗೆ ॥ ೯ ॥

ಕಲಿಯುಗದ ಕಡೆಯಲ್ಲಿ ಖಳನೃಪರನೆಲ್ಲರನು ।
ತುಳಿಸಿ ಕುದುರೆಯ ಖುರದ ಪುಟಗಳಿಂದ ॥
ಸುಲಭದಿಂ ನಡಸುತೀಕೃತಯುಗದ ಧರ್ಮವನು ।
ಒಲಿದಂಥ ಕಲ್ಕಿಯವತಾರ ಹರಿಗೆ ॥ ೧೦ ॥

ಮಂಗಳಪದಂಗಳನು ಭಕ್ತಿಯಲಿ ಮೋಹನತ- ।
ರಾಂಗನೆಯರೆಲ್ಲ ರಾಗದಿ ಪಾಡುತ ॥
ಮಂಗಳಾತ್ಮಕಗೆ ಸಿರಿಪುರಂದರವಿಟ್ಠಲಗೆ ।
ಅಂಗನೆಯರೆಲ್ಲ ಆರತಿಯೆತ್ತಿರೆ ॥ ೧೧ ॥

**ಸಂಪೂರ್ಣಮ್**



# ೧ ಶ್ರೀಹರಿಯ ಸರ್ವೋತ್ತಮತ್ವ

## ೧ನೆಯ ಹಾಡು

ಈ ಸುಳಾದಿಯಲ್ಲಿ ಶ್ರೀಹರಿಯ ಸರ್ವೋತ್ತಮತ್ವವನ್ನು ವಿವರಿಸಲಾಗಿದೆ. ಎಲ್ಲ ದೇವತೆಗಳಲ್ಲಿಯೂ ಆ ಆ ದೇವತೆಗಳ ನಾಮದಿಂದ ವಾಸವಾಗಿದ್ದು ಅವರವರಿಗುಚಿತವಾದ ಕ್ರಿಯೆಗಳನ್ನು ಶ್ರೀಹರಿಯೆ ಮಾಡಿಸುತ್ತಾನೆ ಎಂಬ ವಿವರಣೆಯೊಂದಿಗೆ ಈ ಸುಳಾದಿ ಪ್ರಾರಂಭವಾಗಿದೆ.

೧ ಬೊಮ್ಮ ಮೂರುತಿ = ಬ್ರಹ್ಮನಾಮಕ ಶ್ರೀಹರಿ
ಸ್ಥಾವರ ಮೂರುತಿ = ಪ್ರತಿಮೆಗಳು
ಜಂಗಮ ಮೂರುತಿ = ವಿಷ್ಣುಭಕ್ತರು
ಶ್ರೀ ಮೂರುತಿ = ಐಶ್ವರ್ಯದಿಂದ ಕೂಡಿದ ಮೂರುತಿ
೨ ಮಂದಾಕಿನಿ = ಆಕಾಶಗಂಗೆ
೩ ಲಯ = ಲಯಕಾಲದ ಜಲರಾಶಿ
೪ ಜಗದುದರ = ಜಗತ್ತನ್ನು ಉದರದಲ್ಲಿರಿಸಿಕೊಂಡವ
ಜಗದನ್ಯ = ಜಗತ್ತಿನಿಂದ ಬೇರೆಯಾದವ
೫ ಕಟಾಹ = ಕಡಾಯಿ; ಕೊಪ್ಪರಿಗೆ
ನಾಲ್ಕು ಯುಗಗಳು = ೧ ಪರ್ಯಾಯ
೧೦೦೦ ಪರ್ಯಾಯ = ೧ ಬ್ರಹ್ಮನ ದಿವಸ
೩೬೦ ಬ್ರಹ್ಮನದಿವಸ = ೧ ವರ್ಷ
ಬ್ರಹ್ಮನ ೧ ವರ್ಷ = ವಿಷ್ಣುವಿನ ೧ ದಿವಸ
ಎವೆನೋಟ = ನಿಮಿಷ

## ೨ನೆಯ ಹಾಡು

ಎಲ್ಲವನ್ನೂ ಮಾಡಿ ಮಾಡಿಸುವವನು ಶ್ರೀಹರಿ ಎಂಬುದನ್ನು ಈ ಸುಳಾದಿಯಲ್ಲಿ ಹೇಳಿ ಶ್ರೀಹರಿಯ ಸರ್ವೋತ್ತಮತ್ವ ಪ್ರಸ್ಥಾಪಿಸಿದ್ದಾರೆ. (ಸಂ. ೩ ಪು. ೨೯೦ = ಬೃಹದಾರಣ್ಯಭಾಷ್ಯ)

೧ ಯಸ್ಯಾಜ್ಞಯಾರಚಿತಮಿಂದಿರಯಾ ಸಮೇತಂ |
ಬ್ರಹ್ಮೇಶಪೂರ್ವಕಮಿದಂನತುರಸ್ಯಲೇಶಮ್ |

ಭಾ. ತಾ. ನಿ. ೧।೧೩.

೨ ಪರಂತಪ = ಶತ್ರುನಾಶಕ

೩ ನೃಕಂಠೀರವ = ನೃಸಿಂಹ, ಕಂಬಿ = ಕೋಲು.

ಭಕ್ತನ ಮುಂದೆ ನೃಸಿಂಹ ಸ್ವರೂಪದಲ್ಲಿಯೂ ಹಿಂದೆ ಶ್ರೀ ಕೃಷ್ಣ ಸ್ವರೂಪದಲ್ಲಿಯೂ ಎಡಬಲದಲ್ಲಿ ರಾಮಕೃಷ್ಣ ಸ್ವರೂಪದಲ್ಲಿಯೂ ಶ್ರೀಹರಿಯು ಸದಾ ಜಾಗೃತನಾಗಿದ್ದು ಕಾವಲು ಮಾಡುವನೆಂಬ ಈ ಪರಂಪರೆ ಕೆಳಗಿನ ಶ್ಲೋಕದಲ್ಲಿ ಇದೆ.

ಅಗ್ರತೋ ನರಸಿಂಹಶ್ಚ ಪೃಷ್ಠತೋ ಗೋಪಿನಂದನಃ ।
ಉಭಯಃ ಪಾರ್ಶ್ವಯೋರಾಸ್ತಾಂ ಸಶರೌ ರಾಮಲಕ್ಷ್ಮಣೌ ॥

೪ ಆತಂಕ = ಅಡ್ಡಿ, ತೊಂಡ = ಆಳು, ತೊತ್ತತೊಂಡರವನು = ಊಳಿಗದಾಳು, ನಿನ್ನಂಥವನು ನಾನಾಗಬೇಕು ಎಂದು ಎಂದೂ ಕಾಮಿಸೆ = ಜೀವಪರಮಾತ್ಮನಿಂದ ಭಿನ್ನವೆಂಬ ಮಾತನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ.

೬ ಇದರ ಮೂಲಕಥೆ ನಮಗೆ ದೊರೆತಿಲ್ಲವೆಂಬುದನ್ನು ಪೂಜಾತತ್ತ್ವದಲ್ಲಿ ತಿಳಿಸಿದ್ದೇವೆ.

೭ ತ್ರಿಕಾಲದಲ್ಲಿಯೂ ಹರಿಸರ್ವೋತ್ತಮನೆಂಬ ಮಾತು ಸತ್ಯ.

## ೩ನೆಯ ಹಾಡು

ಶ್ರೀಹರಿಯು ಪರಿಪೂರ್ಣನೆಂಬುದನ್ನು ಈ ಉಗಾಭೋಗದಲ್ಲಿ ಹೇಳಿದೆ:

ಪೃಥಿವ್ಯಾದಿ ಪ್ರಕೃತ್ಯಂತಂ ಭೂತಂ ಭವ್ಯಂ ಭವಚ್ಚಯತ್ |
ವಿಷ್ಣುರೇಕೋ ಬಿಭರ್ತೀದಂ ನಾನ್ಯಸ್ತಸ್ಮಾತ್ ಕ್ಷಮೋ ಧೃತೌ ||
ಕರ್ತಾಸರ್ವಸ್ಯ ವೈವಿಷ್ಣುರೇಕ ಏವ ನ ಸಂಶಯಃ |
ಇತರೇಷಾಂತು ಸತ್ತಾದ್ಯಾಃ ಯುತಃ ಏವ ತದಾಜ್ಞಯಾ || (ಸ್ಕಂದ)

(ಭಾಷ್ಯೇ(ದಿ)ಹೃತ ಭವಿಷ್ಯತ್ ಪುರಾಣ ೨೩)

### ೪ನೆಯ ಹಾಡು

ಶ್ರೀಹರಿಯು ಸ್ವಯಂಪರಿಪೂರ್ಣ ಸ್ವರಮಣನೆಂಬುದನ್ನು ಈ ಉಗಾ-ಭೋಗವು ವಿವರಿಸುತ್ತಿದೆ.

### ೫ನೆಯ ಹಾಡು

ವ್ಯಾಹೃತಿ = ವ್ಯಾಹೃತಿಯು ೩, ೬, ೭ ಅಕ್ಷರಗಳಿಂದ ಆಗುವುದೆಂಬ ಪರಂಪರೆಯಿದೆ. ೧. (ಮೂರು ಅಕ್ಷರ) ಓಂ ಭೂಃ ಭುವಃಸ್ವಃ ( ಸ್ವಮ್ ) ೨. (ಏಳು ಅಕ್ಷರ) ಭೂ, ಭುವಸ್, ಸ್ವರ್, ಮಹಸ್, ಜನಸ್, ತಪಸ್, ಸತ್ಯಂ. ಆರು ಅಕ್ಷರವುಳ್ಳ ವ್ಯಾಹೃತಿ=ಇದು ನಮಗೆ ದೊರೆತಿಲ್ಲ. ಇಪ್ಪತ್ತು ನಾಲ್ಕು ಅಕ್ಷರವುಳ್ಳ ಗಾಯತ್ರಿ = ಗಾಯತ್ರಿಛಂದಸ್ಸಿನಲ್ಲಿ ೮ ಅಕ್ಷರವುಳ್ಳ ಮೂರು ಪಾದಗಳು.

ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ
ಧಿಯೋ ಯೋನಃ ಪ್ರಚೋದಯಾತ್ ॥ ಋಗ್ವೇದ ೩।೬೨।೧೦

ಪುರುಷ ಸೂಕ್ತ = ಸಹಸ್ರ ಶೀರ್ಷಾ ಎಂಬ ಪದದಿಂದ ಸುರುವಾಗಿದೆ. ಋಗ್ವೇದ ೧೦ನೆಯ ಮಂಡಲದ ಸೂಕ್ತ. :ಅಶೇಷ ಗುಣಾಧಾರ = ಸಕಲ ಗುಣ ಪರಿಪೂರ್ಣ (ಸಕಲ ಕಲ್ಯಾಣ ಗುಣೋಪೇತಂ ಬ್ರಹ್ಮ) ಪ್ರತರ್ದನ = ನಾಶಕ = (ವಿಷ್ಣುಸಹಸ್ರನಾಮ) (ಪ್ರತರ್ದನನೆಂಬ ಹೆಸರು ಹೊಂದಿದವ)

### ೬ನೆಯ ಹಾಡು

ಈ ಉಗಾಭೋಗದಲ್ಲಿ ವೈಕುಂಠದ ವರ್ಣನೆ ಇದ್ದು ಇಂಥ ವೈಕುಂಠ ವಾಸಕ್ಕಾಗಿ ನೀಚ ವೃತ್ತಿಯನ್ನು ಬಿಡುವಂತೆ ದಾಸರು ಹೇಳಿದ್ದಾರೆ.

ಅಪ್ರಾಕೃತ = ಪ್ರಕೃತಿಯ ಸಂಬಂಧವಿಲ್ಲದ = ದಿವ್ಯ. (ಕನಕದಾಸರ "ಇಷ್ಟು ದಿನ ಈ ವೈಕುಂಠ" ಹಾಡನ್ನು ನೋಡಿರಿ.)

### ೭ನೆಯ ಹಾಡು

ಅಸುರರ ಬಾಧೆ ಹೆಚ್ಚಿ ಧರ್ಮಗ್ಲಾನಿಯಾದಾಗ ಬ್ರಹ್ಮಾದಿಗಳು ಶ್ವೇತದ್ವೀಪಕ್ಕೆ ಹೋಗಿ ಶ್ರೀಹರಿಯನ್ನು ಪ್ರಾರ್ಥಿಸಿದಾಗ ಅವನು ಅವತಾರಗಳನ್ನು ತಾಳುವನು.

ಶಿಷ್ಟ[illegible] = "ಪರಿತ್ರಾಣಾಯ ಸಾಧೂನಾಂ" (ಭ. ಗೀ.)

## ೮ನೆಯ ಹಾಡು

ದ್ವೈತವೇದಾಂತದಲ್ಲಿ ಶ್ರೀಹರಿ ಮತ್ತು ಮಿಕ್ಕ ದೇವತೆಗಳ ಸಂಬಂಧ ಪರಂಪರೆ ಹೀಗಿದೆ.

೧ (೧) ನಾರಾಯಣ = ಲಕ್ಷ್ಮಿ (೨) ವಾಸುದೇವ = ಮಾಯಾದೇವಿ
ಬ್ರಹ್ಮದೇವ = ವಾಣಿ

(೩) ಪ್ರದ್ಯುಮ್ನ = ಕೃತಿದೇವಿ (೪) ಸಂಕರ್ಷಣ = ಜಯಾ
ವಾಣಿ = ಭಾರತಿ ವಾಯು = ಭಾರತಿ

ಆಕುವರರಿಗೆ- ಅಲ್ಲ = ಬ್ರಹ್ಮದೇವ ಮತ್ತು ವಾಯುದೇವರಿಗೆ ವಾಣಿ ಮತ್ತು ಭಾರತಿಯರು ಹೆಂಡಿರಾದರು. ಕೊಡುಕೊಳೆ = ಆಪ್ತವ್ಯ.

೨ ದಿಬ್ಬಣಿಗರು = ನಿಬ್ಬಣಿಗರು, ಬೀಗರು. ಬಿದ್ದಿನವರು = ಆಮಂತ್ರಿತರು (ಬಿಜ್ಜರು)

೩ (೧) ಬೊಮ್ಮ = ಸರಸ್ವತಿ (೨) ವಾಯು = ಭಾರತಿ
ಶೇಷ = ಉಮೇಶ ಶೇಷ = ಗಿರೀಶ
ಸುಪರ್ಣ = ಮಹೇಂದ್ರ

೪ ಕಾಲ = ಯಮ, ಜಯಾದಿ = ಜಯ ವಿಜಯ ಮುಂ. ಅಳವು = ಸಾಮರ್ಥ್ಯ.

೫ ಪಂಚಮುಖ = ಶಿವ.

೬ ನಿತ್ಯ—ಲಕುಮಿಗೆ = ಪತಿತ್ವೇನ ಶ್ರೀಯೋಪಾಸ್ಯೋ ।
ನಪ್ತೃ = ಮೊಮ್ಮಗ ಬ್ರಹ್ಮಣಾ ಮೇಪಿತೇತಿ ಚ ॥
ನಿತ್ಯಜಾರಭಾವ ಅಪ್ಸರಸರಿಗೆ=

ಉಪಾಸ್ಯಃ ಶ್ವಶುರತ್ವೇನ ದೇವಸ್ತ್ರೀಣಾಂ ಜನಾರ್ದನಃ ।
ಜಾರತ್ವೇನಾಪ್ಸರಸ್ತ್ರೀಣಾಂ ಕಾಸಾಂಚಿದಿತಿಯೋಗ್ಯತಾ ॥
(ಭಾಗವತ-ತಾತ್ಪರ್ಯ ೧೦ । ೨೭)

೭ ಸ್ತುತ್ಯ = ಸ್ತುತ್ಯ, ಕರಣ = ಇಂದ್ರಿಯ.

### ೯ನೆಯ ಹಾಡು

ಶ್ರೀ ಹರಿಯ ಮಾಹಾತ್ಮ್ಯವನ್ನು ವಿವರಿಸುವ ಸುಳಾದಿ ಇದು.

೧ ಕಾರಣ = ಮೂಲಕಾರಣ, ಮಧ್ಯಮ = ಅನಂತರದಲ್ಲಿ ಬಂದವರು.

೨ ಕೆಲವು ಉಪನಿಷತ್ = ಮೂಲದಶೋಪನಿಷತ್, ಸಾಕಲ್ಯ = ಪೂರ್ಣವಾಗಿ.

೪ ಏಕೋತ್ತರಪಂಚಾಶತ್‌ವರ್ಣ = ಅ ಕಾರದಿಂದ ಜ್ಞ ಕಾರದವರೆಗಿನ ಅಕ್ಷರಗಳು. ಸ್ವರ ೧೫, ವರ್ಗೀಯವ್ಯಂಜನ ೨೫, ಅವರ್ಗೀಯ ೧೧ = ಒಟ್ಟು ೫೧, ಮೇಯ = ಜ್ಞೇಯ.

೫ ಇಡಿಯ ಭಾಗವು ಋಗ್‌ಭಾಷ್ಯದಲ್ಲಿಯ ಅವತರಣಿಕೆಯಾಗಿದೆ.

### ೧೦ನೆಯ ಹಾಡು

ದಶಾವತಾರದ ವರ್ಣನೆಯನ್ನು ಒಳಗೊಂಡ ಒಂದು ಕೀರ್ತನೆ.

೩ ಮಹಾಸತಿ = ಭೂದೇವಿ,

೫ ಪುಟ್ಟ = ವಟು

೬ ಧಾತ್ರಿ = ಭೂಮಿ.

### ೧೧ನೆಯ ಹಾಡು

ರಾಮನಾಮಕ್ಕೆ ಸಮಾನವಾದ ಇನ್ನೊಂದು ನಾಮವು ಇಲ್ಲವೆಂಬುದನ್ನು ಅದರ ಮಾಹಾತ್ಮ್ಯದೊಂದಿಗೆ ಈ ಹಾಡಿನಲ್ಲಿ ಹೇಳಲಾಗಿದೆ.

೧ ದಾಯ = ರೀತಿ

೨ ಕವಾಟ = ಬಾಗಿಲು

### ೧೨ನೆಯ ಹಾಡು

ಇದೊಂದು ಪ್ರಾರ್ಥನಾ ರೂಪವಾದ ಸುಳಾದಿ.

೧ ಮೊರೆ = ಆಶ್ರಯ, ಅಹೋಬಲ = (ಸಂ. ೧ ಪು. ೧೩೧)

೨ ಬದರಿಕಾಶ್ರಮ = (ಸಂ. ೧ ೩೫. ೫೫), ಬಾದರಾಯಣ = ಶ್ರೀ ವ್ಯಾಸರು (ಬದರಂ ಅಯನಂ ಯಸ್ಯಸಃ), ಪ್ರಯಾಗ = (ಸಂ. ೩ ಪು. [illegible]) [illegible] = (ಸಂ. [illegible] ಪು. [illegible]) ಜಗನ್ನಾಥ =

(ಸಂ ೧ ಪು. ೫೫.) ಸಿಂಹಾದ್ರೀಶ = ಅಹೋಬಲ. ತಿರುಮಲ-ರಾಯ = (ಸಂ.೧ ಪು. ೭೫). ಕಂಚಿ= (ಸಂ. ೧ ಪು. ೫೫). ರಂಗನಾಥ = (ಸಂ. ೧ ಪು. ೫೫). ಸೇತುರಾಮ = ರಾಮೇಶ್ವರ (ಸಂ. ೧ ಪು. ೧೩೮). ಪದ್ಮನಾಭ = (ಸಂ. ೧ ಪು. ೨೩೬). ಉಡುಪಿ = (ಸಂ. ೧ ಪು. ೨೩೭).

೩ ಗದಾಧರ = ಗಯಾ (ಸಂ. ೧ ಪು ೧೩೫). ಸೋದೆ = ಕಾರವಾರ

ಜಿಲ್ಲೆಯ ಶಿರಸಿ ತಾಲೂಕಿನಿಂದ ೧೭ ಮೈಲಿನ ಮೇಲಿದೆ. ಇದು ಶ್ರೀ ವಾದಿ-ರಾಜರು ಸ್ಥಾಪಿಸಿದ ತ್ರಿವಿಕ್ರಮ ದೇವರ ಕ್ಷೇತ್ರ. ಶ್ರೀ ವಾದಿರಾಜರ ತಪೋಭೂಮಿ. ಇವರ ವೃಂದಾವನವೂ ಇಲ್ಲಿದೆ. ಇದು ಒಂದುಕಾಲದಲ್ಲಿ ಸೋದೆಯ ಅರಸರ ರಾಜಧಾನಿಯಾಗಿತ್ತು.

ದ್ವಾರಾವತಿ = (ಸಂ. ೧ ಪು. ೧೩೮), ವಾದಿರಾಜ = (ಸಂ. ೧ ಪು. ೧೮೮)

೫ ತ್ರಾಣಿ = ಆಶ್ರಯಹೊಂದಿದವ.

### ೧೩ನೆಯ ಹಾಡು

ಶ್ರೀ ರಾಮನ ಮಾಹಾತ್ಮ್ಯವನ್ನು ಈ ಹಾಡಿನಲ್ಲಿ ಬಣ್ಣಿಸಲಾಗಿದೆ.

ವಿ. ಸೂ.- ರಾಮನು ಯುದ್ಧದಲ್ಲಿ ದೃಷ್ಟಿಭ್ರಮೆ ಹುಟ್ಟಿಸಿದನು. ಇದರಿಂದ ರಣಭೂಮಿಯಲ್ಲಿ ನೋಡಿದಲ್ಲೆಲ್ಲ ರಾಮನೇ ಕಾಣಿಸತೊಡಗಿದನು. (ರಾಮಾ. ಯುದ್ಧ ೯೩)

### ೧೪ನೆಯ ಹಾಡು

ಶ್ರೀ ಹರಿಯ ಮೂಲ ಸ್ವರೂಪವನ್ನು ದಾಸರು ಇಲ್ಲಿ ವರ್ಣಿಸಿದ್ದಾರೆ.

ಕೇನೋಪನಿಷತ್ (೨ ರಿಂದ ೯)

### ೧೫ ನೆಯ ಹಾಡು

ಭಕ್ತಿಭಾವದ ಬೆಳೆವಣಿಗೆಯನ್ನು ಈ ಸುಳಾದಿಯಲ್ಲಿ ಕಾಣಬಹುದು.

೧ ಆಳಿದ = (ಆಳ್ದ) ಯಜಮಾನ, ಕೊಂಡೆಯ = ಚಾಡಿ

೨ ಮಧುರೆ = (ಸಂ ೧ ಪು. ೭೦)

೩ ತಲೆಯಲಿನಡೆ = ವಿಪರೀತ ವೃತ್ತಿಹೊಂದು, ದಟ್ಟಿಸಿ = ನಿಷ್ಠುರವಾಗಿ, ಮೂದಲೆ ... ಮೂದಲಿಸು ... [illegible]

೪ ಸಾಲು ೧-೨=ದೈವದ ಅನುಕೂಲತೆಯಿದ್ದರೂ, ನಿನ್ನ ಕೃಪೆಯಿಲ್ಲ ದುದರಿಂದ.

### ೧೬ ನೆಯ ಹಾಡು

ಪರಮಾತ್ಮನ ಗುಣಗಳನ್ನು ಅರಿಯುವುದು ಸಾಕ್ಷಾತ್ ರಮಾದೇವಿಗೂ ಅಸಾಧ್ಯ ವೆಂಬುದನ್ನು ಈ ಉಗಾಭೋಗವು ಹೇಳುತ್ತಿದೆ.

೧ ಏಣಾಕ್ಷಿ= ಚಿಗುರೆಗಣ್ಣಿನವಳು, ಸುಂದರಿ.

### ೧೭ ನೆಯ ಹಾಡು

ಈ ಉಗಾಭೋಗವು ಪರಮಾತ್ಮನ ಮಹಿಮೆಯ ಅನಂತತೆಯನ್ನು ಬಣ್ಣಿಸುತ್ತಿದೆ.

ಗುಣ—ಮೀರಿದ=ತ್ರಿಗುಣಾತೀತ, ತೃಣ—ಇರುವವನಾಗಿ=ಸರ್ವ ವ್ಯಾಪಕನಾಗಿ.

ಅಣೋರಣೀಯಾನ್ ಮಹತೋ ಮಹೀಯಾನ್ (ಭ .ಗೀ.೧೭ ೪೯)
ಯೋವಾ ಅನಂತಸ್ಯಗುಣಾನನಂತಾನ್ (ಭಾಗ ೧೧।೪।೨)

### ೧೮ ನೆಯ ಹಾಡು

ಪರಮಾತ್ಮನ ಒಂದೊಂದು ಅವಯವ ಮಹತಿಯನ್ನು ಪೌರಾಣಿಕ ರೀತಿಯಿಂದ ಈ ಉಗಾಭೋಗದಲ್ಲಿ ಹೇಳಲಾಗಿದೆ.

೨ ನಿನ್ನ ಉಂಗುಟ–ನುಂಗಿತು–ತ್ರಿವಿಕ್ರಮಾವತಾರ, ಮಧುಕೈಟಭ= (ಸಂ. ೧ ಪು. ೨೯೫)

### ೧೯ ನೆಯ ಹಾಡು

ಇದೊಂದು ಪರಮಾತ್ಮನ ಮಹಿಮೆಯನ್ನು ಅಣಕಿಸಿ ಮಾತನಾಡಿದ ಉಗಾ ಭೋಗ.

ಹೆಮ್ಮಕ್ಕಳು = ಹಿರಿಯ ಮಕ್ಕಳು

### ೨೦ ನೆಯ ಹಾಡು

ಪರಮಾತ್ಮನು ಪೂರ್ಣಸ್ವರೂಪಿ ಎಂಬುದನ್ನು ಈ ಉಗಾಭೋಗ ಹೇಳುತ್ತಿದೆ.

ಸುಖ = ಆನಂದ, ಶಾರದ = ಶರದೃತುವಿನ. (ಆಶ್ವೀನ-ಕಾರ್ತೀಕ) ರುಚಿಕರ = ಸುಂದರ.

### ೨೧ ನೆಯ ಹಾಡು

ಈ ಉಗಾಭೋಗವೂ ಪರಮಾತ್ಮನ ಅಗಾಧ ಮಹಿಮೆಯನ್ನು ತಿಳಿಸುತ್ತಿದೆ.

ಅರುಹ = (ತ್ಸ) ಅರ್ಹ

ಮಾಹಾತ್ಮ್ಯದೇಹಸ್ಯತಿ ಮುಕ್ತಿಗತೇ ಶಿವಸ್ಯ ! ಬ್ರಹಾಚತದ್ಗುಣ ಗತಾ ನ ಕಥಂ ಚನೇಶಾ ॥ ಭಾ. ತಾ. ನಿ. ೧।೨೫

### ೨೨ ನೆಯ ಹಾಡು

ಶ್ರೀಹರಿಯ ಸ್ಮರಣೆಯಿಂದ ಎಲ್ಲ ಬಲಗಳೂ ದೊರೆಯುತ್ತವೆಂಬುದನ್ನು ಈ ಉಗಾಭೋಗ ಹೇಳುತ್ತಿದೆ.

ತದೇವಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂತದೇವ. ವಿದ್ಯಾಬಲಂ ದೈವ ಬಲಂತದೇವ ಲಕ್ಷ್ಮೀಪತೇ ತೇಽಂಘ್ರಿ ಯುಗಂ ಸ್ಮರಾಮಿ ॥

### ೨೩ ನೆಯ ಹಾಡು

ಶ್ರೀಹರಿಯನ್ನು ನಂಬಿ ಬಾಳುವವರಿಗೆ ಮಕ್ಕಳಿಂದಲೇ ಸದ್ಗತಿಯುಂಟೆಂಬ ಭಾವನೆಗೆ ಕಾರಣವಿಲ್ಲವೆಂಬುದನ್ನು ಈಸುಳಾದಿ ಸಾರುತ್ತಿದೆ.

### ೨೪ ನೆಯ ಹಾಡು

ಮಾಸಾಳು = ಶೂರ.

### ೨೫ ನೆಯ ಹಾಡು

ಶ್ರೀಹರಿಯು ಭಕ್ತರ ಬಳಿ ಕರೆದಾಗ ಬರುವನೆಂಬುದನ್ನು ಈ ಉಗಾಭೋಗ ಉದ್ಘಡಿಸುತ್ತಿದೆ.

### ೨೬ ನೆಯ ಹಾಡು

ದ್ರೌಪದಿಯ ವಸ್ತ್ರಾಪಹರಣ ಕಾಲದಲ್ಲಿ ಆಕೆಯ ಸ್ತುತಿಗೆ ಒಲಿದ ಪರಮಾತ್ಮನ ಕೃಪೆಯ ಕಥೆಯನ್ನು ಈ ಉಗಾಭೋಗವು ಹೇಳುತ್ತಿದೆ.

ಹಾಕೃಷ್ಣ ದ್ವಾರಕಾವಾಸಿನ್ ಕ್ವಾಸಿಯಾದವನಂದನ। ಇಮಾಮವಸ್ಥಾಂ ಪ್ರಾಪ್ತಾಮನಾಥಾಂಕಿಮುಪೇಕ್ಷಸೇ ॥ (ಭಾರ–ಸಭಾ)

## ೨೭ ನೆಯ ಹಾಡು

ಎಲ್ಲ ಸಾಧನಗಳಸಿದ್ಧಿಗೂ ಭಕ್ತಿಯೇ ಕಾರಣವೆಂಬುದನ್ನು ಈ ಉಗಾಭೋಗವು ತಿಳಿಸುತ್ತಿದೆ.

ದಾನತೀರ್ಥತಪೋಯಜ್ಞಪೂರ್ವಾಃ ಸರ್ವೇಽಪಿಸರ್ವದಾ। ಅಂಗಾನಿ ಹರಿಸೇವಾಯಾಂ ಭಕ್ತಿಸ್ತು ಏಕಾವಿಮುಕ್ತಾಯೇ ॥

ಭಕ್ತ್ಯರ್ಥಾನ್ಯಖಿಲಾನ್ಯೇವ ಭಕ್ತಿರ್ಮೋಕ್ಷಾಯ ಕೇವಲಾ। ಮುಕ್ತಾನಾಮಪಿ ಭಕ್ತಿರ್ಹಿ ನಿತ್ಯಾನಂದಸ್ವರೂಪಿಣೀ ॥

ಭಕ್ತ್ಯೈವ ತುಷ್ಟಿಮಭ್ಯೇತಿ ವಿಷ್ಣುರ್ನಾನ್ಯೇನ ಕೇನಚಿತ್। ಸಏವ ಮುಕ್ತಿದಾತಾಚ ಭಕ್ತಿಸ್ತತ್ರೈವ ಕಾರಣಂ ॥ (ಭಾ. ತಾ. ನಿ. ೨ ೧೦೦, ೧೦೬–೧೧೯)

## ೨೮ ನೆಯ ಹಾಡು

ಪರಮಾತ್ಮನು ಕ್ಷಮಾಶೀಲನೆಂಬುದನ್ನು ಈ ಉಗಾಭೋಗವು ಹೇಳುತ್ತಿದೆ.

ಅರ್ಭಕ = ಬಾಲಕ.

## ೨೯ ನೆಯ ಹಾಡು

ಪರಮಾತ್ಮನು ಸಂಕೀರ್ತನ ಪ್ರಿಯ ಎಂಬುದನ್ನು ಈ ಉಗಾಭೋಗವು ಸಾರುತ್ತಿದೆ.

## ೩೦ ನೆಯ ಹಾಡು

ಎಲ್ಲ ದಾನಕ್ಕಿಂತಲೂ ಧ್ಯಾನವೇ ಶ್ರೇಷ್ಠವೆಂದು ಈ ಉಗಾಭೋಗವು ಸಾರುತ್ತಿದೆ.

ಗೋಕುಲ = ಗೋಸಮೂಹ

## ೩೧ ನೆಯ ಹಾಡು

ಇದೊಂದು ಪಂಚಭೇದವನ್ನು ವಿವರಿಸುವ ಉಗಾಭೋಗ, (ಸಂ ೧ ಹಾಡು ೫ ಟಿಪ್ಪಣಿ)

## ೩೨ ನೆಯ ಹಾಡು

ಜ್ಞಾನಸಾಧನೆಗೆ ಸದ್ಗುರುವಿನ ಕರುಣೆ ಅಗತ್ಯವೆಂಬುದನ್ನೂ ಅಂತಹ ಗುರುಕರುಣೆ ಅಸಾಧ್ಯವೆಂಬುದನ್ನೂ ಈ ಉಗಾಭೋಗವು ವಿವರಿಸುತ್ತಿದೆ.

ಸಲಿಸು = ದೊರಕಿಸಿಕೊಡು

ಸರ್ವಕ್ರಿಯಾಹರೌಭಕ್ತೇ ಹರಿಭಕ್ತ್ಯೈಃ ಸ್ವನುಷ್ಠಿತಾಃ। ಗುರುಭಕ್ತ್ಯೈಃ ಸದಾಚಾರ್ಯೈಃ ಫಲಂತ್ಯದ್ಧಾನಚಾನ್ಯಥಾ ॥ (ತಂತ್ರಸಾರ ೪।೧೧೧)

## ೩೩ ನೆಯ ಹಾಡು

ಮಹಾರುದ್ರ ದೇವರ ಭಜನೆಯು ಯಾವಾಗಲೂ ಶ್ರೀಹರಿಭಕ್ತಿ ಪ್ರೇರಕವು ಎಂಬ ಮಾತನ್ನು ಈ ಉಗಾಭೋಗ ಹೇಳುತ್ತಿದೆ. (ಸಂ ೧ ಹಾಡು ೩ ಟಿಪ್ಪಣಿ)

## ೨ ಕಾರುಣ್ಯಯಾಚನೆ

### ೩೪ ನೆಯ ಹಾಡು

ಇವು ಆರ್ತಭಕ್ತನ ಮೊರೆಗಳು. ಜೀವನದ ವೈಷಮ್ಯ ನಿಸ್ಸಾರತೆಗಳಿಂದ ಸೋತು ಹೋದ ಜೀವ ಪರಮಾತ್ಮನಲ್ಲಿ ಮೊರೆಯಿಟ್ಟ ವಿವಿಧಭಾವಗಳು ಈ ವಿಭಾಗದಲ್ಲಿವೆ. ಜಗತ್ತಿನ ಅನ್ಯಾಯಕ್ಕೆ ಬೇಸತ್ತ ಭಕ್ತ ಶ್ರೀಹರಿಯನ್ನು ಇಂತು ಬೇಡಿಕೊಳ್ಳುತ್ತಾನೆ.

೧ ಪತಿಕರಿಸು = ಅಂಗೀಕರಿಸು

೨ ಪರಸುಖಗತಿ = ಮೋಕ್ಷ

೩ ಈ ಕಲಿಯುಗದಿ—ಕಾಯುತಹರೆ = ದೇಹಕ್ಕಿಂತಲೂ ಹೆಚ್ಚಾಗಿ ಬೇರೆ ವಸ್ತುಗಳನ್ನೇ ಈ ಕಲಿಯುಗದ ಜನರು ಕಾಣುತ್ತಾರೆ ಎಂಬುದು ಇದರ ಭಾವ.

೪ ಪಾಪ, ಕರ್ಮ, ನರಕ ಇವೆಲ್ಲವುಗಳ ದುಃಖಗಳನ್ನು ಕಳೆಯಲು ಧನಾಢ್ಯನಾದ ಪುರಂದರವಿಠಲನಿದ್ದಾನೆಂಬ ವಿಶ್ವಾಸವು ದಾಸರಿಗಿದೆ.

೫ ಪಾರಾಯಣ–ಆಸಕ್ತರು. = ಭಕ್ತರು

### ೩೫ ನೆಯ ಹಾಡು

ಪೂರ್ವಜನ್ಮದ ಪಾಪದಿಂದ ಈ ಲೋಕದಲ್ಲಿ ಜನ್ಮಿಸಿ ಆ ಪಾಪದ ಫಲವಾಗಿ ಪಡುವ ಪಾಟಗಳನ್ನೆಲ್ಲ ದಾಸರು ಶ್ರೀಹರಿಗೆ ನಿವೇದಿಸಿದ್ದಾರೆ.

೧ ವಾರಿಜೋದರ = ವಾರಿಜನಾಭ, ದೂರು = ಅಪವಾದ

### ೩೬ ನೆಯ ಹಾಡು

ದುಷ್ಟರ ಸಹವಾಸದಿಂದ ಸಂತಾಪವನ್ನು ಅನುಭವಿಸಿದ ದಾಸರು ಅದರ ಫಲವನ್ನು ಈ ಸುಳಾದಿಯಲ್ಲಿ ವಿವರಿಸಿದ್ದಾರೆ.

೧ ಖಂಡದಿಂಡ = ಮಾಂಸ ಮತ್ತು ದೇಹ

೨ ವಿಭೂತಿ = ಪ್ರಭಾವ

ಖಳರವಿದ್ದೆ ಅಧಿಕಾರ ಮುಂ. ಶಿಷ್ಟರ ಅವಹೇಳನಕ್ಕಾಗಿ ಇವೆ.

೩ ಪಾಷಂಡ = ನಾಸ್ತಿಕ, ರೂಢಧರ್ಮವಿರೋಧಿ

ಕಾದಿಸಿ = ಹೋರಾಡಿಸಿ

೫ ವಟ್ಟ = ವಡಿ (?), ಕೋಪಪ್ರಸಾದ = ಕೋಪ ಮತ್ತು ಪ್ರಸಾದ

ವಿ. ಸೂ.— ಕೋಪದಿಂದ ಸಜ್ಜನವಿರೋಧಿಗಳಿಗೆ ಕೇಡು, ಪ್ರಸಾದದಿಂದ ಸಜ್ಜನರಿಗೆ ಸ್ಥೈರ್ಯ.

### ೩೭ ನೆಯ ಹಾಡು

ಈ ಜನ್ಮದಲ್ಲಿ ದುಷ್ಕರ್ಮಗಳನ್ನು ಮಾಡುವ ಪಾಪಿಗೆ ಪರಜನ್ಮದಲ್ಲಿ ನರಕ ಬಾಧೆ ತಪ್ಪದು ಎಂಬ ಮಾತನ್ನು ನಿಷ್ಠುರವಾದ ಮಾತಿನಲ್ಲಿ ದಾಸರು ಹೇಳಿದ್ದಾರೆ.

೧ ಕೋಳ = ಬಂಧನ

೨ ಖತಿ = ಸಿಟ್ಟು

೩ ತಗ್ಗಿಸಿ = ಅತಿವಿನೀತನಾಗಿ

೪ ಮಿಂಡೆ = ಹಾದರಗಿತ್ತಿ

### ೩೮ ನೆಯ ಹಾಡು

ಎಂತಹ ಪಾತಕಿಯಾದರೂ ಕರುಣಾಕರ ದೇವನು ಎತ್ತಿ ಸ್ವೀಕರಿಸಬಲ್ಲನೆಂಬ ವಿಶ್ವಾಸವನ್ನು ದಾಸರು ಈ ಹಾಡಿನಲ್ಲಿ ಮೂಡಿಸಿದ್ದಾರೆ.

೧ ಕಡೆಗಣ್ಣಿಂದ ನೋಡು = ತಿರಸ್ಕರಿಸು
ಚಿತ್‌ಸುಖ = ಮನಃಶಾಂತಿ

### ೩೯ ನೆಯ ಹಾಡು

ದಶಾವತಾರ ಲೀಲೆಗಳನ್ನು ವಿವರಿಸುತ್ತ ನೀನೆ ಎಲ್ಲರಿಗೂ ಗತಿ ಎಂಬು ದನ್ನು ದಾಸರು ಇಲ್ಲಿ ಹೇಳಿದ್ದಾರೆ.

೧ ಜಲದೊಳು-ನೀನೆ = ಮತ್ಸ್ಯಾವತಾರ ಮತ್ತು ಕೂರ್ಮಾವತಾರ
ಇಳೆಯುಕದ್ದ—ಸೀಳಿ = ವರಾಹಾವತಾರ
ಕಂಬದೊಳುದ್ಭವಿಸಿದಿ-ನೀನೆ = ನರಸಿಂಹಾವತಾರ.

೨ ಬಲಿಯ-ನೀನು = ವಾಮನಾವತಾರ, ಕೊಡಲಿಯ-ನೀನೆ = ಪರಶು ರಾಮಾವತಾರ, ಜಲಧಿಯ-ನೀನೆ = ರಾಮಾವತಾರ.

೩ ಗೊಲ್ಲರ-ನೀನೆ = ಕೃಷ್ಣಾವತಾರ, ಬಳ್ಳಿದ-ನಿಂತು = ಬೌದ್ಧಾವತಾರ
ಒಳ್ಳೆ-ನೀನೆ = ಕಲ್ಕ್ಯವತಾರ.

೪ ಪುಂಡಲೀಕ = (ಸಂ. ೧. ಪು. ೨೭೩)

### ೪೦ ನೆಯ ಹಾಡು

ಆಪನ್ನ = ಕಷ್ಟದಲ್ಲಿ ಸಿಕ್ಕವ

### ೪೧ ನೆಯ ಹಾಡು

ಇದರಲ್ಲಿ ಶ್ರೀಹರಿನಾಮಸ್ಮರಣೆಯ ಮಹತ್ತ್ವವನ್ನು ಹೇಳಲಾಗಿದೆ.

### ೪೨ ನೆಯ ಹಾಡು

ಸಂಸಾರಿಜೀವಿಯ ಸುತ್ತುಮುತ್ತು ಇರುವ ಕಷ್ಟಕೋಟಲೆಗಳನ್ನು ಇಲ್ಲಿ ರೂಪಕವಾಗಿ ವರ್ಣಿಸಿ ದಾಸರು ದೇವರಲ್ಲಿ ಮೊರೆಯಿಟ್ಟಿದ್ದಾರೆ.

### ೪೩ ನೆಯ ಹಾಡು

ನಿರ್ಗತಿಕಭಾವದಿಂದ ದೇವರಲ್ಲಿ ಮೊರೆಯಿಟ್ಟ ಭಾವ ಈ ಉಗಾಭೋಗದಲ್ಲಿದೆ.

### ೪೪ ನೆಯ ಹಾಡು

ಗುಣಹೀನರಾದ ಜನರು ಏನು ಓದಿದರೇನು ಏನು ಕೇಳಿದರೇನು ಎಂದು ವಿವರಿಸುತ್ತ ದಾಸರು ಶ್ರೀಹರಿಗೆ ಸರ್ವಸಮರ್ಪಣ ಮಾಡಿ ಮೊರೆಯಿಟ್ಟ ಭಾವವು ಈ ಉಗಾಭೋಗದಲ್ಲಿದೆ.

### ೪೫ ನೆಯ ಹಾಡು

ಭಕ್ತನು ಬೆಳಗಿನಲ್ಲಿ ವರ್ತಿಸಬೇಕಾದ ರೀತಿ-ನೀತಿಗಳನ್ನು ಪರ್ಯಾಯವಾಗಿ ಈ ಉಗಾಭೋಗದಲ್ಲಿ ಹೇಳಲಾಗಿದೆ.

### ೪೬ ನೆಯ ಹಾಡು

ಸೇವಾವೃತ್ತಿಯು ಭಕ್ತನಿಗೆ ಸಲ್ಲದೆಂಬುದನ್ನು ಈ ಉಗಾಭೋಗವು ಸೂಚಿಸುತ್ತಿದೆ.

ತಾರಕ = ಹಂಚಿಕೆ, ಅಬ್ಬರ = ಆಡಂಬರ

### ೪೭ ನೆಯ ಹಾಡು

ಭಕ್ತಿಯಿಲ್ಲದೆ ಸ್ನಾನವು ವ್ಯರ್ಥವೆಂದು ಈ ಸುಳಾದಿಯಲ್ಲಿ ದಾಸರು ವಿನೋದವಾಗಿ ಹೇಳಿದ್ದಾರೆ.

ಅವಧಾನ = ಬಿನ್ನ ವಿಷಯುಕ್ತವಾದ ಮನಸ್ಸು, ನಾದಲಿ = ತೋಯಲಿ

### ೪೮ ನೆಯ ಹಾಡು

ಭಕ್ತಿಯ ನಿಶ್ಚಿತತೆಯನ್ನು ಈ ಉಗಾಭೋಗದಲ್ಲಿ ನೋಡಬಹುದು.

ಕೈಗೊಡು = ಸಹಕರಿಸು

### ೪೯ ನೆಯ ಹಾಡು

ಬೇರೆ ಬೇರೆಯವರಿಗೆ ಬೇರೆ ಬೇರೆ ವಿಷಯಗಳಲ್ಲಿ ಸಂತೋಷವೆನಿಸಬಹುದು. ಆದರೆ ಭಕ್ತನಿಗೆ ಪರಮಾತ್ಮ ರತಿಯಲ್ಲಿಯೆ ಸಂತೋಷವೆಂಬುದನ್ನು ಈ ಉಗಾಭೋಗವು ಉಗ್ಗಡಿಸುತ್ತಿದೆ.

### ೫೦ ನೆಯ ಹಾಡು

ಹರಿನಾಮಸ್ಮರಣೆಯು ಸಕಲದುರಿತ ನಿವಾರಣವೆಂಬುದನ್ನು ಈ ಉಗಾಭೋಗವು ಸಾರುತ್ತಿದೆ.

ಮರಣಕಾಲದಿ-ಕೂಗಿದವ = ಅಜಾಮಿಳ

### ೫೧ ನೆಯ ಹಾಡು

ಜನ್ಮಗಳು ಬಂದರೂ ಕುಯೋನಿಯಲ್ಲಿ ಮಾತ್ರ ಬರಲಾಗದೆಂದು ದಾಸರು ಶ್ರೀಹರಿಯಲ್ಲಿ ಮೊರೆಯಿಟ್ಟಿದ್ದಾರೆ.

ಕುಯೋನಿ = ನೀಚಜನ್ಮ

### ೫೨ ನೆಯ ಹಾಡು

ಅವಿರತಸ್ಮರಣೆಯನ್ನು ದಾಸರು ಈ ಉಗಾಭೋಗದಲ್ಲಿ ಅಪೇಕ್ಷಿಸಿದ್ದಾರೆ.

### ೫೩ ನೆಯ ಹಾಡು

ನಾನು ಅಜ್ಞಾನಿಯಾದರೂ ತಾಯಿಮಗನಭಾವದಿಂದ ನನ್ನನ್ನು ಕ್ಷಮಿಸಿ ಎತ್ತಿಕೊ ಎಂದು ದಾಸರು ಈ ಉಗಾಭೋಗದಲ್ಲಿ ಕೋರಿದ್ದಾರೆ.

# ೩ ಭಕ್ತಿಭಾವ ವಿಕಸನ

## ೫೬ನೆಯ ಹಾಡು

ಭಕ್ತನ ಅಂಗಾಂಗಗಳೂ ಪರಮಾತ್ಮನ ಕಾರ್ಯಕ್ಕಾಗಿಯೇ ದುಡಿಯುತ್ತಿರಬೇಕೆಂಬುದನ್ನು ಈ ಉಗಾಭೋಗವು ಹೇಳುತ್ತಿದೆ.

## ೫೭ನೆಯ ಹಾಡು

ನೃಸಿಂಹನ ಉಪಾಸನೆಯಿಂದ ಎಂತೆಂತಹ ದುರಿತಗಳು ನಾಶವಾಗುವವೆಂಬುದನ್ನು ದಾಸರು ಈ ಹಾಡಿನಲ್ಲಿ ಆ ದೇವರ ಮಾಹಾತ್ಮ್ಯದೊಂದಿಗೆ ವಿವರಿಸಿದ್ದಾರೆ.

೧ ಕುಲಿಶ = ವಜ್ರಾಯುಧ, ಸಿರಿದೇವಿಮೊರೆಯಿಡೆ=(ಭಾ. ಗ. ೭ | ೯ | ೨ | )

## ೫೮ನೆಯ ಹಾಡು

ಇದೊಂದು ಅಣಕವಾಡು. ನಿನ್ನನ್ನು ನಾನು ಏನು ಬೇಡಲಿ ಎಂದು ಹೇಳುತ್ತ ದಶಾವತಾರದ ವೈಶಿಷ್ಟ್ಯಗಳನ್ನು ವರ್ಣಿಸಿದ್ದಾರೆ.

೧ ಚಂಚಲ = ಮತ್ಸ್ಯಾವತಾರ, ಕಠಿಣ = ಕೂರ್ಮಾವತಾರ, ಮೌನದಿಂದ – ಓರೆಮಾಡುವನ = ವರಾಹಾವತಾರ, ಕರುಳಹರಕ = ನರಸಿಂಹಾವತಾರ, ತಿರಿದು ತಿಂಬವನ = ವಾಮನಾವತಾರ, ಕೊರಳಗೊಯ್ಕ = ಪರಶುರಾಮಾವತಾರ, ಅರಣ್ಯತಿರುಗುವ = ರಾಮಾವತಾರ, ತಿರುಗಿ – ತಿಂಬವನ = ಕೃಷ್ಣಾವತಾರ.

೨ ವಾಸಶೂನ್ಯ = ಬೌದ್ಧಾವತಾರ, ಕೈಯುಕತ್ತಿ – ಸವರುವ = ಕಲ್ಕ್ಯವತಾರ, ಕಾಸ – – ಮಾಡುವನ = ತಿರುಪತಿ ವೆಂಕಟೇಶ.

## ೫೯ನೆಯ ಹಾಡು

ದಾಸರ ಸಮಬುದ್ಧಿಯನ್ನು ಈ ಹಾಡಿನಲ್ಲಿ ಚೆನ್ನಾಗಿ ನೋಡಬಹುದು.

ಮಿಕ್ಕ ಎಲ್ಲ ದೇವತೆಗಳನ್ನೂ ಬಿಟ್ಟು ಶ್ರೀ ಹರಿಯನ್ನೇ ನಾನು ಉಪಾಸಿಸುವೆನೆಂಬುದನ್ನು ಹೇಳುವುದಕ್ಕಾಗಿ ಇಲ್ಲಿ ದಾಸರು ಲಕ್ಷಣಾವೃತ್ತಿಯನ್ನು ಬಳಸಿದ್ದಾರೆ.

೧ ಬೆನಕ = (ತ್ಸವಿನಾಯಕ) ಗಣಪತಿ, ಕುಲುಕು = ಹೊಯ್ದಾಡು ಮರುಳುಗೊಂಬುವನ = ಭೂತಗಣಗಳಿಂದ ಕೂಡಿಕೊಂಡವ.

### ೬೧ನೆಯ ಹಾಡು

ಅನನ್ಯವಾದ ಶ್ರೀಹರಿಯ ನಿಷ್ಠೆಯನ್ನು ದಾಸರು ಈ ಸುಳಾದಿಯಲ್ಲಿ ಪ್ರಕಟಿಸಿದ್ದಾರೆ.

೧ ಕಳತ್ರ = ಹೆಂಡತಿ. ೨ ತೇನವಿನಾತೃಣಮಪಿ ನ ಚಲತಿ = (ಕೇನ ೧೫–೨೪), ಅಣೋರಣೀಯಾನ್ ಮಹತೋ ಮಹೀಯಾನ್–(ಭ.ಗೀ. ೮|೯) ಮಣಿಗಣಕಾಧಾರ ಗುಣವು ಇದ್ದಂತೆ–(ಹೋಲಿಸಿರಿ, ಭ.ಗೀ.೭|೭). ೩ ನಿನ್ನ ಯತ್ನವು—ಸಹಾಯವು. ೪ ಸ್ಮೃತಿಯೆ ಪಥಗತಿಯೆ — ಇದರ ಅರ್ಥ ಸ್ಪಷ್ಟವಿಲ್ಲ. ೫ ದಾವಣಿ = ದನಕಟ್ಟುವ ಕಣ್ಣಿ, ಮೂಗುನೇಣೆ = ಮೂಗು ದಾಣ, ಮುಟ್ಟು = ಸಬರ.

### ೬೨ನೆಯ ಹಾಡು

ಶ್ರೀಹರಿಯನ್ನು ದಾಸರ ದಾಸನೆಂದು ಭಾವಿಸಿ ಆ ಸ್ವರೂಪದಿಂದ ಬಂದನೆಂದು ದಶಾವತಾರದ ವರ್ಣನೆಯೊಂದಿಗೆ ದಾಸರು ಇಲ್ಲಿ ಹಾಡಿದ್ದಾರೆ.

೧ ಪೊಳೆವಕಾಯ=ಮೀನ=(ಮತ್ಸ್ಯಾವತಾರ.) ೨ ತಲೆಹತ್ತ = ರಾವಣ. ೩ ಪುರವನುರುಪಿಬಂದ = ತ್ರಿಪುರರನಾಶಮಾಡಿಬಂದ. ಲಂಡ = ಮ್ಲೇಚ್ಛ.

### ೬೩ನೆಯ ಹಾಡು

ಉಪಾಸನೆಗಾಗಿ ಶ್ರೀಹರಿ ದೊರೆತದ್ದು ಜ್ಞಾನಿಗಳಾದ ಪುರಂದರದಾಸರಿಗೊಂದು ಸಂಭ್ರಮದ ಸಂಗತಿಯಾಗಿದೆ.

೧ ವಿಜಯ = ಅರ್ಜುನ, ೨ ಮೀನಾಂಕ = ಕಾಮ.

### ೬೪ನೆಯ ಹಾಡು

ಹರಿದಾಸದೀಕ್ಷೆಯು ದೊರೆತದಿನ ಪುರಂದರದಾಸರು ಈ ಹಾಡನ್ನು ರಚಿಸಿ ಹಾಡಿ ಕುಣಿದಿರಬಹುದಾಗಿದೆ.

೧ ಸುಕೃತಿ = ಪುಣ್ಯ, ದಿವ್ಯ = ಪರೀಕ್ಷೆ

೨ ಸೂ. ಪ್ರಾಚೀನ ಕಾಲದಲ್ಲಿ ಅಪರಾಧಿಗಳಿಂದ ಅಪರಾಧವಾದುದನ್ನೊಡಂಬಡಿ

ಸಲು ಕಾಸಿದ ಕಬ್ಬಿಣಗುಂಡನ್ನು ಕೈಯಲ್ಲಿಡುವುದು, ನೀರಲ್ಲಿ ಮುಳುಗಿಸುವುದು ಮೊದಲಾದ ಉಪಾಯಗಳನ್ನು ಮಾಡುತ್ತಿದ್ದರು. ಇದಕ್ಕೆ ದಿವ್ಯವೆಂಬ ಹೆಸರಿದೆ.

## ೬೫ ನೆಯ ಹಾಡು

ಅಸ್ಥಿರವಾದ ಜೀವನದ ಮೂಲಕ ಯಾವಾಗ ಮರಣ ಬಂದು ಮುಂದೆ ನಿಂತೀತೆಂಬ ನಿಯಮವಿಲ್ಲವಾದುದರಿಂದ ಯಾವಾಗಲೂ ನಾಮಸ್ಮರಣೆಯನ್ನು ಮಾಡಬೇಕೆಂದು ದಾಸರು ಈ ಹಾಡಿನಲ್ಲಿ ಹೇಳಿದ್ದಾರೆ.

೧ ಸಿಂಧುಸುತಾ = ಲಕ್ಷ್ಮಿ

೨ ಆತ್ಮ = ಜೀವ

೩ ಕಾಸೆ = ಕೆಮ್ಮು, ದೋಷ = ವಾತ ಪಿತ್ತ ಕಫ (ತ್ರಿದೋಷ)

೪ ತಂಗಿ = ವಸತಿ ಮಾಡಿ

## ೬೬ ನೆಯ ಹಾಡು

ಇಲ್ಲಿ ದಾಸರು ಹರಿನಾಮವನ್ನು ಹಣ್ಣೊಂದು ರೂಪಿಸಿ ತಾವದರ ಮಾರಾಟಗಾರರಾಗಿ ಹಣ್ಣುಕೊಳ್ಳಿರೊ ಎಂದು ಜನರನ್ನು ಕೂಗಿ ಕರೆದಿದ್ದಾರೆ.

೧ ರಕ್ಕಸಮಥನ = ಅಸುರಾರಿ, ಕಳಿತ = ಪೂರ್ಣ ಹಣ್ಣಾದ, ಹವ್ಯ = ದೇವತೆಗಳಿಗೆ ಅರ್ಪಿಸುವುದು, ಕವ್ಯ = ಪಿತೃಗಳಿಗೆ ಅರ್ಪಿಸುವುದು.

೨ ಪವನಸುತ = ಹನುಮಂತ

೩ ಬಿತ್ತು = ಬೀಜ, ತೊಟ್ಟು = ತುಂಬು
ಗಟ್ಟ ಬೆಟ್ಟವಮೇಲೆ ಸುತ್ತಿಸುಳಿದಾಡಿಸುವ = ಯಾತ್ರೆಗಾಗಿ ಪ್ರೇರಿಸುವ.

## ೬೭ ನೆಯ ಹಾಡು

ಮೇಲಿನ ಹಾಡಿನಂಥ ರೂಪಕಗೀತವೇ ಇದು.

೧ ನಿಜ = ಸತ್ಯ, ಸುಜನಗಂಧಿಯರು = ಕುಲೀನೆಯರು

೩ ಕನ್ಯೆ = ದ್ರೌಪದಿ

೪ ಚಿತ್ತಜ = ಕಾಮ

೫ ಉರಗ = ಕಾಳಿಂಗ

## ೬೮ ನೆಯ ಹಾಡು

ಇದೊಂದು ಅಪೂರ್ವವಾದ ಹಾಡು. ರಾಮನಾಮವೆಂಬ ಅಮೃತವನ್ನು ಕೊಳ್ಳುವವರನ್ನೆಲ್ಲ "ಅಚ್ಯುತ ಪೇಟೆ"ಗೆ ಬನ್ನಿ ಎಂದು ದಾಸರು ಎಲ್ಲರನ್ನೂ ಕರೆದಿದ್ದಾರೆ.

೧ ಅಚ್ಯುತ=(೧) ದೇವರ ಪೇಟೆ (೨) ನಾಶರಹಿತ ಪೇಟೆ, ಒಮ್ಮನ=(೧) ಒಂದೇಮನಸ್ಸು (೨) ಒಂದು ಅಳತೆ, ರಾಮಟೆಂಕೆ = ನಾಣ್ಯದ ಹೆಸರು

೨ ನಾಲ್ಕು ಕುದುರೆ=ಚತುರ್ವಿಧ ಪುರುಷಾರ್ಥ, ಎಂಟಾನೆ=ಅಷ್ಟ-ಮದಗಳು, ಏಳುವರ್ಣದ ಪಟ್ಟಿಕೆ=ಸಪ್ತವ್ಯಸನಗಳು.

೩ ಅಪರಂಜಿ = ಶುದ್ಧಬಂಗಾರ, ನೀಲ=ನೀಲರತ್ನ (೨) ಶ್ರೀಹರಿಯ ವರ್ಣ

೪ ಕೊಳಗ=ಒಂದು ಅಳತೆ, ಗರಳಪರಿಹರಿಸಲುರತ್ನ = ವಿಷನಾಶಕರತ್ನ ಮರುತಾಶ್ರಯ=ಶ್ರೀಹರಿ

೫ ಆರಂಗಡಿ = ಷಡ್ರಿಪುಗಳು, ಏಳು ಎಂಟು=ಸಪ್ತವ್ಯಸನ, ಅಷ್ಟ ಮದ, ನವವಿಧ = ನವವಿಧ ಭಕ್ತಿ; ವಿ. ಸೂ. ಈ ನುಡಿಯ ಅರ್ಥ ಸ್ಪಷ್ಟವಾಗುವುದಿಲ್ಲ.

೬ ಸುಂಕಿಗರೈವರು = ಪಂಚೇಂದ್ರಿಯ, ಟೊಣೆ= ಹೊಡೆ

೭ ಬೇಹಾರ (ತ್ಸ ವ್ಯವಹಾರ)

## ೬೯ ನೆಯ ಹಾಡು

ಈ ಹಾಡಿನಲ್ಲಿ ದಾಸರು ರಾಮನಾಮದ ಪಾಯಸವನ್ನು ಉಣಿಸಲು ಹೊರಟಿದ್ದಾರೆ.

೧ ಒಮ್ಮನ=ಒಂದು ಅಳತೆ, ಸುಮ್ಮನ = ಒಳ್ಳೆಮನಸ್ಸು, (ತ್ಸ ಸು-ಮನಸ್.

## ೭೦ ನೆಯ ಹಾಡು

ಶ್ರವಣ ಮತ್ತು ಸ್ಮರಣ ಭಕ್ತಿಗಳನ್ನು ಈ ಉಗಾಭೋಗದಲ್ಲಿ ಹೇಳಲಾಗಿದೆ.

ಬ್ರಹ್ಮಹತ್ಯಾ=ಬ್ರಾಹ್ಮಣನ ಕೊಲೆಯಪಾಪ.

(ಶ್ರೀಕೃಷ್ಣಶ್ರವಣ( ಜಿಷ್ಣತರಘಾತ)

### ೭೧ನೆಯ ಹಾಡು

ಭಕ್ತ ನಿರ್ಭೀತನೆಂಬುದನ್ನು ಈ ಉಗಾಭೋಗವು ಹೇಳುತ್ತಿದೆ.

### ೭೨ನೆಯ ಹಾಡು

ಹರಿಭಕ್ತರೊಂದಿಗೆ ಕೂಡಿ ನಡೆಯದವನು ಪಾಪಿ ಎಂಬುದನ್ನು ಈ ಉಗಾಭೋಗದಲ್ಲಿ ದಾಸರು ಸ್ಪಷ್ಟವಾದ ಮಾತುಗಳಲ್ಲಿ ಹೇಳಿದ್ದಾರೆ.

### ೭೩ನೆಯ ಹಾಡು

ಯಾವ ಮನೋಭಾವದಿಂದ ಶ್ರೀಹರಿಯ ನಾಮವನ್ನು ಸ್ಮರಿಸಿದರೂ ಆತನಿಗೆ ನರಕದ ಭಯವು ತಪ್ಪುವುದು ಎಂದು ಈ ಉಗಾಭೋಗದಲ್ಲಿ ದಾಸರು ಸೂಚಿಸಿದ್ದಾರೆ.

### ೭೪ನೆಯ ಹಾಡು

ಹರಿಭಕ್ತರ ದೊಡ್ಡಿತೆಯನ್ನು ಈ ಉಗಾಭೋಗವು ಹೇಳುತ್ತಿದೆ.

ಅರೆ = ಅರ್ಧಕ್ಕೆ.

### ೭೫ನೆಯ ಹಾಡು

ಭಕ್ತಿಯ ಸಂಪರ್ಕವಿಲ್ಲದಿದ್ದಾಗ ಭಕ್ತನಾಗಬೇಕೆಂಬ ಹಂಬಲದ ಮನುಷ್ಯನು ಹರಿದಾಸರೆದುರು ಹೋಗಿ ವ್ಯರ್ಥವಾಗಿ ಹೇಗೆ ತನ್ನ ಕಳವಳವನ್ನು ಪ್ರಕಟಿಸುತ್ತಾನೆಂಬುದನ್ನು ಈ ಉಗಾಭೋಗವು ಹೇಳುತ್ತದೆ.

### ೭೬ನೆಯ ಹಾಡು

ಲಾಕ್ಷಣಿಕವಾಗಿ ಈ ಉಗಾಭೋಗದಲ್ಲಿ ದಾಸರು ಹರಿಭಕ್ತಿಸಾಧನೆಯನ್ನು ಒಂದು ವ್ಯಾಪಾರಕ್ಕೆ ಹೋಲಿಸಿ ಹೇಳಿದ್ದಾರೆ.

ಬಂಡ = ಸರಕು, ಸುಂಕಿಗರು = ಸುಂಕದವರು.

ವಿ. ಸೂ.– ಪ್ರಾಚೀನಕಾಲದಲ್ಲಿ ನೌಕಾವ್ಯಾಪಾರಸ್ಥರು ರಾಜಮುದ್ರೆಯನ್ನು ಅಲ್ಲಲ್ಲಿ ಉಕ್ಕಡದವರಿಗೆ ತೋರಿಸಿ ಊರಿಂದೂರಿಗೆ ಸಂಚರಿಸುತ್ತಿದ್ದರು.

### ೭೭ನೆಯ ಹಾಡು

ಹರಿಭಕ್ತರ ಮಹಿಮೆಯನ್ನು ಈ ಉಗಾಭೋಗವು ಸಾರುತ್ತಿದೆ.

### ೭೮ನೆಯ ಹಾಡು

ಹರಿದಾಸನಾಗುವಂತೆ ಅಪೇಕ್ಷಿಸಿ ಬೇಡಿಕೊಂಡ ಮಾತುಗಳು ಈ ಉಗಾಭೋಗದಲ್ಲಿವೆ.

### ೭೯ನೆಯ ಹಾಡು

ಈ ಉಗಾಭೋಗವು ಪುರಂದರದಾಸರ ಭಕ್ತಿಯ ನಿಶ್ಚಲತೆಯನ್ನು ಪ್ರಕಟಿಸುತ್ತಿದೆ.

ಬೊಬ್ಬಿ [illegible]

### ೪೦ನೆಯ ಹಾಡು

ಮೇಲಿನ ಭಾವವೇ ಈ ಉಗಾಭೋಗದಲ್ಲಿ ಮುಂದುವರಿದಿದೆ.

ಲೋಗರು = ಜನಸಾಮಾನ್ಯರು

### ೪೧ನೆಯ ಹಾಡು

ಹರಿದಾಸ ಭಾವದಲ್ಲಿರುವ ಧನ್ಯತೆಯನ್ನು ದಾಸರು ಈ ಉಗಾಭೋಗದಲ್ಲಿ ಹೊರ ಹಾಕಿದ್ದಾರೆ.

### ೪೨ನೆಯ ಹಾಡು

ಹರಿನಾಮದ ಮಾಹಾತ್ಮ್ಯವು ಎಷ್ಟು ಘನವಾದುದೆಂಬುದನ್ನು ಈ ಉಗಾಭೋಗವು ವಿಶದಗೊಳಿಸುತ್ತಿದೆ.

### ೪೩ನೆಯ ಹಾಡು

ಹರಿದಾಸರಿಗೂ ಹರಿ ದ್ವೇಷಿಗಳಿಗೂ ಆಗುವ ಪರಿಣಾಮದ ತಾರತಮ್ಯವನ್ನು ಈ ಉಗಾಭೋಗದಲ್ಲಿ ಹೇಳಲಾಗಿದೆ.

### ೪೪ನೆಯ ಹಾಡು

ಹರಿಕೀರ್ತನೆಗಳನ್ನು ಹೇಳುವವರು ಹೇಗೊ ಹೇಗೊ ಕೂಗಿಕೊಂಡರೆ ಆಗದು. ಅದಕ್ಕೆ ತಕ್ಕ ತಾಳಬೇಕು ತಕ್ಕ ಮೇಳಬೇಕು ಎಂಬುದನ್ನು ದಾಸರು ಹೇಳುತ್ತ ಸಂಗೀತಗಾರರಿಗೆ ಬೇಕಾದ ಸುಲಕ್ಷಣಗಳನ್ನೆಲ್ಲವಿವರಿಸಿದ್ದಾರೆ.

೧ ಮೇಳ = ಹಿಮ್ಮೇಳ, ಗಳಶುದ್ಧಿ = ಶುದ್ಧವಾದ ಧ್ವನಿ, ಕಳವಳ = ಚಿಂತೆ, ಚಡಪಡಿಕೆ.

೨ ಯತಿ = ಪದ್ಯಕಾವ್ಯದಲ್ಲಿ ನಿಲ್ಲತಕ್ಕ ಸ್ಥಳ, ಗತಿ = ತಾಲಗತಿ, ಲಯ, ಕೃತಿಪತಿ = ಪ್ರದ್ಯುಮ್ನ (ಶ್ರೀಹರಿ), ರತಮುಖ = ಮಗ್ನವಾದ ಕಳೆ.

### ೪೫ ನೆಯ ಹಾಡು

ದಾಸರಿಗೆ ಒಂದೇ ನಾಮವು ಸದ್ಗತಿಗೆ ಸಾಧನವೆಂಬುದರ ನಿಶ್ಚಿತ ಕಲ್ಪನೆಯಾದುದು ಈ ಹಾಡಿನಲ್ಲಿ ಪ್ರಕಟವಾಗಿದೆ.

೧ ಉಭಯರಾಯರು = ಕೌರವಪಾಂಡವರು, ಇಭರಾಜಗಮನೆ = ಗಜಗಮನೆ (ದ್ರೌಪದಿ).

೨ ಋಷಿಪುತ್ರ = ಅಜಾಮಿಳ, ದಂದುಗ = ಕಷ್ಟ.

### ೪೬ ನೆಯ ಹಾಡು

ಪರಮಾತ್ಮನನ್ನು ಯೌಗಿಕದೃಷ್ಟಿಯಿಂದ ನೋಡು ಎಂದು ದಾಸರು ಈ ಹಾಡಿನಲ್ಲಿ [illegible]ದ್ದಾರೆ.

೧ ಕಣ್ಣೆನೊಳಗೆ=ಅಂತರಂಗದಲ್ಲಿ, ಒಳಗಣ್ಣು = ಜ್ಞಾನಚಕ್ಷು, ಆಧಾರ = ಮೂಲಾಧಾರಚಕ್ರ (ಜನನೇಂದ್ರಿಯದ ಮೇಲ್ಗಡೆಯಲ್ಲಿದೆ.), ಆರುಚಕ್ರ = ೧) ಮೂಲಾಧಾರ, ೨) ಸ್ವಾಧಿಷ್ಠಾನ, ೩) ಮಣಿಪುರ, ೪) ಅನಾಹತ, ೫, ವಿಶುದ್ಧ, ೬, ಆಜ್ಞಾ. ಇವುಗಳ ಸ್ಥಾನಗಳು ಕೆಳಗಿನಂತಿವೆ.

೧. ಜನನೇಂದ್ರಿಯ ಮೇಲ್ಗಡೆಯಲ್ಲಿ, ೨. ನಾಭಿಯ ಕೆಳಗೆ, ೩. ನಾಭಿ = ಹೃದಯದ ಹತ್ತಿರ, ೫. ಕಂಠ, ೬. ಭ್ರೂಮಧ್ಯ.

ಶೋಧಿಸಿ = ಹುಡುಕಿ, ಈಷಣ = ಮೂರು ಆಶೆಗಳು (ದಾರೇಷಣ = ವಿತ್ತೇಷಣ ಪುತ್ರೇಷಣ), ಸುಷುಮ್ನ = ಇಡಾಪಿಂಗಲ ನಾಡಿಗಳ ಮಧ್ಯದಲ್ಲಿರುವುದು.

೨ ಎವೆಹಾಕದೆ = ದೃಷ್ಟಿಯನ್ನು ಕೇಂದ್ರೀಕರಿಸಿ, ವಾಯುಬಂಧನ = ಪ್ರಾಣಾಯಾಮದಲ್ಲಿ (ಕುಂಭಕ = ಗಾಳಿಯನ್ನು ತಡೆದುಹಿಡಿಯುವುದು.)

ವಿ. ಸೂ.— ಪ್ರಾಣಾಯಾಮದಲ್ಲಿ ಉಸಿರು ತೆಗೆದುಕೊಳ್ಳುವುದು ಪೂರಕ. ಅದನ್ನು ತಡೆದು ನಿಲ್ಲಿಸುವುದು ಕುಂಭಕ, ಹೊರಬಿಡುವುದು. ರೇಚಕವೆಂಬ ಹೆಸರಿವೆ.

ನಾದ = ಒಳಗೆ ಕೇಳುವ ಧ್ವನಿ (ಅನಾಹತ).

೩ ಅಂಡ = ಬ್ರಹ್ಮಾಂಡ, ಭಾನುಮಂಡಲ ನಾರಾಯಣ = ಸೂರ್ಯಮಂಡಲದಲ್ಲಿರುವ ನಾರಾಯಣ, ಕುಂಡಲಿ (ಕುಂಡಲಿನಿ) = ನಾಭಿ ಬಳಿಯಲ್ಲಿರುವ ಸರ್ಪಾಕಾರದ ಚಕ್ರ.

## ೮೭ ನೆಯ ಹಾಡು

ಬೇರೆ ಬೇರೆ ಪುರಾಣಗಳನ್ನು ಕೇಳುವುದರಿಂದ ದೊರೆಯುವ ಫಲಗಳನ್ನು ಈ ಉಗಾಭೋಗದಲ್ಲಿ ವಿವರಿಸಲಾಗಿದೆ.

ರಾಮಾಯಣ ಅಪ್ಪುದು ಸಂತತಿಯಾಗದಿರುವವರು ರಾಮಾಯಣವನ್ನು ಕೇಳುವ ಪರಂಪರೆಯಿದೆ.

ತೃಪ್ತಿ = [illegible]

## ೪ ಪುರಾಣಕಥಾ ಸಂದರ್ಭ

### ೮೮ ನೆಯ ಹಾಡು

ಇದೊಂದು ವ್ಯಾಜಸ್ತುತಿಯ ರೀತಿ. ಪಾರ್ವತಿ ಮತ್ತು ಲಕ್ಷ್ಮಿಯರು ಪರಸ್ಪರ ವಿವಾದದಲ್ಲಿ ಹರಿಹರರ ಲೀಲೆಯನ್ನು ವಿವರಿಸಿದ ರೀತಿ ವಿನೋದಕರವಾಗಿದೆ.

೧ ಜಲದ = ಮೋಡ, ಜಲದ ನೀಲಗಾತ್ರ = ಮೇಘ ಶ್ಯಾಮ, ಬಿಳಿಯ ಜಡೆಯ ಮೈಯ = ಭಸ್ಮದಿಂದ ಬಿಳಿದಾದ ಜಡೆ ಮತ್ತು ಮೈಯುಳ್ಳವ, ಉದಕದೊಳಗೆ ವಾಸ = ಮತ್ಸ್ಯಾವತಾರ.

೨ ಶೃಂಗಿ = ಮಂದರಪರ್ವತ.

೩ ವಸುಧೆನೆಗಹಿಬೇರ ಮೇಲವ = ವರಾಹಾವತಾರ.

೪ ಕರುಳ ಕೊರಳಸರವು = ನರಸಿಂಹಾವತಾರ.

೫ ಧರಣಿಮೂರಡಿಬೇಡಲು = ವಾಮನಾವತಾರ, ಜಗದಕರ್ತೃ = ಪದವು ಬೇರೆಯಾದಂತಿದೆ.

೬ ಸುತನ ಕೊಂದ = ಮಗನಾದ ಗಣಪತಿಯ ರುಂಡ ಹಾರಿಸಿದ.

### ೮೯ ನೆಯ ಹಾಡು

ಶಿವನು ತ್ರಿಮೂರ್ತಿಗಳಲ್ಲಿ ಒಬ್ಬನಾದರೂ ಅವನಿಗೆ ಸರ್ವೋತ್ತಮತ್ವ ಸಲ್ಲದೆಂದು ದಾಸರು ಈ ಸುಳಾದಿಯಲ್ಲಿ ಹೇಳಿದ್ದಾರೆ.

೧ ದುರ್ವಾಸ = ಅತ್ರಿ ಮತ್ತು ಅನಸೂಯೆ ಇವರಲ್ಲಿ ಶಿವನ ಅಂಶದಿಂದ ಹುಟ್ಟಿದವ (ಭಾ-೪ ೧,೮-೫). ಶುಕ = ವ್ಯಾಸರು ಪುತ್ರಾರ್ಥಿಗಳಾಗಿ ತಪಸ್ಸು ಮಾಡಿದಾಗ, ಶಿವನ ಅಂಶದಿಂದ ಹುಟ್ಟಿದವ (ಭಾರ-ದ್ರೋಣ ೨೦೧), ಅಜಾತನಾಗಿಯೂ ಜಾತನಾಗಿ ಇರುತಿಪ್ಪ = ವಿಷ್ಣುವಿಗೆ ಜನ್ಮವಿಲ್ಲವಾದರೂ ಅವತಾರ ತಾಳುವುದರಿಂದ ಅವನು ಜಾತನೆಂದು ದಾಸರು ಹೇಳಿದ್ದಾರೆ.

೨ ಸಾರಂಗ = (ತ್ಸ ಶಾರ್ಙ್ಗ), ವಿಷ್ಣುವಿನ ಬಿಲ್ಲು, ಪಿನಾಕ = ಶಿವನ ಧನುಸ್ಸು —

ವಿ. ಸೂ.— ಈ ಕಥೆ ಮಹಾಭಾರತ ತಾತ್ಪರ್ಯನಿರ್ಣಯದ ಅ ೪/೪೬-೪೮.

೩ (ರಾಮಾ ಬಾಲಕಾಂಡ ೭೩).

೪ (ಹರಿವಂಶ ೨—೧೨೬)

೫ ರಾಮ ವಿಶ್ವರೂಪವಕಂಡು ಶಂಕರ—

೬ ( [illegible] ), [illegible] = [illegible] ದ್ದಾನೆ-

## ೯೦ ನೆಯ ಹಾಡು

ಈ ಸುಳಾದಿಯಲ್ಲಿ ದಾಸರು ತುಲಸಿಯ ಮಾಹಾತ್ಮ್ಯವನ್ನು ಬೇರೆ ಬೇರೆ ರೀತಿಯಲ್ಲಿ ವಿವರಿಸಿ ಅದನ್ನು ಪೂಜೆಗಾಗಿ ಬೆಳೆಸುವ ರೀತಿ-ನೀತಿಗಳನ್ನೂ ಹೇಳಿದ್ದಾರೆ.

೨ ತುಲಸಿಯನ್ನು ತೆಗೆಯುವದಕ್ಕೆ ನಿಷಿದ್ಧವಾದ ದಿನಗಳನ್ನು ಇದರಲ್ಲಿ ಸೂಚಿಸಲಾಗಿದೆ.

೨ ಅಂಗಾರಕ = ಮಂಗಳವಾರ, ಜಯಂತಿ = ದೇವರ ಹುಟ್ಟು ಹಬ್ಬ (ಉದಾ = ರಾಮನವಮಿ, ಕೃಷ್ಣಾಷ್ಟಮಿ), ವೈಧೃತಿ = ಸೂರ್ಯ ಚಂದ್ರರ ಒಂದು ಬಗೆಯ ಯೋಗ, ವ್ಯತಿಪಾತ = ಜ್ಯೋತಿಃಶಾಸ್ತ್ರದಲ್ಲಿ ಹೇಳಿದ ೧೮ ಯೋಗಗಳಲ್ಲಿಯ ೧೭ ನೆಯದು.

೨ ಸಂವತ್ಸರ = ವರ್ಷ, ಸಾರಂಗಧರ = (ತ್ಸ ಶಾರ್ಙ್ಗ) ಶಾರ್ಙ್ಗಧರ = ವಿಷ್ಣು.

೫ ವಿ.ಸೂ —

೧ ಒಂದೇ ಕೈಬೆರಳಿನಿಂದ ಮಾಡಿದ ಜಪಕ್ಕೆ ಒಂದು ಫಲ, ೨ ಒಂದೇ ಬೆರಳಗೆರೆಯ ಜಪಕ್ಕೆ ಐದುಮಡಿ ಫಲ, ೩ ಒಂದು ಪುತ್ರಜೀವಿಮಣಿ ಜಪಕ್ಕೆ ಹತ್ತುಮಡಿ ಫಲ, ४ ಒಂದು ಶಂಖಮಣಿಯ ಜಪಕ್ಕೆ ನೂರು ಮಡಿ ಫಲ, ೫ ಒಂದು ಹವಳಮಣಿ ಜಪಕ್ಕೆ ಸಾವಿರ ಫಲ, ೬ ಒಂದು ಮುತ್ತಿನ ಮಣಿ ಜಪಕ್ಕೆ ಹತ್ತು ಸಾವಿರ ಫಲ, ೭ ಒಂದು ಸುವರ್ಣ ಮಣಿ ಜಪಕ್ಕೆ ಹತ್ತುಲಕ್ಷ ಫಲ, ೮ ದರ್ಭೆಯನ್ನು ಧರಿಸಿ ಮಾಡಿದ ಒಂದು ಜಪಕ್ಕೆ ಕೋಟಿ ಫಲ, ೯ ತುಲಸೀಮಣಿಯ ಒಂದೇ ಒಂದು ಜಪಕ್ಕೆ ಅನಂತಫಲ.

## ೯೧ ನೆಯ ಹಾಡು

ಕಂಚಿವರದ ರಾಜನನ್ನು ರಾವುತನಂತೆ ಕುದುರೆಯ ಮೇಲೆ ಕುಳ್ಳಿರಿಸಿ ಮೆರವಣಿಗೆ ಮಾಡುವ ಒಂದು ಸಂಪ್ರದಾಯವಿರಬಹುದು. ಅದನ್ನು ಕಣ್ಣಾರೆ ಕಂಡ ದಾಸರು ಈಸುಳಾದಿಯಲ್ಲಿ ಆ ರಾವುತರಾಯನನ್ನು ಬಣ್ಣಿಸಿದ್ದಾರೆ (ಸಂ ೧ ಪು. ೨೩೮)

೧ ಪರಸಮಯ = ಎರಡನೆಯ ಮತತತ್ವಗಳು ಕಡೆಯ ಹೆಣ್ಣಗಂಡ ಮಾಡುವ ರಾಯ = (?)

೨ [illegible] = [illegible]

೩ ರೇವಂತ=ಸಂಜ್ಞಾ ಮತ್ತು ಸೂರ್ಯರ ಅಶ್ವಾವಸ್ಥೆಯಲ್ಲಿಯ ಮಗ ಇವನು ಗುಹ್ಯಕರ ಅಧಿಪತಿ (ಪಿಶಾಚೋಗುಹ್ಯಕಃ ಸಿದ್ಧೋಭೂ-ತೋಽಮೀ ದೇವಯೋನಯಃ ಅಮರ) ಇವನಿಗೆ ಅಶ್ವದ ಅಧಿಪತ್ಯ ವನ್ನು ಕೊಡಲಾಯಿತು. (ಭವಿ ಬ್ರಾಹ್ಮ ೭೯ ೧೨೪)

೩ ಕ್ರತು=ಯಜ್ಞ

೫ ಹಸ್ತಿಗಿರಿ=ಕಂಚಿ (ಸಂ ೧ ಪು ೨೩೮) ಉತ್ತರವೇರಿ=ಹಸ್ತಿ ಗಿರಿಯ ಉತ್ತರಭಾಗ ವಸ್ತು=ತತ್ತ್ವತಃ ಸತ್ಯ ಆಸರಿಸು=ಆಶ್ರಯಿಸು.

## ೯೨ನೆಯ ಹಾಡು

ಇದು ಶ್ರೀರಾಮನ ಚರಿತ್ರೆಯನ್ನೊಳಗೊಂಡು ಸುಳಾದಿ

೧ ದಿವೌಕಸರು=ದೇವತೆಗಳು, ಕೈಕೆ ಮುನಿದರೆ(ರಾಮಾ=ಅಯೋಧ್ಯಾ ಕಾಂಡ ೪೦-೪೪) ಪಂತಿದೇರ=ದಶರಥ (ತ್ಸ-ಪಂಕ್ತಿರಥ) ತಿಂತಿಣಿ= ಸಮೂಹ ಶೀಲ=ಸಾಮರ್ಥ್ಯ, ತಾರಕಬ್ರಹ್ಮದ್ವಿರೂಪ= ತಾರಕ ನಾದ ಬ್ರಹ್ಮನ ಪ್ರತಿರೂಪ.

೨ ತುರೀಯ = ನಾಲ್ಕನೆಯ, ಶ್ರೇಷ್ಠ, ಜಾಗೃತ್, ಸ್ವಪ್ನ, ಸುಷುಪ್ತಿ ಇವು ಮೂರು ಅವಸ್ಥೆಗಳು) ರಥಾಂಗಪಾಣಿ=ಚಕ್ರಪಾಣಿ ತಂಗು=ತಡೆ ತಗರು=ತಡೆ, ಸಾರಂಗಧಾಮ=ಶಾರ್ಙ್ಗ ವಿಭಾಷಿತ

೩ ವಿ. ಸೂ. ಈ ನುಡಿಯಲ್ಲಿ ದಾಸರು ರಾವಣನನ್ನು ಏಡಿಸಿ ಮಾತನಾಡಿದ್ದಾರೆ. ಅನುಜೆ=ಶೂರ್ಪಣಖಿ (ರಾವಣನ ತಂಗೆ) ಪುರವ—ಒಬ್ಬ=ಹನುಮಂತ, ಶರನಿಧಿಯ—ಒಬ್ಬ=ಅಂಗದ, ಸಿರಿಮುಡಿಯ—ಒಬ್ಬ=ರಾಮ ತೋಟಿ=ಜಗಳ

೪ ವಿ. ಸೂ. ಈ ನುಡಿಯಲ್ಲಿ ದಾಸರು ಹನುಮಂತನಾಗಿ ನಟಿಸಿದ್ದಾರೆ.

೫ ಕಟಕ=ಸೇನೆ

## ೯೩ ನೆಯ ಹಾಡು

ಇದೊಂದು ನಾಟ್ಯಗೀತವಿದ್ದಂತಿದೆ. ಅಲ್ಲಲ್ಲಿ ಸಂಭಾಷಣೆಗಳು ಕಾಣುತ್ತಿವೆ.

[illegible]

## ೫ ಭಾವಸಮಸ್ಯೆಗಳು

(೯೪ ಮತ್ತು ೯೬-೧೦೪)

ಈ ಭಾಗದಲ್ಲಿಯ ಹಾಡುಗಳ ಜಾತಿಗೆ ಮುಂಡಿಗೆ ಎಂಬ ಹೆಸರಿದೆ. ಇವೆಲ್ಲ ತತ್ತ್ವಜ್ಞಾನದ ರಹಸ್ಯವನ್ನು ಬೋಧಿಸುವ ಒಗಟುಗಳಾಗಿರುವವು. ನಾವು ಪ್ರಯತ್ನಮಾಡಿ ನೋಡಿದಾಗ ಇವುಗಳಿಗೆ ಸರಿಯಾದ ಅರ್ಥವನ್ನು ಹೇಳುವವರು ಯಾರೂ ಕಾಣಲಿಲ್ಲ. ಪರಂಪರೆಯು ನಷ್ಟವಾದುದರಿಂದ ಇಂದು ಇವುಗಳಿಗೆ ಅರ್ಥವನ್ನು ಹೇಳುವವರು ಏನೇನೊ ಹಾಳು ರಗಳೆಗಳನ್ನು ಹೇಳಿ ಬುದ್ಧಿವಂತರಿಗೆ ಒಪ್ಪಿಗೆಯಾಗದಂತೆ ವಿವರಿಸುತ್ತಾರೆ. ಆದುದರಿಂದ ನಾವು ಇವುಗಳ ಬಗೆಗೆ ಟೀಕೆಟಿಪ್ಪಣಿಗಳನ್ನು ಸದ್ಯ ಬರೆಯುತ್ತಿಲ್ಲ. ಸಮಾಧಾನಕರವಾಗುವಂತೆ ಇವುಗಳ ಅರ್ಥವನ್ನು ಹೇಳುವವರು ಯಾರಾದರೂ ಇದ್ದರೆ ಅವರು ಇವುಗಳ ವಿವರಣೆಯನ್ನು ಕೊಡಬೇಕು. ಅದನ್ನೊಂದು ಚಿಕ್ಕ ಸಂಪುಟವನ್ನಾಗಿ ನಾವು ಬಿಡಿಯಾಗಿ ಮುದ್ರಣವನ್ನು ಮಾಡಬಹುದು.

# ೬ ಜೀವನ ವೈವಿಧ್ಯ

## ೧೦೫ ನೆಯ ಹಾಡು

ಪುರಂದರ ದಾಸರು ಜೀವನವನ್ನು— ತುಂಬ ಸೂಕ್ಷ್ಮವಾಗಿ ನಿರೀಕ್ಷಿಸಿದವರು, ಬದುಕಿನಲ್ಲಿಯೆ ಲೋಪದೋಷಗಳನ್ನು ನೋಡಿ ವಿನೋದದ ಮಾತುಗಳಲ್ಲಿ ವಿಡಂಬನೆ ಮಾಡಿರುವರು. ಅಂಥ ಒಂದು ವಿಡಂಬನೆ ಈ ಪದ್ಯದಲ್ಲಿ ಇದೆ. ಭೋಗವಿಲಾಸವನ್ನು ಬಯಸುವ ಹೆಣ್ಣು ನಿಷ್ಠನಾದ ವೈದಿಕನನ್ನು ಲಗ್ನವಾದರೆ ಅವಳು ಹೇಗೆ ತಳಮಳಿಸ-ಬಹುದೆಂಬುದನ್ನು ಈ ಹಾಡಿನಲ್ಲಿ ನಾಟ್ಯಗೀತದ ರೂಪದಿಂದ ಹೇಳಿದ್ದಾರೆ.

೧ ತೊಳಸು = ಒಲೆಯಮೇಲಿಟ್ಟು ಕೈಯಾಡಿಸು, ಬಿನ್ನಣ = ಆಡಂಬರ

## ೧೦೬ ನೆಯ ಹಾಡು

ಮಾನವನ ಮನಸ್ಸನ್ನು ಒಂದು ಅಲೆದಾಡುವ ನಾಯಿಗೆ ಹೋಲಿಸಿ ದಾಸರು ಹಾಡಿದ್ದಾರೆ.

೧ ರಾಗಮಾಡು = ಬೊಗಳು

## ೧೦೭ ನೆಯ ಹಾಡು

ಮಾನವ ದೇಹವು ವ್ಯರ್ಥವಾಗಿ ಹೋಗುವಂಥದಲ್ಲ. ಅದು ಸಾಧನೆಯ ಫಲವನ್ನು ತುಂಬುವ ಪಾತ್ರೆಯಾಗಿರುವುದು. ಸಾಧಕನು ಭವವನು ತಿರಸ್ಕಾರದಿಂದ ನೋಡುವು-ದಿಲ್ಲ. ಈ ಮಾನವದೇಹದಿಂದ ಸರಿಯಾದ ಸಾಧನೆಯನ್ನು ಮಾಡಿ ಸಿದ್ಧಿಯನ್ನು ಪಡೆಯಲಿಕ್ಕಾಗುವುದೆಂಬ ವಿಚಾರದಲ್ಲಿ ಇರುತ್ತಾನೆ. ಅಂಥ ಸಾಧಕನನ್ನೇ ಒಬ್ಬ ಹೆಣ್ಣುಮಗಳನ್ನಾಗಿ ಕಲ್ಪಿಸಿ ಬರಿಯ ಬಿಂದಿಗೆಯನ್ನು ತುಂಬಿ ತರುವನೆಂದು ಹೇಳಿಸಿದ್ದಾರೆ ದಾಸರು ಈ ಹಾಡಿನಲ್ಲಿ.

೧ ಬಲಿಯಿಡು = ಬಲಿಕೊಡು, ಕಟ್ಟೆ = ಕಟ್ಟಿಸಿದ ಕೆರೆ

೪ ಜಿಲುವೆ = ಒರತೆ

## ೧೦೮ ನೆಯ ಹಾಡು

ಇಲ್ಲಿ ದಾಸರು ತುರುಕರು ಎಂಬ ಶಬ್ದವನ್ನು ವಿಶೇಷಾರ್ಥದಲ್ಲಿ ಬಳಸಿ ಹಾಡಿದ್ದಾರೆ. ತುರುಕರು ಅಂದರೆ ಆಕಳು ಮತ್ತು ಕರು, ನಮ್ಮ ವೈದಿಕಧರ್ಮದಲ್ಲಿ ಪಂಚಗವ್ಯಗಳಿಗೆ ಒಂದು ಧಾರ್ಮಿಕ ಮಹತ್ವವು ಇದ್ದೇ ಇದೆ. ಇದರ ಶಾಸ್ತ್ರೀಯ ಮಹತ್ವವನ್ನು ಇಂದಿನ ವಿಜ್ಞಾನಿಗಳು ಒಪ್ಪಿದ್ದಾರೆ.

೧ ಕರೆ = ಹಿಂಡು, ಕರಕರೆ = ಚರ್ಚೆ, ಉಪೇಕ್ಷೆ, ಎಂಜಲಹೋಹುದು = ಆಕಳ ಸಗಣಿಯಲ್ಲಿರುವ Picric acid ಹೊಲಸನ್ನು ತಿಂದು ಬಿಡುತ್ತಿದೆ. ತುರುಕರುವಿನ ಮಂತ್ರ = ಗೋಮಾತೆಯ ಸ್ತೋತ್ರ,

೨ ತುರುಕರ ಕೂದಲ = ಗಂಗಾವನ.

೩ ನೀರು = ಹಾಲು, ಅರಿಕೆ = ಅಜ್ಞಾನ.

### ೧೧೯ ನೆಯ ಹಾಡು

ಪಾಪೋಸು ಅಂದರೆ ಪಾದರಕ್ಷೆ ಅಥವಾ ಕಾಲ್ಮರಿ. ಈ ಶಬ್ದಕ್ಕೆ ದಾಸರು ಒಂದು ಜಾನಪದರೂಪದ ಅರ್ಥ ಕಲ್ಪಿಸಿ ಪಾಪ, ಓಸು (ಎಲ್ಲ ಪಾಪಗಳ) ಎಂದು ಈ ಹಾಡಿನಲ್ಲಿ ಶ್ಲೇಷ ಮಾಡಿದ್ದಾರೆ.

೧ ಅರ್ಜನೆ = ಗಳಿಕೆ, ಉರಗಾದ್ರಿ = ವೆಂಕಟಾಚಲ.

೨ ಸಜ್ಜನರು ಸಾಧನೆಯಿಂದ ಕಳೆದುಕೊಂಡ ಪಾಪವು ದುರ್ಜನರ ಪಾಲಿಗೆ ಹೋಗುವದೆಂಬುದು ನಮ್ಮ ಸಾಂಪ್ರದಾಯಿಕ ತಿಳುವಳಿಕೆ.

೩ ನಾಯಿ = ಅಜ್ಞಾನ, ಮುದುಟ್ಟಮಾಯಿ = ಮಾಯೆ, ಮಾಯ.

### ೧೧೦ ನೆಯ ಹಾಡು

ಸಾಧನಜೀವಿಯನ್ನು ಹಂಜಿಯನ್ನು ನೂಲುವ ಹೆಣ್ಣೆಂದು ಭಾವಿಸಿ ಆ ನೂಲುವ ಪರಿಭಾಷೆಗಳನ್ನೇ ಬಳಸಿ ಈ ಹಾಡನ್ನು ರಚಿಸಿದ್ದಾರೆ.

೧ ರಾಟಿಯ ವರ್ಣನೆ, ಮಣೆ = ರಾಟಿಯ ಮಣೆ, ಸಿರಿರಂಗರ = ಲಕ್ಷ್ಮಿ ನಾರಾಯಣರನ್ನು, ದರ್ಶನ = ತತ್ತ್ವಜ್ಞಾನ, ನುಲಿ = ಹಂಬಿಗೆ.

೨ ಅಳವು = ಪ್ರಮಾಣ, ನಾಸಿಕಾ = ರಾಟಿಯ ಒಂದು ಭಾಗ, ಮೂಗು.

ವಿ. ಸೂ.— ಇದನ್ನು ಬೆನಕದಿಂದ ತಿಕ್ಕಿ ಹದಗೊಳಿಸುತ್ತಾರೆ.

ಚಿಲ್ಲು = ಕದರಿನ ಚರ್ಮದ ಕಿವಿ, ವಿತಿ = ವಿರಕ್ತಿ.

೪ ಸಿಕ್ಕು = ತೊಡಕು.

೪ ಒಕ್ಕುಡಿತೆ = ಒಮ್ಮನಸ್ಸು.

೫ ಹುಂಜ = ಎಳೆಗಳ ಸಮೂಹ, ಸೀಳು = ನೂಲನ್ನು ಹಾಸು ಹೊಯ್ದು ಮಾಡಿದ ಎಳೆಗಳ ಸಮೂಹ.

೬ ಬದ್ಧ = ನಿಯಮದಂತೆ ಮಾಡಿದ.

### ೧೧೧ ನೆಯ ಹಾಡು

ಬಾಳಿನ ಗುಟ್ಟನ್ನು ಬಲ್ಲ ಪುರಂದರ ದಾಸರು ಈ ಹಾಡಿನಲ್ಲಿ ಮುಪ್ಪಿನ ಗಂಡನನ್ನು ಮಾಡಿಕೊಂಡ ತರುಣ ಸ್ತ್ರೀಯ ಕಳವಳವನ್ನು ಪ್ರಕಟಿಸಿದ್ದಾರೆ.

೧ ಪಡಿಪಾಟ= ಕಷ್ಟ, ದುರ್ದೆಸೆ

ಜಾಡಿ= ಉರುಟು ನೂಲಿನಿಂದ ಮಾಡಿದ ಹಾಸುವಸಾಧನ, ಮಿಡಿಗೊಂಡು= ಮುದ್ದೆಯಾಗಿ

### ೧೧೨ ನೆಯ ಹಾಡು

ಈ ಹಾಡಿನಲ್ಲಿ ಅನೇಕ ಕಾಯಿಗಳ ಹೆಸರು ಶ್ಲೇಷಾರ್ಥಗಳಲ್ಲಿ ಬಂದಿದೆ ಇದೊಂದು ಸಾಹಿತ್ಯಕೇಳಿ.

೧ ದೇವನೀಕಾಲು= ಕಾಯಿಯ ಹೆಸರು, ಬಾಳೆ=ಬಾಳ್ವೆ, ಕವಳಿ= ಕಷ್ಟ, ನೆಂಬೆ=ನಿಂಬೆ

೨ ಕಾತರಿ= ಕಾತರ, ಕಾಯಿಯ ಹೆಸರು, ಚಿಲ್ಲ ಕಾಯಿ= ನೀರನ್ನು ತಿಳಿಮಾಡಲು ಬಳಸುವ ಬೀಜ, ಕಡಲಿ= ಕಡಲು

೩ ಉದ್ದು= ತಿಕ್ಕು

## ೭ ಜೀವನಾನುಭವಚಿತ್ರಣ

### ೧೧೩ ನೆಯ ಹಾಡು

ಐಶ್ವರ್ಯ ಸಂಪನ್ನರಾದ ಶ್ರೀ ದಾಸರು ವೈರಾಗ್ಯ ಸಂಪನ್ನರಾಗಿ ದಾಸ ದೀಕ್ಷೆಯನ್ನು ಪಡದ ಮೇಲೆ ತಮ್ಮ ಪೂರ್ವಜೀವನ ಮತ್ತು ಈಗಿನ ಜೀವನಗಳನ್ನು ತೂಗಿ ನೋಡಿ ತೆಗೆದ ಉದ್ಗಾರಗಳಿವು. ಇದರಲ್ಲಿಯ ಹೆಂಡತಿ ಸಂತತಿಸಾವಿರವಾಗಲಿ ಆ ಪತ್ನಿಯುತಾ ಪ್ರೀತಿಯಿಂದಲಿ ಗೋಪಾಳ ಬುಟ್ಟಿಯ ಹಿಡಿಸಿದಳಯ್ಯ ಮೊದಲಾದ ಮಾತುಗಳು ದಾಸರು ಹೆಂಡತಿಯಿಂದ ಪ್ರಭಾವಿತರಾಗಿ ವೈರಾಗ್ಯ ಶಾಲಿಗಳಾದರೆಂಬುದನ್ನು ಸೂಚಿಸುತ್ತಿದೆ.

೧ ಪಂಡಿಗೆ=ತಂಬೂರಿ ದಂಡಿಗೆ, ಬೆತ್ತಹಿಡಿ=ದಾಸದೀಕ್ಷೆವಹಿಸು

### ೧೧೪ ನೆಯ ಹಾಡು

ಈ ಹಾಡಿನಲ್ಲಿ ದಾಸರು ಕಂಡಕನಸನ್ನು ವಿವರ ವಿವರವಾಗಿ ವರ್ಣಿಸಿದ ಮಾತುಗಳು ಬಂದಿವೆ. ಈ ಕನಸು ದಾಸರ ಮನಸ್ಸಿನ ಮೇಲೆ ತುಂಬ ಪ್ರಭಾವವನ್ನು ಬೀರಿರಬೇಕು.

೨ ಆಸುರ=ನಿಷ್ಠುರ.

೩ ಇಲ್ಲಿಯ ಎಳೆಯ ಪ್ರಾಯದ ಚೆಲುವೆಯು ದಾಸರಿಗೆ ಪರಿಶುದ್ಧವಾದ ಜ್ಞಾನ ದೇವತೆಯಾಗಿ ಕಂಡಿದ್ದಾಳೆ.

೪ ಕನಸಿನಲ್ಲಿ ಕಂಡ ಕೃಷ್ಣ ಮಾಯವಾದ ಮೇಲೆ ಈ ಭೂಮಿಪತಿಯಾದ ಪುರಂದರವಿಟ್ಠಲನು ದಾಸರ ಕಣ್ಣೆದುರಿಗಿದ್ದಾನೆ.

### ೧೧೫ನೆಯ ಹಾಡು

ಇದೊಂದು ದಾಸರು ದೇವರಕೂಡ ಆಡಿದ ಲೀಲೆಯ ಕಥೆಯಿಂದ ಕೂಡಿದುದಾಗಿದೆ. ಈ ಹಾಡಿನಲ್ಲಿ ನುಡಿನುಡಿಯಲ್ಲಿಯೂ ಹೆಣೆದುಕೊಂಡ ಕಥೆಯು ದಾಸರ ಅನುಯಾಯಿಗಳಿಗೆಲ್ಲ ಸಾಕಷ್ಟು ಪರಿಚಿತವಾದುದು.

೧ ವಿಜಯ=ಅರ್ಜುನ, ಸಹಾಯ=ಸಾರಥಿಯಾದವ, ಟೊಣೆ=ಹೊಡೆ; ಇಕ್ಕರಿಸು.

### ೧೧೬ನೆಯ ಹಾಡು

ದೊರೆಯ ಭಾಗ್ಯಕ್ಕೂ ಹರಿದಾಸರ ಭಾಗ್ಯಕ್ಕೂ ತುಲನೆಮಾಡಿ ಹಾಡಿದ ಗೀತವಿದು. ಶ್ರೀಕೃಷ್ಣದೇವರಾಯನು ದಾಸರ ವೈರಾಗ್ಯವನ್ನು ಪರೀಕ್ಷಿಸಲು ಯತ್ನಿಸಿದಾಗ ಈ ಹಾಡಿನ ರಚನೆಯಾಯಿತೆಂದು ಹೇಳುವ ಪರಂಪರೆಯಿದೆ.

ಸಾಟಿಮಾಡು=ಹೋಲಿಸು, ಸರಕು=ಆಹಾರಪದಾರ್ಥ.

[illegible] ಯಜಮಾನ ವಿಟ್ಠಲ.

೧೧೭ನೆಯ ಹಾಡು

ಈ ಸುಳಾದಿಯಲ್ಲಿ ದಾಸರು ತಮ್ಮಲ್ಲಿ ನಿಷ್ಠೆಯನ್ನು ಹುಟ್ಟಿಸಿದ ಶ್ರೀಮನ್ಮಧ್ವಾಚಾರ್ಯರ ತತ್ತ್ವಜ್ಞಾನ ಮಾಹಾತ್ಮ್ಯವನ್ನು ವಿವರವಿವರವಾಗಿ ಹೇಳಿದ್ದಾರೆ.

೧ ಒಬ್ಬ-ವೆಂದ=ನಾಸ್ತಿಕ ಮತಸ್ಥಾಪಕರು, ೨ ಒಬ್ಬ-ವೆಂಬ=ವಿಶಿಷ್ಟಾದ್ವೈತ ಪಂಥದವರು, ೩ ಒಬ್ಬ-ವೆಂಬ=ಅದ್ವೈತಮತವಾದಿಗಳು.

೨ ಪರದೈವತ=ಸರ್ವೋತ್ತಮ, ಅರಿತೂ ಅರಿಯರು=ನಿಜವಾದ ಜ್ಞಾನವಾಗಿಲ್ಲ. ೩ ಎಲವ=ಬೂರಲಮರ. ೪ ಸೋಽಹಂ=ಅಹಂಬ್ರಹ್ಮ. ದಾಸೋಽಹಂ=ಶ್ರೀಹರಿಯದಾಸ. ೫ ವೈಷ್ಣವ=ವಿಷ್ಣುಭಕ್ತಿ, ವೈಷ್ಣವ-ಕೆಲವರು=ಶುದ್ಧ ಭಾಗವತರು. ೬ ಏಕವಿಂಶತಿಕುಭಾಷ್ಯ= (ಸಂ.೧ ಪು. ೧೯೧).

೧೧೮ನೆಯ ಹಾಡು

ಈ ಹಾಡಿನಲ್ಲಿಯ ರೂಪಕದ ರೀತಿಯನ್ನು ನೋಡಿದರೆ ಪುರಂದರದಾಸರು ತಮ್ಮ ಪ್ರೀತಿಯ ಮಗುವನ್ನು ಕಳೆದುಕೊಂಡಾಗ ಕಳವಳದಪಾಡನ್ನು ತೋಡಿಕೊಂಡದ್ದು ಇದು ಆಗಿರಬಹುದೆಂದು ತೋರುತ್ತಿದೆ.

೧ ಪಾಗ=ಹಾಗ ಒಂದುನಾಣ್ಯ, ೨ ಸಾಮಜಪೋಷಕ=ಗಜೇಂದ್ರನಿಗೆ ಸಹಾಯಮಾಡಿದ ಹರಿ.

೧೧೯ನೆಯ ಹಾಡು

ದಾಸರು ನಿತ್ಯವೂ ಯಾಯಿವಾರ (ಗೋಪಾಳ ಬೇಡಿ) ವನ್ನು ಮಾಡಿ ಸಂಸಾರವನ್ನು ಸಾಗಿಸಬೇಕಾಗುತ್ತಿತ್ತು. ಹೀಗೆ ಯಾಯಿವಾರದ ಕಾಲದಲ್ಲಿ ಅನುದಾರವೃತ್ತಿಯಿಂದ ನಡೆದುಕೊಂಡ ಸಾಮಾನ್ಯ ಸ್ತ್ರೀಯೊಬ್ಬಳನ್ನು ಕಂಡು ಆಡಿದಮಾತುಗಳು ಇಲ್ಲಿ ಹಾಡಾಗಿ ರೂಪುಗೊಂಡಿವೆ.

೧ ಗೈಯ್ಯಾಳಿ=ತೊತ್ತು, ರಜ=ಧೂಳಿ.

೧೨೦ನೆಯ ಹಾಡು

ಬಡವರಾಗಿದ್ದರೂ ಹೃದಯದ ಔದಾರ್ಯವನ್ನು ತೋರಿಸಿದವರನ್ನು ದಾಸರು ಪ್ರಶಂಸಿಸದೆ ಬಿಟ್ಟಿಲ್ಲ. ಇಲ್ಲಿ ರಾಗಿಯನ್ನು ಭಿಕ್ಷೆಹಾಕಿದ ಒಬ್ಬ ಹೆಣ್ಣುಮಗಳನ್ನು ರಾಗಿಯೆಂಬ ಶಬ್ದದಶ್ಲೇಷದಿಂದ ಆಶೀರ್ವದಿಸಿದ್ದಾರೆ.

೧ ಭೋಗ್ಯರು=ಸುಖಿಗಳು, ೫ ಆರರಮಾರ್ಗ=ಷಡ್ವೈರಿಗಳದಾರಿ ಮೂರರಮಾರ್ಗ=ತ್ರಿಗುಣಗಳದಾರಿ, ಬೆರೆತವರಾಗಿ=ಮೈಗೂಡಿಸಿಕೊಂಡು

೬ ಕಂರುಪು=ಶಿವ, ವಿಷ್ಣು ಭಕ್ತ ದ ಚಿಹ್ನ

### ೧೨೧ನೆಯ ಹಾಡು

ಅನ್ನದಾನವು ಸರ್ವಶ್ರೇಷ್ಠವೆಂದೂ ಆವಶ್ಯಕವೆಂದೂ ತಿಳಿದ ದಾಸರು ಅದರ ವಿಷಯಕವಾದ ಬೋಧೆಯನ್ನು ಸಾಹಿತ್ಯಪರ್ಯಾಯದಲ್ಲಿ ಈ ಹಾಡಿನಲ್ಲಿ ಹೇಳಿದ್ದಾರೆ.

೧ ಕೋಟಲೆ = ಕಷ್ಟ, ಕತ್ತಲಿಕ್ಕು = ಕತ್ತಲೆ ಬರು.

### ೧೨೨ನೆಯ ಹಾಡು

ಈ ಹಾಡಿನ ಹಿಂದೆ ಪುರಂದರದಾಸರ ಜೀವನದಲ್ಲಿಯ ಒಂದು ಅದ್ಭುತಘಟನೆಯು ಅಡಕವಾಗಿದೆಯೆಂದು ಹೇಳುತ್ತಾರೆ. ದಾಸರ ಪ್ರೀತಿಯ ಶಿಷ್ಯನಾದ ಅಪ್ಪಣ್ಣಭಾಗವತನ ವೇಷದಿಂದ ದೇವರು ಬಂದು ದಾಸರಿಗೆ ನೆರವಾದನೆಂಬ ಪ್ರವಾದವೇ ಅದು. ಬಂದವನು ಅಪ್ಪಣ್ಣಭಾಗವತನೆಂಬವನು ಅಲ್ಲವೆಂದು ದಾಸರಿಗೆ ಗೊತ್ತಾದಾಗ ಅವರಿಗೆ ಶ್ರೀಹರಿಯ ದರ್ಶನದಲ್ಲಿ ಒಂದುಬಗೆಯ ಉತ್ಕಟತೆಯುಂಟಾಗಿ ಈ ಹಾಡನ್ನು ಹಾಡಿದರೆಂದು ಪ್ರತೀತಿಯಿದೆ.

ಪಾಯ್ಪಟ್ಟ = ಕಾಲಿನ ಆಭರಣ (ತ್ಸ=ಪಾದಪಟ್ಟಿಕಾ), ಚೌಕುಳಿ = ನಾಲ್ಕು ಮುತ್ತಿನಿಂದ ಮಾಡಿದ ಕಿವಿಯ ಆಭರಣ.

### ೧೨೩ನೆಯ ಹಾಡು

ಪುರಂದರದಾಸರು ಕನಕದಾಸರು ಸಮಕಾಲದಲ್ಲಿದ್ದರೆಂಬುದನ್ನು ಈ ಹಾಡು ಸೂಚಿಸುವುದಲ್ಲದೆ ಕನಕದಾಸರು ವ್ಯಾಸರಾಯರ ವಿಶೇಷ ಆದರಕ್ಕೆ ಪಾತ್ರರಾಗಿದ್ದರೆಂಬುದನ್ನು ತಿಳಿಸುತ್ತಿದೆ,

೧ ಹರಿದಿವಸ = ಏಕಾದಶಿ, ತತ್ತ್ವೇಶರು = (ಸಂ. ೧ ಪರಿಶಿಷ್ಟ ೪).

### ೧೨೪ನೆಯ ಹಾಡು

ಗುರುಗಳಾದ ವ್ಯಾಸರಾಯರು ಪರಂಧಾಮಕ್ಕೆ ತೆರಳಿದಮೇಲೆ (ಕ್ರಿ. ಶ. ೧೫೩೯) ದಾಸರು ಅವರನ್ನು ಕುರಿತು ರಚಿಸಿದ ಗೀತವಿದು.

೧ ಚಿತ್ತೈಸು = ಹೋಗು, ಪಿಡಿ = ಹಿಡಿಕೆ. ೨ ಹಾಟಕ = ಬಂಗಾರ. ೫ ಅರವಿಂದಾಸನ = ಬ್ರಹ್ಮ.

### ೧೨೫ನೆಯ ಹಾಡು

ಗಿರಿಯ ವೆಂಕಟೇಶನ ಮೂರ್ತಿಯನ್ನು ಕಣ್ಣಾರೆಕಂಡ ದಾಸರು ಅದರ ವಾಸ್ತವ ಸ್ವರೂಪವನ್ನು ಸಾಹಿತ್ಯವನ್ನಾಗಿ ಈ ಸುಳಾದಿಯಲ್ಲಿ ಹರಿಸಿದ್ದಾರೆ.

೧ ಪರೆ = ಚಂದ್ರ, ಮಧುಕರ = ಗುಂಗೀಹುಳ, ಭೃಂಗ, ಭ್ರೂ = ಹುಬ್ಬು, ಶ್ರೀಕಾರದ ಕರ್ಣಗಳು = ಶ್ರೀ ಅಕ್ಷರದಂತೆ ಇರುವ ಕಿವಿಗಳು, ಅದಳು = ಹೂವು

ಚುಬುಕ = ಗದ್ದ, ಸ್ಫುರಿತ = ಒಪ್ಪುವ, ತ್ರಿರೇಖೆ = ಕೊರಳ ಮೇಲಿನ ಮೂರು ಗೆರೆಗಳು, ಅರಿ = ಚಕ್ರ, ಜಾನು = ಮೊಣಕಾಲು, ಜಂಘೆ = ಕಣಕಾಲು, ಮಾಂದಳಿರು = ಮಾವಿನ ತಳಿರು,.

೨ ದಾಮ = ನಡುಪಟ್ಟಿ, ಜಾಂಬೂನದ = ಬಂಗಾರ, ಸಟ = ಛಾಯೆ, ಸೂತ್ರ = ಜನಿವಾರ, ಭಾಪುರಿ = (ಬಾಹುಪೂರ) ಭುಜಕೀರ್ತಿ, ವೆಂಗಳಪ್ಪ = ವೆಂಕಟೇಶ.

೩ ತಮ = ವೇದಕದ್ದ ಶಂಖಾಸುರ, ಸುಮನಸೇಂದ್ರನತನೂಭವ = ಇಂದ್ರನ ಮಗ (ಸುಗ್ರೀವ–ಅರ್ಜುನ),

ವಿ. ಸೂ: ಈ ಮಾತನ್ನು ರಾಮಕೃಷ್ಣಾವತಾರಗಳೆರಡಕ್ಕೂ ಅನ್ವಯಿಸಬಹುದು.

ಮೂರೂರು = ತ್ರಿಪುರ.

### ೧೨೬ನೆಯ ಹಾಡು

ದಾಸರು ಬೇಲೂರಿಗೆ ಹೋದಾಗ ತಮ್ಮ ಧರ್ಮಪತ್ನಿಗೆ ದೇವರಮೂರ್ತಿಯನ್ನು ತೋರಿಸುತ್ತ ಈ ಹಾಡನ್ನು ಹಾಡಿದ್ದಾರೆ.

೨ ಸೊಂಪು = ಚೆಲುವಿಕೆ. ೪ ಪೆಂಡೆಯ = ವೀರಪೆಂಡೆಯ. ೫ ವೇಲಾಪುರ = ಬೇಲೂರು (ಸಂ. ೧ ಪು. ೨೩೬.)

### ೧೨೭ನೆಯ ಹಾಡು

ತಾವು ರಚಿಸಿದ ಸಾಹಿತ್ಯವಿಧಗಳ ಸಂಖ್ಯೆಗಳನ್ನು ದಾಸರು ಈ ಹಾಡಿನಲ್ಲಿ ಹೇಳಿದ್ದಾರೆ.

ಕ್ಲುಪ್ತಿ = ಕ್ರಮ, ವಾಸುದೇವ–ವ್ಯಾಸರಾಯರ ಪರ್ಯಂತ = ಅವರೋಹಣ ತಾರತಮ್ಯದ ರೀತಿಯಲ್ಲಿ, ಕೇದಾರ = (ಸಂ. ೧ ಪು. ೨೦೯), ರಾಮೇಶ್ವರ = (ಸಂ. ೧ ಪು. ೨೩೬.)

ವಿ. ಸೂ. :

| | | |
|---|---|---|
| ಕ್ಷೇತ್ರಮಾಹಾತ್ಮೆ | — | ೧ ಲಕ್ಷ ೨೫ ಸಾವಿರ |
| ೨ ಸುಳಾದಿ | — | ೬೪ ಸಾವಿರ |
| ನಾಮಾವಳಿ = ದೇವತಾಸ್ತೊತ್ರ | — | ೩೫ ಸಾವಿರ |

೩ ಬ್ರಹ್ಮಲೋಕ, ಕೈಲಾಸ, ಅಷ್ಟ-

| | | | |
|---|---|---|---|
| | ದಿಕ್ಪಾಲಕರ ಮಾಹಾತ್ಮ್ಯೆ | — | ೫೦ ಸಾವಿರ |
| | ಪುರಾಣಕಥೆಗಳ ಸಾರ | — | ೯೦ ಸಾವಿರ |
| ೪ | ಆಫ್ರಿಕ-ಕಲ್ಯಾಣದೇಶ | — | ೬೦ ಸಾವಿರ |
| ೬ | ೫-೬ ನುಡಿಗಳು | — | ೨೫ ಸಾವಿರ |
| | | | ೪-೪೯ ಸಾವಿರ |

ವಿ. ಸೂ.: ನಾವು ಅವಲಂಬಿಸಿದ ಪ್ರತಿ ಪ್ರಾಚೀನ ಪ್ರತಿಯಾಗಿದೆ. ಅದು ಸು. ೧೦೦ವರ್ಷಗಳ ಹಿಂದೆ ಮದ್ರಾಸದಲ್ಲಿ ಅಚ್ಚಾಗಿದೆ. ಇದರಲ್ಲಿ ಹೇಳಿದಂತೆ ಕೂಡಿಸಿನೋಡಿದರೆ ಪದಸಂಖ್ಯೆ ೪ ಲಕ್ಷ ೪೯ ಸಾವಿರವಾಗುತ್ತಿದೆ. ಇದೇ ಹಾಡಿನ ಕೊನೆಯ ನುಡಿಯಲ್ಲಿ ಇವುಗಳ ಸಂಖ್ಯೆ ೪ ಲಕ್ಷ ೬೯ ಸಾವಿರವೆಂದು ಹೇಳಿದೆ. ಹೀಗಾಗಿ ಒಂದಕ್ಕೊಂದು ಹೊಂದುವುದಿಲ್ಲ. ಮೇಲಾಗಿ ಮುದ್ರಿತ ಬೇರೆ ಪ್ರತಿಗಳಲ್ಲಿ ೪ ಲಕ್ಷ ೭೫ ಸಾವಿರವೆಂದು ಕಾಣಿಸಿದೆ. ಹೀಗಾಗಿ ಸಂಖ್ಯೆಯ ವಿಚಾರದಲ್ಲಿ ಭೇದವು ಕಂಡುಬರುತ್ತಿದೆ. ಬೇರೆ ಪ್ರಾಚೀನ ಆಧಾರ ಸಿಕ್ಕುವ ವರೆಗೆ ಇದನ್ನು ಹಾಗೆ ಉಳಿಯಗೊಡುವುದು ಲೇಸು.

# ೮ ಮಂಗಲಮ್

### ೧೨೮ನೆಯ ಹಾಡು

ಪರಮಾತ್ಮನಿಗೆ ಫಲಹಾರವನ್ನು ಸಮರ್ಪಿಸುವ ಸಂದರ್ಭದ ಹಾಡಿದು. ಇದು ಪೂಜಾತತ್ತ್ವದಲ್ಲಿ ಬರಬೇಕಾದ ಗೀತ. ಆದರೆ ಆಮೇಲೆ ಇದು ದೊರೆತುದರಿಂದ ಇದನ್ನು ಇಲ್ಲಿ ಸೇರಿಸಲಾಗಿದೆ.

೧ ಶೇಷ = ಮಿಕ್ಕಿದ, ಉಳಿದ, ಮೂಗುದಾಳು = ಹೆಸರುಬೇಳೆ, (ತ್ಸಮುದ್ಗ.)

೨ ಷೋಡಶೋಪಚಾರ = ಆಸನಂ ಸ್ವಾಗತಂ ಪಾದ್ಯಮರ್ಘ್ಯಮಾಚಮನೀಯಕಮ್ | ಮಧುಪರ್ಕಾಚಮಸ್ನಾನಂ ವಸನಾಭರಣಾನಿಚ || ಗಂಧಪುಷ್ಪೇಧೂಪದೀಪೌ ನೈವೇದ್ಯಂ ವಂದನಂತಥಾ ||

(Apte. p. 936)

### ೧೨೯ನೆಯ ಹಾಡು

ಇದೊಂದು ದಶಾವತಾರದ ಲೀಲೆಗಳನ್ನು ಒಳಗೊಂಡ ಮಂಗಳದ ಪದ್ಯ.

೩ ತಾಮರಸಸಂಭವ = ಬ್ರಹ್ಮ.

೬ ಪಾರ್ಥಿವಾಂತಕ = ಕ್ಷತ್ರಿಯರ ವೈರಿ, ಪರಶುರಾಮ.

೯ ಅಂಬು = ಬಾಣ.



# ಪರಿಶಿಷ್ಟ ೧

**ಶಬ್ದಾರ್ಥ :**

**ಸಂದರ್ಭ ಕಥೆ :**

**ವಿವರಣೆ :** ( ಭೌಗೋಲಿಕ, ಐತಿಹಾಸಿಕ ವಿಷಯ ಸಹಿತ )

# ಪರಿಶಿಷ್ಟ ೨

( ಹಾಡುಗಳ ಅಕಾರಾದಿ ಸೂಚಿ )

**ದಾಸರ ವಂಶಾವಳಿ :**

**ದಾಸರು ಸಂದರ್ಶಿಸಿದ ತೀರ್ಥಕ್ಷೇತ್ರಗಳು**

# ಹಾಡುಗಳ ಅಕಾರಾದಿ

೨೮ ಏನ ಬೇಡಲಿ ಸ್ವಾಮಿ ನಿನ್ನ
೨೯ ಏನಾದರೂ ಒಂದಾಗಲಿ-ನಮ್ಮ-
೩೦ ಏನು ಕೌತುಕ ಕೃಷ್ಣ ತಾನೇ ಕನಸಿನೊಳು
೩೧ ಏನೆಂದಳಯ್ಯ ಸೀತೆ
೩೨ ಏಳುತ್ತ ಗೋವಿಂದಗೆ ಕೈ ಮುಗಿಯುವೆ (ಉ)
೩೩ ಒಡಲೊಳು ಪೋಗದನಕ ಆರೆ ಬಿಡರು ನಾಮಸುಧೆಯ (ಉ)
೩೪ ಒಂದೇನಾಮವು ಸಾಲದೆ-ಶ್ರೀಹರಿಯೆಂಬ-
೩೫ ಒಬ್ಬ ಆಚಾರ್ಯನು ದೈವವೇ ಇಲ್ಲವೆಂಬ (ಸು)
೩೬ ಒಬ್ಬರ ಬಂಟನಾಗಿ ಕಾಲಕಳೆವುದಕಿಂತ (ಉ)
೩೭ ಒಂಬೊತ್ತು ಬಾಗಿಲೊಳು ಒಂದು ದೀಪವ ಹಚ್ಚಿ
೩೮ ಒಲ್ಲೆನೆ ವೈದಿಕ ಗಂಡನ—ನಾ—
೩೯ ಕಣ್ಣಲಿ ನೀರಿಲ್ಲ ಮನದಲ್ಲಿ ಕರಣೆಲ್ಲ (ಉ)
೪೦ ಕಣ್ಣಿನೊಳಗೆ ನೋಡೊ ಹರಿಯ—ಒಳ—
೪೧ ಕದವನಿಕ್ಕಿದಳಿದೆಕೊ ಗಯ್ಯಾಳಿ ಮೂಳಿ
೪೨ ಕನಕದಾಸನಮೇಲೆ ದಯಮಾಡಲು-ವ್ಯಾಸ-
೪೩ ಕೇಶವ ಮಾಧವ ವಿಠಲೆಂಬ ದಾಸಯ್ಯ ಬಂದಕಾಣೆ
೪೪ ಕೊಟ್ಟವನು ಸರಿಯೆ ಕೊಡದೆ—
೪೫ ಖಳರ ನೋಟವೇ ಹಾವಲ್ಲದೆ ಹಾವ ಬೇರಿನ್ನರಸಲೇತಕೆ (ಸು)
೪೬ ಗಜತುರಗ ಸಹಸ್ರದಾನ (ಉ)
೪೭ ಗಿಳಿಯು ಪಂಜರದೊಳಿಲ್ಲ-ಶ್ರೀರಾಮರಾಮ- (ಉ)
೪೮ ಗುರಿಯು ನೆಚ್ಚವನೆ ಬಿಲ್ಲಾಳು (ಉ)
೪೯ ಗುರುಕರುಣವಾಹೋದು ಬಲು ದುರ್ಲಭವಯ್ಯ (ಉ)
೫೦ ಚಿತ್ತೈಸಿದ ವ್ಯಾಸರಾಯ
೫೧ ಜಯಮಂಗಳಂ ನಿತ್ಯ ಶುಭಮಂಗಳಂ
೫೨ ಜಲದ ನೀಲಗಾತ್ರ ಏತರ ಚೆಲುವ ರುಕ್ಮಿಣಿ—
೫೩ ಜೀವಜೀವಕೆ ಭೇದ ಜಡಜಡಕೆ ಭೇದ (ಉ)
೫೪ ಡೊಂಕುಬಾಲದ ನಾಯಕರೆ
೫೫ ತನುವೆಂಬ ದೊಡ್ಡ ದೋಣಿಯಲಿ (ಉ)
೫೬ ತಾರಕ್ಕ ಬಿಂದಿಗೆ ನೀರಿಗೆ ಹೋಗುವೆ
೫೭ ತಾಳಬೇಕು ತಕ್ಕ ಮೇಳಬೇಕು—ಶ್ರೀ—
೫೮ ತುರುಕರು ಕರೆದರೆ ಉಣಬಹುದಣ್ಣ
೫೯ ದರಿದ್ರರೆನಬಹುದೆ ಹರಿದಾಸರ (ಉ)
೬೦ ದಾಸನಾಗುವುದಕ್ಕೆ ಏಸುಜನ್ಮದ ಸುಕೃತ (ಉ)

೬೧ ದಿನ ದಿನ ದಿನದಿನಾ ನೆನೆದು (ಉ)
೬೨ ನಡುಮನೆಯೊಳಗೊಂದು ನಾಲ್ಕು ತೆಂಗಿನಕಾಯಿ-ಹೇಗಿಣಿ ಹೇಗಿಣಿಯೆ-
೬೩ ನರಸಿಂಹನಪಾದಭಜನೆಯ ಮಾಡೊ
೬೪ ನಾರಾಯಣಗೋವಿಂದ—ಹರಿಹರಿ—
೬೫ ನಾರಿ ರನ್ನೆಯೆ ಕಂಡೆಯ
೬೬ ನಿನಗೆ ನೀನೆಮೋಹ ನಿನಗೆ ನೀನೆಪ್ರೀತಿ (ಉ)
೬೭ ನಿನ್ನ ಕಾಲಹೆಜ್ಜೆಯ ಪಿಡಿದು ನಾನಿಲುವೆ (ಉ)
೬೮ ನಿನ್ನಡಿ ಇಳೆಯನೀರಡಿಮಾಡಿತು (ಉ)
೬೯ ನಿನ್ನದಾಸನಾಗಿ ನಿನ್ನೆಂಜಲವನುಂಡು (ಉ)
೭೦ ನಿನ್ನನೆ ಪಾಡುವೆ ನಿನ್ನನೆ ಪೊಗಳುವೆ (ಉ)
೭೧ ನಿನ್ನ ಬೊಮ್ಮ ಮೂರುತಿಗೆ ನಮೋ ನಮೋ (ಉ)
೭೨ ನಿನ್ನಾಧೀನ ಉನ್ನತನು ಮನ (ಸು)
೭೩ ನಿನ್ನಾಳೆಂದಡೆ ಹರಿಯೇ ಇನ್ನೇನಿನ್ನೇನು (ಉ)
೭೪ ನಿಮ್ಮ ಭಾಗ್ಯ ದೊಡ್ಡದೊ ನಮ್ಮ ಭಾಗ್ಯ ದೊಡ್ಡದೊ
೭೫ ನೀನೆ ಅಚ್ಯುತ ನೀನೆ ಮಾಧವ
೭೬ ನೀನೇಕಾರಣ ಅಕಾರಣರು ಬೊಮ್ಮಾದಿಗಳು (ಸು)
೭೭ ಪಾಪೋಸು ಹೋದವಲ್ಲ-ಸ್ವಾಮಿ ಎನ್ನ-
೭೮ ಪಿಂಡಾಂಡದೊಳಗಿನ ಗಂಡನ ಕಾಣದೆ
೭೯ ಪುಟ್ಟಿದವೆರಡು ಜೀವನ
೮೦ ಪೂರ್ವ ಜನ್ಮದಲಿ ನಾ ಮಾಡಿದ ಪಾಪದಿಂ
೮೧ ಫಲಹಾರವನೆ ಮಾಡೊ ಪರಮ ಪುರುಷ
೮೨ ಬದುಕಿದೆನು ಬದುಕಿದೆನು ಭವದುರಿತ ಹಿಂಗಿತು
೮೩ ಬಯಲ ಬಾವಿಯ ನೀರಿಗೆ ಬಂದಳೊಬ್ಬ ಬಾಲೆ
೮೪ ಬಲ್ಲವನಾದರೆ ಈತಳ್ಳಿ ಬೇಡ
೮೫ ಬ್ರಹ್ಮಾಂಡವದೆಲ್ಲ ರೋಮಕೂಪದೊಳಿರಲು
೮೬ ಮಂದಿಯ ಗೊಡವೆ ಇನ್ನೇನು ಮಗಳೆ
೮೭ ಮನದ ಅಭಿಮಾನಿ ಮಹಾರುದ್ರನ ಭಜಿಸಲು (ಉ)
೮೮ ಮನೆಯಿಂದ ಸಂತೋಷ ಕೆಲವರಿಗೆ ಲೋಕದಲ್ಲಿ (ಉ)
೮೯ ಮಲಗಿ ಪಾಡಿದರೆ ಕುಳಿತು ಕೇಳುವನು (ಉ)
೯೦ ಮುಪ್ಪಿನ ಗಂಡನ ಒಲ್ಲೆನೆ
೯೧ ಮುಯ್ಯಕ್ಕೆ ಮುಯ್ಯ ತೀರಿತು-ಜಗ-
೯೨ ಯದುಕೃಷ್ಣ ಯಾದವಕೃಷ್ಣ ಎಂದವರಿಗೆ ಅಂತ್ಯಕಾಲದಲ್ಲಿ (ಉ)
೯೩ ರಾಗಿ ತಂದಿರಾ -ಭಿಕ್ಷಕೆ-
೯೪ ರಾಮ ಎನ್ನುವ ಎರಡು ಅಕ್ಷರದ ಮಹಿಮೆಯನು

| | |
|---|---|
| ೯೫ | ರಾಮನಾಮ ಪಾಯಸಕ್ಕೆ ಕೃಷ್ಣನಾಮ ಸಕ್ಕರೆ |
| ೯೬ | ರಾಮನಾಮಾಮೃತಕೊಂಬುವರೆಲ್ಲ |
| ೯೭ | ರಾಮ ರಾಮರಾಮ ರಾಮರಾಮನೆನ್ನಿರೊ |
| ೯೮ | ಲೇಸು ದಾಸರಿಗೆ ಕ್ಲೇಶ ದುಷ್ಟರಿಗೆ (ಉ) |
| ೯೯ | ವರಮಣಿಗಳ ಕೆತ್ತಿಸಿದ ಮುಕುಟದ ಚಾರು (ಸು) |
| ೧೦೦ | ವಾಸುದೇವನ ನಾಮಾವಳಿಯ ಕ್ಲುಪ್ತಿಯನು |
| ೧೦೧ | ಶ್ರವಣದಿಂದ ಹೋಯಿತು ಬ್ರಹ್ಮಹತ್ಯದ ಪಾಪ (ಉ) |
| ೧೦೨ | ಶಿವನೆ ದುರ್ವಾಸ ಕಾಣಿರೊ ಶಿವನೆ ಶುಕಯೋಗಿ ಕಾಣಿರೊ (ಸು) |
| ೧೦೩ | ಶ್ರೀದೇವಿಯ ಮೂರುತಿಯಲ್ಲಿ ಭೂದೇವ ಪರಿಪೂರ್ಣನೆಂದು (ಉ) |
| ೧೦೪ | ಶ್ರೀನಾರಾಯಣದೇವ ನೀನು ಶ್ರೀಲಕುಮಿಯಕೂಡ ಸುಖಿಸುತಿದ್ದು (ಸು) |
| ೧೦೫ | ಶ್ವೇತದ್ವೀಪದಲ್ಲಿ ಆ ಮುಕ್ತಸ್ಥಳದಲ್ಲಿ (ಉ) |
| ೧೦೬ | ಸಕಲಶ್ರುತಿಪುರಾಣಗಳೆಲ್ಲ ಆದಾವನ ಮಹಿಮೆ (ಉ) |
| ೧೦೭ | ಸಕಲಸಾಧನಕೆಲ್ಲ ಸಿದ್ಧಗೊಳಿಸುವುದು (ಉ) |
| ೧೦೮ | ಸಂತತ ಹನ್ನೆರಡುಕೋಟಿ ಸುವರ್ಣಪುಷ್ಪ ಸಮರ್ಪಿಸಲು (ಸು) |
| ೧೦೯ | ಸಂತತಿಯುಪ್ಪುದು ರಾಮಾಯಣವ ಕೇಳಲು (ಉ) |
| ೧೧೦ | ಸಿಕ್ಕಿದೆಯೊ ಎಲೆ ಜೀವ—ನಿನ್ನ— |
| ೧೧೧ | ಸಿರಿವಿರಿಂಚ್ಯಾದಿಗಳು ಅರಿಯದಂತಹ ಮಹಿಮೆ (ಉ) |
| ೧೧೨ | ಸುಣ್ಣವಿಲ್ಲ ಭಾಗವತರೆ |
| ೧೧೩ | ಸುಲಭವಲ್ಲವೊ ಮಹಾನಂದಾ |
| ೧೧೪ | ಹಣ್ಣುಕೊಂಬೊರು ಬನ್ನಿ ಹರಿದಾಸರು |
| ೧೧೫ | ಹಣ್ಣುಕೊಳ್ಳಿರೊ ಜನರು ಹಣ್ಣುಕೊಳ್ಳಿರೊ |
| ೧೧೬ | ಹರಿನಡೆಯದಿರಲು ನಡೆಯಲಿಲ್ಲೀಜಗವು (ಸು) |
| ೧೧೭ | ಹರಿನಿನ್ನನಾಮವ ಸ್ಮರಿಸಲು |
| ೧೧೮ | ಹರಿ ನೀಮುನಿದರೆ ಆರು ಒಲಿದೇನಮಾಡುವರು (ಉ) |
| ೧೧೯ | ಹರಿಯೆಂಬುದೇ ಲಗ್ನಬಲವು ಹರಿಯೆಂಬುದೇ ತಾರಾಬಲವು (ಉ) |
| ೧೨೦ | ಹರಿಸರ್ವೋತ್ತಮನೆಂಬ ಹಿರಿಯಪುತ್ರನಿರಲಿಕ್ಕೆ (ಉ) |
| ೧೨೧ | ಹರಿಹರಿಯೆಂದು ಕರೆಯುವುದೇ ತಡ (ಉ) |
| ೧೨೨ | ಹಾ ಕೃಷ್ಣ ! ದ್ವಾರಕಾವಾಸಿಯೆಂದೆನಲು (ಉ) |
| ೧೨೩ | ಹೀನ ಮಾನವ ಯೋನಿಯಲ್ಲಿ ಜನಿಸಿದೆನೊ ನಾನು (ಉ) |
| ೧೨೪ | ಹೃದಯ ಕಮಲದಲಿ ನಾನಿನ್ನ |
| ೧೨೫ | ಹೆತ್ತಮಕ್ಕಳು ಹುಚ್ಚರಾದರೆ (ಉ) |
| ೧೨೬ | ಹೆಜ್ಜೆ ಹೆಜ್ಜೆಗೆ ಸಾವಿರ ಸಾವಿರ ಹೊನ್ನೀವರಾಯ ರಾವುತರಾಯ (ಸು) |

# ಪರಿಶಿಷ್ಟ ೩

## ಪ್ರಮುಖ ಪದಸೂಚಿ

## ಯ



## ರ

## ಹ

## ಪಟ್ಟಣಗಳು



## ಸಂಗೀತಕೋಶ





# ದಾಸರ ಪೀಳಿಗೆ

ಶ್ರೀಪಾದರಾಯರು, (ರಂಗವಿಟ್ಠಲ) ೧೪೨೨–೧೪೮೦

ವ್ಯಾಸರಾಯರು, (ಶ್ರೀಕೃಷ್ಣ, ಕೃಷ್ಣ) ೧೪೪೭–೧೫೩೯

- ೧ ಸೀನಪ್ಪನವರು (ಪುರಂದರದಾಸರು) ೧೪೮೦–೧೫೬೪. (ಪುರಂದರವಿಟ್ಠಲ)
  - ೧ ಲಕ್ಷ್ಮಣದಾಸ
  - ೨ ಹೇಮಣದಾಸ (ಕಂಪಲಿ ತಾಮ್ರಶಾಸನ ೧೫೭೬)
  - ೩ ಮಧ್ವಪ(ತಿ)ದಾಸ
- ೨ ಕನಕದಾಸರು ೧೫೦೮ ? –೧೬೦೬ ? (ಕಾಗಿನೆಲೆ, ಬಾಡದ) ಆದಿಕೇಶವ
- ೩ ವಾದಿರಾಜರು ೧೪೮೦–೧೬೦೦ (ಹಯವದನ)

ದಾಸಪ್ಪನವರು (ವಿಜಯದಾಸರು) ೧೬೮೭–೧೭೫೫
(ವಿಜಯವಿಟ್ಠಲ)
(ಇವರು ಪುರಂದರದಾಸರಿಂದ ಕನಸಿನಲ್ಲಿ ಮುದ್ರಿಕೆ ಪಡೆದವರು)

- ೧ ಭಾಗಣ್ಣದಾಸರು ೧೬೭೨–೧೭೬೨ (ಗೋಪಾಲವಿಟ್ಠಲ)
  - ೧ ಸುಬ್ಬಣ್ಣದಾಸರು (ಕೇಶವವಿಟ್ಠಲ)
    - ಸುರಪುರದ ಆನಂದದಾಸರು (ಕಮಲೇಶವಿಟ್ಠಲ)
      - ಸಂತೇಬೆನ್ನೂರ ರಾಮದಾಸರು (ಕಮಲಾಪತಿವಿಟ್ಠಲ)
      - ಸುರಪುರದ ಭೀಮದಾಸರು (ಶ್ರೀಕೇಶವವಿಟ್ಠಲ)
  - ೨ ಸೀನಪ್ಪದಾಸರು (ಗುರುಗೋಪಾಲವಿಟ್ಠಲ)
    - ಐಜಿ ವೆಂಕಟರಾಮಾಚಾರ್ಯರು ೧೭೫೮—೧೮೦೦ (ವಾಸುದೇವವಿಟ್ಠಲ)
  - ೩ ಸುಬ್ಬಣ್ಣದಾಸರು (ವರದಗೋಪಾಲವಿಟ್ಠಲ)
  - ೪ ವೇಣೀಸೋಮಪುರದ ಕೃಷ್ಣದಾಸರು (ತಂದೆಗೋಪಾಲವಿಟ್ಠಲ)
  - ೫ ಸೀನಪ್ಪದಾಸರು [ಜಗನ್ನಾಥದಾಸರು] ೧೭೨೮—೧೮೦೯ (ಜಗನ್ನಾಥವಿಟ್ಠಲ)
    - ೧ ಕರ್ಜಗಿ ದಾಸಪ್ಪನವರು ಸು. ೧೮೨೦ (ಶ್ರೀದವಿಟ್ಠಲ)
      - ಹೊನ್ನಾಳಿ ಭೀಮೇಶದಾಸರು ಸು. ೧೮೯೦ (ಭೀಮೇಶವಿಟ್ಠಲ)
    - ೨ ಲಿಂಗಸೂರಯೋಗೀಂದ್ರದಾಸರು ಸು. ೧೮೨೨ (ಪ್ರಾಣೇಶವಿಟ್ಠಲ)
      - ಲಿಂಗಸೂರ ವೆಂಕಟದಾಸರು ಸು. ೧೮೬೦ (ಗುರುಪ್ರಾಣೇಶವಿಟ್ಠಲ)
      - ಲಿಂಗಸೂರ ರಾಮದಾಸರು ಸು. ೧೮೯೦ (ಶ್ರೀಶಪ್ರಾಣೇಶವಿಟ್ಠಲ)
      - ಕರ್ಜಗಿ ಏರಿನಾರಾಯಣಾಚಾರ್ಯರು ಸು. ೧೯೧೨ (ಸುಖನಿಧಿವಿಟ್ಠಲ)
    - ೩ ಹುಂಡೇಕಾರದಾಸರು (ಶ್ರೀಶವಿಟ್ಠಲ)
      - ಕಂಪಲಿ ನರಸಿಂಹದಾಸರು ಸು. ೧೮೬೦ ಅಥವಾ ಕುಂಟೋಜಿದಾಸರು (ಗುರುಶ್ರೀಶವಿಟ್ಠಲ)
    - ೪ ಪ್ರೇಮದಾಸರು (ಅರ್ಭಿನವಜನಾರ್ದನವಿಟ್ಠಲ)
    - ೫ ಮಾನಾಮದರೀ ದಾಸರು (ವೆಂಕಟವಿಟ್ಠಲ)
    - ೬ ಅಣ್ಣಿಗೇರಿನಾರಾಜಿರಾಯರ ಗೋಪಾಲದಾಸರು (ಗೋಪತಿವಿಟ್ಠಲ)
    - ೭ ಧಾರವಾಡದ ನಾಡಿಗ ತಮ್ಮಪ್ಪನವರು ಸು. ೧೮೦೦ (ಪ್ರಸನ್ನವಿಟ್ಠಲ)
    - ೮ ಬೂರಲದಿನ್ನಿ ನಾರಪ್ಪನವರು (ಮನೋಹರವಿಟ್ಠಲ)
    - ೯ ಜ್ಞಾನಮಯವಿಟ್ಠಲ
    - ೧೦ ಆನಂದಮಯವಿಟ್ಠಲ (ವಿಟ್ಠಲ)
    - ೧೧ ಸಿರಿವತ್ಸಾಂಕಿತ
    - ೧೨ ಕವತಾಳದಾಸರು (ಯೋಗೀಂದ್ರವಿಟ್ಠಲ)
- ೨ ಆನಂದದಾಸರು (ಹಯವದನವಿಟ್ಠಲ)
- ೩ ಮೋನಪ್ಪದಾಸರು (ಮುದ್ದುವಿಟ್ಠಲ)
- ೪ ರಾಮದಾಸರು (ರಾಮಚಂದ್ರವಿಟ್ಠಲ)
- ೫ ಪಂಗನಾಮ ತಿಮ್ಮಣ್ಣದಾಸರು ಸು. ೧೭೬೮ (ವೇಣುಗೋಪಾಲವಿಟ್ಠಲ)
  - ಕಲ್ಲೂರ ಸುಬ್ಬಣ್ಣ ದಾಸರು (ವ್ಯಾಸವಿಟ್ಠಲ)
    - ವೈರಾಗ್ಯಶಾಲಿ ತಮ್ಮಣ್ಣದಾಸರು (ರಘುಪತಿವಿಟ್ಠಲ)
    - ದಾಸಾಚಾರ್ಯರು (ಭೂವರಾಹ ರಘುಪತಿ ವಿಟ್ಠಲ)
    - ಗದ್ವಾಲಿ ಶ್ರೀಪತಿದಾಸರು ಸು. ೧೮೬೦ (ಶ್ರೀಪತಿವಿಟ್ಠಲ)
    - ಹರಪನಹಳ್ಳಿ ವೆಂಕಟದಾಸರಾಯರು ಸು. ೧೮೯೦ (ತಂದೆಶ್ರೀಪತಿವಿಟ್ಠಲ)
    - ಧಾರವಾಡದ ದೀಪದ ಅಣ್ಣಯ್ಯದಾಸರು ಸು. ೧೮೭೫ (ಶ್ರೀನಿಧಿವಿಟ್ಠಲ)
      - ೧ ಸವದೀ ರಾಮಚಂದ್ರದಾಸರು ಸು. ೧೮೭೩ (ಶ್ರೀವರವಿಟ್ಠಲ)
        - ದೊಡ್ಡಬಳ್ಳಾಪುರದ ರಾಘವೇಂದ್ರ ದಾಸರು ಸು. ೧೯೩೮ (ಮುದ್ದು ಮೋಹನವಿಟ್ಠಲ)
        - ಬಾಲಕೃಷ್ಣದಾಸರು ೧೮೮೦–೧೯೧೦ (ಬಾಲಕೃಷ್ಣವಿಟ್ಠಲ)
      - ೨ ದೀಪದ ಗೋವಿಂದ ದಾಸರು ಸು. ೧೮೮೫ (ತಂದೆ ಶ್ರೀನಿಧಿವಿಟ್ಠಲ)
      - ೩ ಕರ್ಜಗಿ ತೀರ್ಥಪ್ಪ (ತೀರ್ಥಪಾದವಿಟ್ಠಲ)
        - ನರೇಗಲ್ಲ ಬಾಳಪ್ಪನವರು (ಶ್ರೀರಮಾಪತಿವಿಟ್ಠಲ)
  - ನರಸಿಂಹ ದಾಸರು (ನರಸಿಂಹವಿಟ್ಠಲ) [ಇವರು ಜಗನ್ನಾಥದಾಸರ ತಂದೆ]
- ೬ ಕೊಂಡಲಿ ಮಧ್ವಾಚಾರ್ಯರು (ಮಧ್ವೇಶವಿಟ್ಠಲ)
- ೭ ಮೋಹನದಾಸರು (ಮೋಹನವಿಟ್ಠಲ)
  - ೧ ವಿರಜೀಪ್ರಾಣೇಶವಿಟ್ಠಲದಾಸರು (ವಿರಜೀಪ್ರಾಣೇಶವಿಟ್ಠಲ)
  - ೨ ನಂಜಿನಗೂಡದಾಸರು (ಬಾದರಾಯಣವಿಟ್ಠಲ)
- ೮ ಮೊದಲಕಲ್ಲ ಶೇಷಗಿರಿದಾಸರು ಸು. ೧೮೯೦ (ಗುರುವಿಜಯವಿಟ್ಠಲ) (ಇವರು ಕನಸಿನಲ್ಲಿ ವಿಜಯರಾಯರಿಂದ ಮುದ್ರಿಕೆ ದೊರಕಿಸಿದವರು)
- ೯ ಶೇಷಗಿರಿದಾಸರು (ಹಯಗ್ರೀವವಿಟ್ಠಲ)

ವಿ. ಸೂ. ಇವರಲ್ಲದೆ ಸ್ವಂತ ಕವಿತ್ವದ ಶಕ್ತಿಯಿಂದ ವಿಟ್ಠಲ ಮತ್ತು ಬೇರೆ ಮುದ್ರಿಕೆ ಹಾಕಿ ಹಾಡು ಮಾಡಿದ ದಾಸರು ಬಹಳ ಮಂದಿ ಇರುವರು. ಅವರಲ್ಲಿ ಬಳ್ಳಾರಿ ಜೋಯ್ಸರ ವೆಂಕಪ್ಪನವರು (ವೆಂಕಟೇಶವಿಟ್ಠಲ) [೧೮೩೩–೧೯೨೫]. ಹರಪನಹಳ್ಳಿ ರಾಮಾಚಾರ್ಯರು (ಇಂದಿರೇಶ) [ಸು. ೧೮೯೦]. ಹರಪನಹಳ್ಳಿ ಕೃಷ್ಣಾಚಾರ್ಯರು (ಗುರುಇಂದಿರೇಶ) [ಸು. ೧೮೯೦]. ಮುಂತಾದವರು ಹೆಸರುವಾಸಿಯಾಗಿದ್ದಾರೆ. ಈ ಪೀಳಿಗೆಯಲ್ಲಿ ತಪ್ಪುಗಳನ್ನು ಸರಿಪಡಿಸಿ ನನಗೆ ತಿಳಿಸಿದರೆ ಅವರ ಉಪಕಾರವನ್ನು ನಾನೆಂದಿಗೂ ಮರೆಯಲಾರೆ.

ಬೆಂಗೇರಿ ಹುಚ್ಚರಾಯರು
ಹಾವೇರಿ ೧೯೩೩

ಸಂಯುಕ್ತ ಕರ್ನಾಟಕ ಮುದ್ರಣಾಲಯ, ಹುಬ್ಬಳ್ಳಿ

## ಸ್ವಾಗತ ಸಲಹಾ ಮಂಡಳ



ಪಂಡಿತ ಶ್ರೀನಿವಾಸಾಚಾರ್ಯ ಜಾಲಿಹಾಳ
,, ವೆಂಕಣ್ಣಾಚಾರ್ಯ ಮಾಳಗಿ
,, ಮಾಣಿಕ್ಯಾಚಾರ್ಯ ರಾಯಚೂರ
ವಿದ್ಯಾರತ್ನ ರಾಘವೇಂದ್ರಾಚಾರ್ಯ ಪಂಚಮುಖಿ
,, ಪಂಡಿತ ಗುರುರಾಜಾಚಾರ್ಯ ಪಾಂಡುರಂಗಿ
,, ,, ಶ್ರೀ ಸೇತುರಾಮಾಚಾರ್ಯ ಅದ್ಯ
,, ,, ಕೆ. ಟಿ. ಪಾಂಡುರಂಗಿ, M. A.

## ಉತ್ಸವ ಮಂಡಲದ ಅಧಿಕಾರೀವರ್ಗ

### ಅಧ್ಯಕ್ಷರು

ಶ್ರೀ ಅನಂತರಾವ ಅಸುಂಡಿ,
ನಿವೃತ್ತ ಜಿಲ್ಹಾ ನ್ಯಾಯಾಧೀಶರು, ವಿಜಾಪೂರ

### ಉಪಾಧ್ಯಕ್ಷರು

ಶ್ರೀ ಗೋರೆಬಾಳ ಹಣಮಂತರಾಯರು,
ವರದೇಂದ್ರ ಸಾಹಿತ್ಯಮಂಡಲ, ಲಿಂಗಸುಗೂರು

ಶ್ರೀ ಸುಬೋಧ ರಾಮರಾಯರು,
ಸಂಪಾದಕರು "ಸುಬೋಧ", ಬೆಂಗಳೂರು

ಶ್ರೀ ಕೋಲಾರ ರಾಮರಾಯರು, M.A.,LL.B. ಬಳ್ಳಾರಿ

ಶ್ರೀ ಬಿ. ಅಶ್ವತ್ಥರಾವ, ಜಿಲ್ಹಾ ನ್ಯಾಯಾಧೀಶರು, ಬಳ್ಳಾರಿ

ಶ್ರೀ ಬಿ. ಎ. ದೇಸಾಯಿ, (ದೇಸಾಯಿ ಕಂಪನಿ) ಹುಬ್ಬಳ್ಳಿ

### ಕೋಶಾಧ್ಯಕ್ಷರು

ಡಾ. ಕಾಂತರಾವ ಕಮಲಾಪೂರ, M.B.B.S. ಧಾರವಾಡ

### ಕಾರ್ಯಾಧ್ಯಕ್ಷರು

ಶ್ರೀ ಪ. ರಾ. ಪುರೋಹಿತ, M.A.

### ಕಾರ್ಯದರ್ಶಿಗಳು

ಶ್ರೀ ಬುರ್ಲಿ ಬಿಂದುಮಾಧವ

ಶ್ರೀ [illegible]



ಶ್ರೀ ಹುಚ್ಚರಾವ ಬೆಂಗೇರಿ, M.A.,B.T.

*About the book . . . . . .*



With the publication of the present Volume, sixth & the last, under the title of ಸಂಕೀರ್ಣ ಸಂಗ್ರಹ the Utsava Samiti feels that it has fulfilled its ಸಂಕಲ್ಪ of publishing all the available compositions of Sri Purandara Dasa. . . . . . . .

The compositions in this Volume are arranged in 8 grades with appropriate headings. Some of them could have been included in the previous Volumes but for the fact that they were available later on. . . . . . . . . . . . . . .

There is an exhaustive & very illuminating introduction regarding the early life, birth place of Sri Purandara Dasa written after a critical study of the relevent published ma'erial. . . .

Notes, explanatory, references etc. make the book really useful to the reader. . . . . . .

A preface by Dr. Sarojini Mahishi, M. P. dealing with the development of Bhāgavata Dharma and its interpretation by in Kannada, Purandaradāsa's contributor to Karnatak Music and Purandaradāsa's poetic and literary achievement is also added.

**All Karnatak Purandardasa's Fourth Centenary Celebration Con mittee, Dharwar.**